# ಪ್ರಬುದ್ಧ ಕರ್ಣಾಟಕ

ಸಂಪುಟ ೫೨ ಸಂಚಿಕೆ ೨






ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೭೦

# ಲೇಖಕರಿಗೆ ಸೂಚನೆಗಳು

೧. 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟನೆಗಾಗಿ ಎಲ್ಲ ಬಗೆಯ ಲೇಖನಗಳಿಗೂ ಸ್ವಾಗತವಿದೆ. ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೆ ಅನುವಾದಗಳಾಗಿರಬಹುದು. ಅನುವಾದವಾಗಿದ್ದರೆ ಮೂಲಲೇಖಕರ ಹಾಗೂ ಲೇಖನದ ಹೆಸರನ್ನು ತಪ್ಪದೆ ಸೂಚಿಸಿದ್ದು, ಲೇಖನದ ಜೊತೆಯಲ್ಲಿಯೇ ಮೂಲಲೇಖಕರ ಅಥವಾ ಪ್ರಕಾಶಕರ ಸಮ್ಮತಿಯನ್ನು ಕಳುಹಿಸಬೇಕು.

೨. ಲೇಖನಗಳನ್ನು ಕಾಗದದ ಒಂದೇ ಮಗ್ಗುಲಿನಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಇಲ್ಲವೇ ಟೈಪ್ ಮಾಡಿರಬೇಕು. ಲೇಖನದೊಂದಿಗೆ ಲೇಖಕರ ಸಂಕ್ಷಿಪ್ತ ಪರಿಚಯವನ್ನು ಕಳುಹಿಸಿಕೊಡಬೇಕು. ಲೇಖಕರಿಗೆ ಕರಡನ್ನು ತಿದ್ದುವ ಅವಕಾಶವಿಲ್ಲದಿರುವುದರಿಂದ ಹಸ್ತಪ್ರತಿಗಳು ಯಾವ ರೀತಿಯಿಂದಲೂ ಅಸ್ಪಷ್ಟವಾಗಿರಬಾರದು; ಅಸಂಪೂರ್ಣವಾಗಿರಬಾರದು. ಲೇಖನಗಳು ಸಚಿತ್ರವಾಗಿದ್ದರೆ, ಲೇಖನದಲ್ಲಿ ಚಿತ್ರಗಳು ಇರಬೇಕಾದ ಜಾಗವನ್ನು ನಿರ್ದೇಶಿಸಿರಬೇಕು.

೩. ಲೇಖನಗಳಲ್ಲಿ, ಇಂಗ್ಲಿಷನ್ನುಳಿದ ಅನ್ಯಭಾಷೆಗಳ ಉದ್ಧರಿತ ಭಾಗಗಳು ಕನ್ನಡ ಲಿಪಿಯಲ್ಲೇ ಇರಬೇಕು. ಅಡಿ ಟಿಪ್ಪಣಿಗಳಲ್ಲಿ, ಲೇಖಕರ ಹೆಸರು, ಪುಸ್ತಕ, ಅಥವಾ ಲೇಖನಗಳ ಹೆಸರು, ಪ್ರಕಾಶಕರ ಹೆಸರು, ಸ್ಥಳ, ಪ್ರಕಟನೆಯ ವರ್ಷ ಹಾಗೂ ಸಂಬಂಧಿಸಿದ ಪುಟಸಂಖ್ಯೆ ಇವುಗಳನ್ನು ಖಚಿತವಾಗಿ ನಮೂದಿಸಿರಬೇಕು. ಮಾದರಿಗಾಗಿ ಇಲ್ಲಿ ಎರಡು ಉದಾಹರಣೆಗಳನ್ನು ಕೊಟ್ಟಿದೆ:

ನರಸಿಂಹಾಚಾರ್, ಡಿ. ಎಲ್., ಕನ್ನಡ ಗ್ರಂಥಸಂಪಾದನೆ (ಶಾರದಾಮಂದಿರ, ಮೈಸೂರು), ೧೯೬೪, ಪು. ೧೬,

... century and a half of Literary ...ctivity in Kannada,' **Kannada Stu-** ...**es**, Vol. 1, No. 2 (Mysore 1965). p. 62.

...ಸ್ಕೃತ, ತೆಲುಗು ಮತ್ತು ಹಿಂದಿ ಭಾಷೆಗಳ ...ಸಲಾಗುತ್ತದೆ. ವಿಮರ್ಶೆಗಾಗಿ ಪುಸ್ತಕಗಳನ್ನು ...ನ್ನು ಕಳುಹಿಸಬೇಕು.

...ೇಖನಗಳ ೨೫ ಪ್ರತಿಗಳನ್ನು ಒದಗಿಸಲಾಗು... ...ನ್ನು ವಹಿಸಿದರೆ ಹೆಚ್ಚಿಗೆ ಪ್ರತಿಗಳನ್ನೂ ಒದಗಿಸ... ...ಇಲ್ಲವೇ ಎಂಬುದನ್ನು ತಿಳಿಯಬಯಸುವವರು, ...? ಪಡೆಯಲಿಚ್ಛಿಸುವವರು ಸಾಕಷ್ಟು ಅಂಚೆ

...ರ್ಶೆಗಾಗಿ ಪುಸ್ತಕಗಳನ್ನು, ಸಂಪಾದಕರು, ...ಗ, ಮಾನಸಗಂಗೋತ್ರಿ, ಮೈಸೂರು-೬,

**PRABUDDHA KARNATAKA**, Kannada Quarterly of the *University of Mysore*. Volume 52, Number 2, July 1970. Edited by C. P. Krishna Kumar and T. V. Venkatachala Sastry.





ಪ್ರಧಾನ ಸಂಪಾದಕರು

ಡಾ. ಎಚ್. ಮಾನಸ್ಪ ನಾಯಕ

ಸಂಪಾದಕರು

ಸಿ. ಪಿ. ಕೃಷ್ಣಕುಮಾರ್

ಟಿ. ವಿ. ವೆಂಕಟಾಚಲ ಶಾಸ್ತ್ರೀ

ಪ್ರಕಾಶಕರು

ಡಾ. ಪ್ರಭುಶಂಕರ

ಡೈರೆಕ್ಟರ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ



ಮುದ್ರಕರು

ಎಚ್. ನರಸಣ್ಣ

ಡೆಪ್ಯೂಟಿ ಡೈರೆಕ್ಟರ್, ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ

# ವಿಷಯ ಸೂಚಿಕೆ

## ಈ ಸಂಚಿಕೆಯ ಲೇಖಕರು

ಶ್ರೀಯುತರಾದ

| | | |
|---|---|---|
| ೧. | 'ಇಂ' | ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪದವೀಧರೆ ಕೆ. ಪಿ. ಇಂದುಕಲಾ |
| ೨. | ಎಂ. ಪಿ. ವಸಂತಕುಮಾರ್ | ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |
| ೩. | ಎಂ. ಆರ್. ನರಸಿಂಹನ್ | ಬೆಂಗಳೂರಿನ ಒಬ್ಬ ಲೇಖಕರು |
| ೪. | ಪಿ. ಎಸ್. ಲೀಲಾವತಿ | ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ. ಎ. ಪದವೀಧರೆ |
| ೫. | ಕೆ. ಎನ್. ಶಿವತೀರ್ಥನ್ | ಮೈಸೂರಿನ ಬನುಮಯ್ಯ ಕಾಲೇಜಿನ ಕನ್ನಡ ಅಧ್ಯಾಪಕರು |
| ೬. | ಏರ್ಯ ಲಕ್ಷ್ಮೀನಾರಾಯಣ ಆಳ್ವ | ದಕ್ಷಿಣ ಕನ್ನಡದ ಒಬ್ಬ ತರುಣ ಲೇಖಕರು |
| ೭. | ತೀರ್ಥಹಳ್ಳಿ ಜೈಪ್ರಕಾಶ | ತೀರ್ಥಹಳ್ಳಿಯ ಪ್ರಥಮದರ್ಜೆ ಕಾಲೇಜಿನಲ್ಲಿ ತೃತೀಯ ಬಿ. ಎ. ವಿದ್ಯಾರ್ಥಿ |
| ೮. | ಎ. ವಿ. ನರಸಿಂಹಮೂರ್ತಿ | ಮಾನಸ ಗಂಗೋತ್ರಿಯ ಇತಿಹಾಸ ಮತ್ತು ಪುರಾತತ್ವ ವಿಭಾಗದಲ್ಲಿ ರೀಡರ್ |
| ೯. | ಎನ್. ಕೃಷ್ಣಮುಕಾರಿ | ಮಂಗಳೂರಿನ ಪ್ರಧಾನ ಅಂಚೆ ಕಛೇರಿಯಲ್ಲಿ ಉದ್ಯೋಗಸ್ಥರು |
| ೧೦. | ಎಂ. ಜಿ. ನಂಜುಂಡಾರಾಧ್ಯ | ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಪ್ರಾಧ್ಯಾಪಕರು |
| ೧೧. | ಮೈಲಾರಗೌಡ ಪಾಟೀಲ | ಒಬ್ಬರು ವಿದ್ವಾಂಸರು |
| ೧೨. | 'ಕನ್ನಡ ಕುವರ' | ಮೈಸೂರಿನ ಮಹಾರಾಜಾ ಕಾಲೇಜಿನ ವಿದ್ಯಾರ್ಥಿ, ಜಗದೀಶ್ |
| ೧೩. | ಗಜಾನನ ಈಶ್ವರ ಹೆಗಡೆ | ಸಿರಿಗೆರೆಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |
| ೧೪. | ರಾಮಚಂದ್ರ | ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಥಮ ಎಂ. ಎ. ವಿದ್ಯಾರ್ಥಿ, ಎಚ್. ಎಸ್. ರಾಮಚಂದ್ರೇಗೌಡ |
| ೧೫. | ಹ. ಕ. ರಾಜೇಗೌಡ | ಕನ್ನಡ ಅಧ್ಯಯನ ಸಂಸ್ಥೆಯ ಗ್ರಂಥ ಸಂಪಾದನ ವಿಭಾಗದಲ್ಲಿ ಸಂಶೋಧಕರು |

| | |
|---|---|
| ೧೬. ಕೊವಾನಾ | ವಿದ್ಯಾರ್ಥಿ ಕವಿ ಕೆ. ವಿ. ನಾಗಭೂಷಣರಾವ್ |
| ೧೭. ಎಚ್. ಎಸ್. ಬಿಳಿಗಿರಿ | ಮೈಸೂರಿನ ಭಾರತೀಯ ಭಾಷಾ ಸಂಸ್ಥೆಯ ಉಪ ನಿರ್ದೇಶಕರು |
| ೧೮. ಎಸ್. ಎನ್. ಕೃಷ್ಣಜೋಯಿಸ್ | ಕನ್ನಡ ಅಧ್ಯಯನ ಸಂಸ್ಥೆಯ ಗ್ರಂಥ ಸಂಪಾದನ ವಿಭಾಗದಲ್ಲಿ ಸಂಶೋಧಕರು |
| ೧೯. ಸಂಗಮನಾಥ ಜಿ. ಹಂಡಿ | ಬಿಜಾಪುರದ ಸಂಗನ ಬಸವೇಶ್ವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |
| ೨೦. ಶ್ರೀನಂತ | ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ವಿಭಾಗದಲ್ಲಿ ಕನ್ನಡ ಅಧ್ಯಾಪಕರಾದ ಎನ್. ತಪಸ್ವೀಕುಮಾರ್ |
| ೨೧. ಜಿ. ವಿ. ಡಿ. | ಕಾಳಮುದ್ದನದೊಡ್ಡಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾದ ಜಿ. ವಿ. ದಾಸೇಗೌಡ |
| ೨೨. ಕೆ. ರಾಘವೇಂದ್ರರಾವ್ | ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು |

**ಹರಿಪಾದ ಮಿತ್ರ**



# ಸ್ವಾಮಿ ವಿವೇಕಾನಂದರ ಕೆಲವು ಸ್ಮೃತಿಗಳು

೧

ಪ್ರಿಯ ಓದುಗರೆ, ಸ್ವಾಮಿ ವಿವೇಕಾನಂದರನ್ನು ಕುರಿತ ನನ್ನ ಕೆಲವು ಪುಟಗಳ ಸ್ಮರಣೆಯನ್ನು ಓದಿ ಆನಂದಿಸಲು ಬಯಸಿದರೆ, ಸ್ವಾಮಿಜಿಯನ್ನು ಸಂಧಿಸುವ ಮುನ್ನ ನಾನು ಎಂಥ ಮನುಷ್ಯನಾಗಿದ್ದೆ, ಧರ್ಮದ ಬಗ್ಗೆ ನನ್ನ ಕಲ್ಪನೆಗಳೇನು ಎಂಬುದನ್ನೂ ನನ್ನ ವಿದ್ಯಾಭ್ಯಾಸ ಮತ್ತು ಸ್ವಭಾವವನ್ನೂ ಸ್ಥೂಲವಾಗಿ ಪರಿಚಯ ಮಾಡಿಕೊಡುವವರೆಗೂ ನೀವು ಸ್ವಲ್ಪ ಹೊತ್ತು ಸಹಿಸಬೇಕು. ನಿಮಗೆ ಈ ಹಿನ್ನೆಲೆ ಇಲ್ಲದಿದ್ದರೆ ನಾನು ಸ್ವಾಮಿಜಿಯ ಸಂಗದಿಂದ ಪಡೆದದ್ದಾದರೂ ಏನು ಎಂಬುದನ್ನು ತಿಳಿಯಲಾರಿರಿ. ನಾನು ಎಂಟ್ರೆನ್ಸ್ ಪರೀಕ್ಷೆಯನ್ನು ಪಾಸುಮಾಡುವವರೆಗೂ ನನಗೆ ಧರ್ಮದ ಬಗ್ಗೆ ಲವಲೇಶವೂ ಆಸಕ್ತಿಯಿರಲಿಲ್ಲ. ನಾನು ನಾಲ್ಕನೆಯ ತರಗತಿಗೆ ಬಂದಾಗ ಅಲ್ಪಸ್ವಲ್ಪ ಇಂಗ್ಲಿಷಿನ ಜ್ಞಾನವನ್ನು ಪಡೆದೆ. ಆಗ ನಮ್ಮ ಕಾಲದ ಹಿಂದೂಧರ್ಮದ ಬಗ್ಗೆ ನನಗೆ ತೀವ್ರ ಜುಗುಪ್ಸೆ ಉಂಟಾಯಿತು. ನಾನು ಯಾವ ಕ್ರೈಸ್ತಶಾಲೆಯಲ್ಲಿ ಓದಿರದಿದ್ದರೂ, ಎಂಟ್ರೆನ್ಸ್ ಪರೀಕ್ಷೆಯಲ್ಲಿ ಪಾಸಾದ ಮೇಲೆ ನಾನು ತಿಳಿದಿದ್ದ ಹಿಂದೂಧರ್ಮವನ್ನು ಒಪ್ಪುವುದು ನನಗೆ ಅಸಾಧ್ಯ ವಾಯಿತು. ಅದಕ್ಕಾಗಿಯೆ ೧೯ರಿಂದ ೨೫ ವರ್ಷಗಳ ಅಂತರದ ನನ್ನ ಕಾಲೇಜಿನ ದಿನಗಳಲ್ಲಿ ನಾನು ಭೌತಶಾಸ್ತ್ರ, ರಸಾಯನಶಾಸ್ತ್ರ, ಸಸ್ಯಶಾಸ್ತ್ರ ಮತ್ತು ವಿಜ್ಞಾನದ ಇತರ ಶಾಖೆಗಳನ್ನು ಸ್ವಲ್ಪಸ್ವಲ್ಪ ಓದಿದೆ. ಆಗಲೆ ಪಾಶ್ಚಾತ್ಯಚಿಂತಕರಾದ ಡಾರ್ವಿನ್, ಮಿಲ್, ಹಕ್ಸಲೆ, ಟೈನ್‌ಡಾಲ್ ಮತ್ತು ಸ್ಪೆನ್ಸರ್ ಮೊದಲಾದವರ ಸ್ವಲ್ಪ ಪರಿಚಯವನ್ನು ಪಡೆದೆ. ಇದರ ಪರಿಣಾಮವಾಗಿ,—ಈ ಅರೆಬರೆ ಜೀರ್ಣವಾದ ಜ್ಞಾನದಿಂದ ಮತ್ತೇನನ್ನು ತಾನೆ ನಿರೀಕ್ಷಿಸಬಹುದು–ನಾನು ಪರಮ ನಾಸ್ತಿಕನಾದೆ. ಯಾವುದರಲ್ಲಿಯೂ ನಂಬಿಕೆ ಇಡಲಿಲ್ಲ; ದೈವಭಕ್ತಿ ಎಂದರೆ ನನಗೆ ಏನೂ ತಿಳಿಯದು. ಮನಸ್ಸಿನಲ್ಲಿಯೆ ಎಲ್ಲ ಧರ್ಮಗಳನ್ನು ಖಂಡಿಸಿದೆ; ಬೌದ್ಧಿಕವಾಗಿ ಇತರರೆಲ್ಲಾ ನನಗಿಂತ ಕೀಳು ಎಂದು ಭಾವಿಸಿದೆ.

ಈ ಸಮಯದಲ್ಲಿ ಕ್ರೈಸ್ತಪಾದ್ರಿಗಳು ನನ್ನನ್ನು ಪದೇಪದೇ ಸಂಧಿಸಲು

ತೊಡಗಿದರು. ನಾನು ಇತರ ಧರ್ಮಗಳನ್ನೆಲ್ಲಾ ಖಂಡಿಸುತ್ತಿರುವಾಗ, ಶ್ರದ್ಧೆಯೆ ಕ್ರೈಸ್ತಧರ್ಮದ ಸಾರ ಎಂಬುದನ್ನು ತೀಕ್ಷ್ಣವಾದ ಬೌದ್ಧಿಕ ತಾರ್ಕಿಕತೆಯಿಂದ ನನ್ನ ಮುಂದೆ ಹೀಗೆ ಪ್ರತಿಪಾದಿಸುತ್ತಿದ್ದರು: ಕ್ರೈಸ್ತಧರ್ಮದಲ್ಲಿ ನಾವು ಶ್ರದ್ಧೆಯಿಂದಲೆ ಹೊರಡಬೇಕು; ಆಗ ಮಾತ್ರ ಅದರ ಅನುಪಮತೆ ಮತ್ತು ಇತರ ಧರ್ಮಗಳಿಗಿಂತ ಮಿಗಿಲಾದ ಅದರ ಅತಿಶಯತೆಯನ್ನು ನಾವು ಮೆಚ್ಚುತ್ತೇವೆ. ಆದರೆ ಈ ವಿಲಕ್ಷಣ ದೃಷ್ಟಿ ಮತ್ತು ಪಾಂಡಿತ್ಯ ನನ್ನನ್ನು ಪರಿವರ್ತಿಸಲಾರದೆ ಹೋದವು. ಆಗ ನಾನು ನಾಸ್ತಿಕತೆಯನ್ನು ಪ್ರತಿಜ್ಞೆಯನ್ನಾಗಿಯೆ ಕೈಕೊಂಡಿದ್ದೆ. ಪಾಶ್ಚಾತ್ಯ ವಿದ್ಯಾಭ್ಯಾಸ "ಸಾಕ್ಷಿ ಇಲ್ಲದೆ ಏನನ್ನೂ ನಂಬಬೇಡ" ಎಂಬುದನ್ನು ನನಗೆ ಕಲಿಸಿತ್ತು. ಇತ್ತಲಾಗಿ ಪಾದ್ರಿಗಳು ಹೇಳಿದರು: 'ಮೊದಲು ಶ್ರದ್ಧೆ, ತದನಂತರ ನಿದರ್ಶನ'. ನನ್ನ ಮನಸ್ಸು ಸಂದಿಗ್ಧವಾಗಿತ್ತು. ಆಗ ಅವರು ಹೇಳಿದರು: "ನೀನು ಬೈಬಲ್ಲನ್ನು ಗಮನವಿಟ್ಟು ಓದು, ಆಮೇಲೆ ನಿನಗೆ ಶ್ರದ್ಧೆ ಉಂಟಾಗುತ್ತದೆ." ನಾನು ಆ ಆದೇಶವನ್ನು ಪಾಲಿಸಿದೆ. ಅನೇಕ ಜನ ಪ್ರತಿಷ್ಠಿತ ಪಾದ್ರಿಗಳು ನನ್ನ ಸಹಾಯಕ್ಕೆ ಬಂದದ್ದು ನನ್ನ ಅದೃಷ್ಟ. ಆದರೂ ಶ್ರದ್ಧೆ ನನ್ನಿಂದ ಬಹುದೂರದಲ್ಲೆ ಉಳಿದಿತ್ತು. ಆದಾಗ್ಯೂ ಅವರಲ್ಲಿ ಕೆಲವರು ಹೇಳಿದರು: ನಾನು ಗಮನಾರ್ಹ ರೀತಿಯಲ್ಲಿ ಮುಂದುವರಿದಿದ್ದೇನೆ; ಕ್ರೈಸ್ತಧರ್ಮದ ಸಾರವೆಲ್ಲಾ ಹೃದಯಕ್ಕೆ ನಾಟಿದೆ; ಆದರೆ ನನ್ನ ಸಾಂಪ್ರದಾಯಿಕತೆ ನಾನು ಪರಿವರ್ತನೆ ಹೊಂದಲು ಅಡ್ಡಿಯಾಗಿದೆ. ಇದರ ಪರಿಣಾಮವೆಂದರೆ ನನ್ನ ಸಂದೇಹದ ಬಗ್ಗೆಯೆ ನನಗೆ ಸಂಶಯ ಪ್ರಾರಂಭವಾಯಿತು. ಈ ಇಕ್ಕಟ್ಟಿನಿಂದ ಪಾರಾಗಲು ಹೀಗೆ ಮಾಡಬೇಕೆಂದು ಅವರು ಸಲಹೆ ಮಾಡಿದರು: ನಾನು ಹತ್ತು ಪ್ರಶ್ನೆಗಳನ್ನು ಕೇಳಬೇಕು. ಅವರು ಸಮರ್ಪಕ ಉತ್ತರ ನೀಡುತ್ತಾರೆ. ಪ್ರತಿ ಪ್ರಶ್ನೆಗೂ ತೃಪ್ತಿಕರ ಉತ್ತರ ನೀಡಿದ ಮೇಲೆ, ಅದರ ಮೇಲೆ ನನ್ನ ಹಸ್ತಾಕ್ಷರ ಹಾಕಿಸಿಕೊಳ್ಳುವುದು. ಹಾಗೆ ಹತ್ತು ಪ್ರಶ್ನೆಯನ್ನೂ ತೃಪ್ತಿಕರವಾಗಿ ಬಗೆಹರಿಸಿದ ಮೇಲೆ ನಾನು ಕ್ರಿಸ್ತಮತ ಅನುಸರಿಸಬೇಕು. ಆದರೆ ಮೂರನೆಯ ಪ್ರಶ್ನೆ ಇತ್ಯರ್ಥವಾಗುತ್ತಿದ್ದಂತೆ, ನಾನು ಕಾಲೇಜನ್ನು ಬಿಟ್ಟು ಜೀವನ ರಂಗವನ್ನು ಪ್ರವೇಶಿಸಿದೆ. ಆಮೇಲೂ ಧಾರ್ಮಿಕ ಸಾಹಿತ್ಯ ಓದುವುದು, ಪದೇ ಪದೇ ಪೂಜಾಸ್ಥಾನಗಳಾದ ಚರ್ಚುಗಳು, ದೇವಸ್ಥಾನಗಳು, ಬ್ರಹ್ಮಸಮಾಜದ ಪ್ರಾರ್ಥನಾಸಭೆಗಳಿಗೆ ಹೋಗುವುದನ್ನು ಮುಂದುವರಿಸುತ್ತಿದ್ದೆ. ಆದರೆ ನನ್ನದೇ ಆದ ಒಂದು ದಾರಿಯನ್ನು ಕಂಡುಕೊಳ್ಳಲಾರದವನಾದೆ. ಕೊನೆಗೆ ಈ ನಿರ್ಧಾರಕ್ಕೆ ಬಂದೆ: ಆತ್ಮದ ಬಗ್ಗೆಯಾಗಲಿ ಅಥವಾ ಸಾವಿನ ಅನಂತರದ ಅದರ ಅಸ್ತಿತ್ವದ ಬಗ್ಗೆಯಾಗಲಿ ಖಂಡಿತವಾಗಿಯೂ ಯಾರಿಗೂ ಏನೂ ಗೊತ್ತಿಲ್ಲ. ಆದರೆ ಈ ಬದುಕಿನಲ್ಲಿ ಶಾಂತಿಯನ್ನು ಪಡೆಯಲು ಯಾವುದಾದರೂ ಮತವನ್ನು ಆಶ್ರಯಿಸಬೇಕಾಗುತ್ತದೆ; ಅದು ಯಾವುದು ಬೇಕಾದರೂ ಆಗಿರಬಹುದು; ನಮ್ಮ ಅಭ್ಯಾಸ ಬಲದಿಂದ ಒಂದು ನಿರ್ದಿಷ್ಟ ಮತವು ನಮಗೆ ಒಗ್ಗಿರುತ್ತದೆ. ವಸ್ತುತಃ ಯಾವ

ಮತವನ್ನಾಗಲಿ ಯಾರೂ ತರ್ಕಬದ್ಧವಾಗಿ ಸಮರ್ಥಿಸಲು ಅಥವಾ ನಿರಾಕರಿಸಲು ಆಗುವುದಿಲ್ಲ. ಅದೃಷ್ಟ ನನಗೆ ಒಲಿಯಿತು; ಕೈತುಂಬ ಸಂಬಳ ಬರುವ ಕೆಲಸ ದೊರಕಿತು. ನೆಮ್ಮದಿಯ ಜೀವನ ನಡೆಸುತ್ತಿದ್ದೆ. ಆದರೂ ಏನೋ ಒಂದು ಅಸ್ಪಷ್ಟ ಬಯಕೆ ನನ್ನನ್ನು ಪೀಡಿಸುತ್ತಿತ್ತು; ಹಾಗೆಯೆ ದಿನಗಳು, ತಿಂಗಳುಗಳು, ವರ್ಷಗಳು ಉರುಳಿದವು.

೧೮೯೨ನೇ ಇಸವಿ ಅಕ್ಟೋಬರ್ ೧೮ನೇ ತಾರೀಖು ಮಂಗಳವಾರ; ಬೆಳಗಾಂ: ಸಾಯಂಕಾಲವಾಗಿ ಎರಡು ಗಂಟೆ ಕಳೆದಿತ್ತು. ಅದೇ ಬಡಾವಣೆಯಲ್ಲಿದ್ದ ನನ್ನ ವಕೀಲ ಮಿತ್ರರೊಂದಿಗೆ ಪ್ರಸನ್ನವದನದ ಧೀರ ತರುಣ ಸಂನ್ಯಾಸಿಯೊಬ್ಬರು ಆಗಮಿಸಿದರು. ಸ್ನೇಹಿತರು ಹೀಗೆ ಪರಿಚಯಿಸಿಕೊಟ್ಟರು: "ನಿಮ್ಮನ್ನು ಕಾಣಲು ಬಂದಿರುವ ವಿದ್ಯಾವಂತ ಬಂಗಾಳಿ ಸಂನ್ಯಾಸಿ, ಇವರೇ." ನಾನು ಹಿಂದಕ್ಕೆ ತಿರುಗಿದೆ. ಮಿಂಚಿನಂತೆ ಹೊಳೆಯುತ್ತಿರುವ ಕಣ್ಣುಗಳ, ಮುಖ ಕ್ಷೌರದಿಂದ ಶುಭ್ರವಾದ ಮುಖದ ಪವಿತ್ರಾಕೃತಿಯನ್ನು ಕಂಡೆ. ಅವರ ದೇಹ ಕಾವಿಬಣ್ಣದ ನಿಲುವಂಗಿಯಿಂದ ಮುಚ್ಚಿತ್ತು. ಕಾಲಿಗೆ ಮಹಾರಾಷ್ಟ್ರ ಮಾದರಿಯ ಮರದ ಪಾದುಕೆಗಳನ್ನು ಹಾಕಿಕೊಂಡಿದ್ದರು; ತಲೆಗೆ ಕಾವಿ ಪೇಟ ಸುತ್ತಿದ್ದರು. ಅವರ ಆಕಾರ ಎಷ್ಟೊಂದು ಆಕರ್ಷಕವಾಗಿದ್ದಿತೆಂದರೆ, ಅದು ಇನ್ನೂ ನನ್ನ ಸ್ಮೃತಿಯಲ್ಲಿ ಅಷ್ಟೊಂದು ಸ್ಫುಟವಾಗಿ ಉಳಿದಿದೆ. ಏಕೆ ಹೀಗಾಗುತ್ತದೆಂದು ನನಗೆ ಅಂದು ತಿಳಿಯದಿದ್ದರೂ ಅದು ನನ್ನನ್ನು ಪ್ರಸನ್ನಗೊಳಿಸಿ ಸೆಳೆಯಿತು. ಸ್ವಲ್ಪಹೊತ್ತಾದ ಮೇಲೆ ನಾನು ಅವರಿಗೆ ನಮಸ್ಕರಿಸಿ ಹೇಳಿದೆ: "ಸ್ವಾಮಿ, ತಾವು ಸೇದುವಿರಾ? ನಾನು ಕಾಯಸ್ಥ; ನನ್ನ ಹತ್ತಿರ ಇರುವುದು ಒಂದೇ ಒಂದು ಹುಕ್ಕ; ಅದರಲ್ಲಿ ಸೇದಲು ನಿಮ್ಮದೇನೂ ಅಡ್ಡಿಯಿಲ್ಲದಿದ್ದರೆ, ನಾನು ಸ್ವಲ್ಪ ಹೊಗೆಸೊಪ್ಪನ್ನು ಸಿದ್ಧಪಡಿಸಿಕೊಡುತ್ತೇನೆ." ಅವರು ಉತ್ತರಿಸಿದರು: "ಏನು ಕೊಟ್ಟರೂ ಸೇದುತ್ತೇನೆ—ಹೊಗೆಸೊಪ್ಪು, ಹುಕ್ಕ ಅಥವಾ ಸಿಗರೇಟು. ನಿನ್ನ ಹುಕ್ಕದಿಂದ ಸೇದಲು ನನ್ನದೇನೂ ಆಕ್ಷೇಪಣೆಯಿಲ್ಲ." ನಾನು ಸ್ವಲ್ಪ ಹೊಗೆಸೊಪ್ಪಿಗೆ ಅಪ್ಪಣೆ ಮಾಡಿದೆ.

ಆ ಸಮಯದಲ್ಲಿ ಕಾವಿಬಟ್ಟೆ ತೊಟ್ಟ ಸಂನ್ಯಾಸಿಗಳೆಲ್ಲರೂ ವಂಚಕರೆಂಬುದೇ ನನ್ನ ನಂಬಿಕೆ. ಸ್ವಾಭಾವಿಕವಾಗಿಯೆ, ಇವರೂ ಸಹ ಯಾವುದೋ ಉದ್ದೇಶ ದಿಂದಲೆ ನನ್ನಲ್ಲಿಗೆ ಬಂದಿರಬೇಕೆಂದು ಭಾವಿಸಿದೆ. ಅಲ್ಲದೆ ನನ್ನ ವಕೀಲಿ ಸ್ನೇಹಿತರು ಮಹಾರಾಷ್ಟ್ರದವರು; ಇವರು ಬಂಗಾಳಿಗಳು; ಮಹಾರಾಷ್ಟ್ರದವರ ಜೊತೆ ಯಲ್ಲಿರಲು ಬಂಗಾಳಿಗಳಿಗೆ ಅನನುಕೂಲವಾಗುತ್ತದೆ; ಅದಕ್ಕಾಗಿಯೆ ಇವರು ನನ್ನ ಜೊತೆಯಲ್ಲಿ ಇರಲು ಬಂದಿರಬೇಕು; ನನ್ನ ಮನದಲ್ಲಿ ಏಳುತ್ತಿದ್ದ ಇಂತಹ ಆಲೋಚನೆಗಳನ್ನೆಲ್ಲಾ ಬದಿಗಿಟ್ಟು, ನನ್ನಲ್ಲಿ ತಂಗಲು ಆಹ್ವಾನಿಸಿದೆ. ಅವರ ಸರಕನ್ನು ನನ್ನ ಮನೆಗೆ ತೆಗೆದುಕೊಂಡು ಬರಲೆ ಎಂದು ಕೇಳಿದೆ. ಅವರು

ಉತ್ತರಿಸಿದರು: “ಈ ವಕೀಲರ ಮನೆಯಲ್ಲಿ ನಾನು ಸುಖವಾಗಿಯೆ ಇದ್ದೇನೆ. ನನಗೆ ಒಬ್ಬ ಬಂಗಾಳಿ ದೊರಕಿದ ಎಂಬಷ್ಟು ಮಾತ್ರಕ್ಕೆ ನಾನು ಅವರನ್ನು ಬಿಟ್ಟುಬಂದರೆ, ಅವರು ನೊಂದುಕೊಳ್ಳಬಹುದು. ಏಕೆಂದರೆ ಅವರೆಲ್ಲಾ ನನ್ನನ್ನು ತುಂಬ ವಿಶ್ವಾಸ ಗೌರವಗಳಿಂದ ಕಾಣುತ್ತಾರೆ; ಆದರೆ ಇದನ್ನು ಯೋಚಿಸಿ, ಕೊನೆಗೆ ಹೇಳುತ್ತೇನೆ.” ಆ ರಾತ್ರಿ ನಾವು ಅಷ್ಟೊಂದು ಮಾತುಕತೆ ನಡೆಸಲಿಲ್ಲ. ಆದರೆ ಅವರು ಆಡಿದ ಕೆಲವೇ ಮಾತುಗಳು, ಅವರು ನನಗಿಂತ ಹೆಚ್ಚು ಕಲಿತವರು, ಬುದ್ಧಿವಂತರು ಎಂಬ ಭಾವನೆಯನ್ನು ಉಂಟುಮಾಡಿದುವು. ಅವರು ಇಷ್ಟಪಟ್ಟಿದ್ದರೆ, ಸಾಕಷ್ಟು ಸಂಪಾದಿಸ ಬಹುದಾಗಿತ್ತು; ಆದರೆ ಹಣವನ್ನು ಮುಟ್ಟಲಿಲ್ಲ. ತೃಪ್ತಿಯಾಗುವಷ್ಟು ಸಂಪತ್ತು ಅವರಲ್ಲಿ ಇಲ್ಲದಿದ್ದರೂ, ವಾಸ್ತವವಾಗಿ ನನಗಿಂತ ನೂರರಷ್ಟು ಸುಖಿಗಳಾಗಿದ್ದರು, ಅವರು. ಯಾವುದೇ ರೀತಿಯ ವೈಯಕ್ತಿಕ ಲಾಭಗಳಿಕೆ ಯೋಚನೆಯೂ ಅವರಲ್ಲಿ ಇಲ್ಲವಾದ್ದರಿಂದ, ಅವರಿಗೆ ಆಸೆಗಳೆಂಬುದೇ ಇಲ್ಲವೆಂಬುದು ನನ್ನ ಹೃದಯಕ್ಕೆ ಆಳವಾಗಿ ತಟ್ಟಿತು. ಅವರು ನಮ್ಮ ಮನೆಗೆ ಬರುವುದಿಲ್ಲ ಎಂದು ಗೊತ್ತಾದಾಗ ನಾನು ಹೇಳಿದೆ: “ನಿಮ್ಮದೇನೂ ಅಡ್ಡಿ ಇಲ್ಲದಿದ್ದರೆ, ನನ್ನ ಜೊತೆ ಟೀ ಸ್ವೀಕರಿಸಲು ನೀವು ಬೆಳಗ್ಗೆ ಇಲ್ಲಿಗೆ ಬರುವುದಾದರೆ, ನನಗೆ ತುಂಬ ಸಂತೋಷವಾಗುತ್ತದೆ.” ಅವರು ಒಪ್ಪಿಗೆ ನೀಡಿ, ವಕೀಲರೊಂದಿಗೆ ಹಿಂತಿರುಗಿದರು. ರಾತ್ರಿ ನಾನು ಬಹಳ ಹೊತ್ತಿನವರೆಗೂ ಅವರನ್ನೆ ಕುರಿತು ಯೋಚಿಸುತ್ತಿದ್ದೆ; ಆಸೆಗಳಿಂದ ಪೂರ್ಣವಾಗಿ ಬಿಡುಗಡೆ ಹೊಂದಿರುವ, ಅಷ್ಟೊಂದು ಆನಂದಿತರೂ ಸಂತೃಪ್ತರೂ ಆದ ಅಂತಹ ಮಂದಸ್ಮಿತವದನದ ವ್ಯಕ್ತಿಯನ್ನು ನಾನು ಹಿಂದೆಂದೂ ಸಂಧಿಸಿರಲಿಲ್ಲ. ಹಣವೆ ಇಲ್ಲದ ವ್ಯಕ್ತಿ ಈ ಲೋಕದಿಂದ ಹೊರಟುಹೋಗುವುದೇ ಕ್ಷೇಮಕರ; ಇನ್ನು ಸಂನ್ಯಾಸಿಯಾದವನು ನಿಜವಾಗಿಯೂ ಆಸೆಗಳಿಂದ ಬಿಡುಗಡೆ ಹೊಂದಿರುವುದು ಅಸಾಧ್ಯ ಎಂದು ನಾನು ಭಾವಿಸಿದ್ದೆ. ಆದರೆ ಆ ನಂಬಿಕೆಗೆ ಈ ದಿನ ಆಘಾತ ವಾಯಿತು; ಅದು ಕುಸಿದುಹೋಯಿತು.

೧೮೯೨ನೇ ಇಸವಿ ಅಕ್ಟೋಬರ್ ೧೯: ನಾನು ಬೆಳಗ್ಗೆ ಆರುಗಂಟೆಯಿಂದಲೂ ಸ್ವಾಮಿಜಿಗಾಗಿ ಕಾಯುತ್ತಿದ್ದೆ. ಎಂಟು ಗಂಟೆಯೂ ಹೊಡೆಯಿತು. ಆಮೇಲೆ ಇನ್ನು ಹೆಚ್ಚುಹೊತ್ತು ಕಾಯದಾದೆ. ನನ್ನ ಮಿತ್ರರೊಂದಿಗೆ ಸ್ವಾಮಿಜಿ ಇದ್ದ ಸ್ಥಳಕ್ಕೆ ಹೋದೆ. ಅಲ್ಲಿ ಸ್ವಾಮಿಜಿ ಗೌರವಾನ್ವಿತ ವಕೀಲರು ಮತ್ತು ಇತರ ವಿದ್ವಾಂಸರ ನೆರವಿಯ ಮಧ್ಯದಲ್ಲಿ ಸಂಭಾಷಿಸುತ್ತಾ ಕುಳಿತಿದ್ದರು. ಅವರ ಪ್ರಶ್ನೆಗಳಿಗೆ ಸ್ವಾಮಿಜಿ ಸ್ವಲ್ಪವೂ ಹಿಂಜರಿಯದೆ ಉತ್ತರಿಸುತ್ತಿದ್ದರು; ಕೆಲವೊಮ್ಮೆ ಇಂಗ್ಲಿಷಿನಲ್ಲಿ ಮತ್ತೆ ಕೆಲವು ವೇಳೆ ಹಿಂದಿ ಅಥವಾ ಸಂಸ್ಕೃತದಲ್ಲಿ. ಅಲ್ಲಿಯೂ ಸಹ ಹಕ್ಸ್‌ಲಿಯ ತತ್ತ್ವಗಳನ್ನೆ ತಮ್ಮ ಬೈಬಲ್ ಎಂದು ಭಾವಿಸಿದ್ದ ನನ್ನಂತಹ ಜನರು ಇದ್ದರು. ಆ ಆಧಾರದ ಮೇಲೆ ಸ್ವಾಮಿಜಿಯವರೊಂದಿಗೆ ಅವರು ವಾದಿಸ ತೊಡಗಿದರು. ಆದರೆ ಸ್ವಾಮಿಜಿ ಪರಿಹಾಸ್ಯದ ಪ್ರತ್ಯುತ್ತರದಿಂದಲೋ, ಗಂಭೀರ

ವಿವರಣೆಯಿಂದಲೊ ಅವರನ್ನೆಲ್ಲಾ ಸುಮ್ಮನಾಗಿಸುತ್ತಿದ್ದರು. ಸ್ವಾಮಿಜಿಗೆ ನಮಸ್ಕರಿಸಿ ಕುಳಿತ ಮೇಲೆ ನಾನು ಯೋಚಿಸತೊಡಗಿದೆ: "ಇವರೇನು ಮನುಷ್ಯರೊ ಅಥವಾ ದೇವತೆಯೊ ?" ಆದ್ದರಿಂದ, ನಾನು ಕೇಳಿದ್ದನ್ನೆಲ್ಲಾ ನೆನಪಿಸಿಕೊಳ್ಳಲಾರೆ; ನನ್ನ ನೆನಪಿಗೆ ಬರುವ ಕೆಲವು ಮಾತುಗಳನ್ನು ಮಾತ್ರ ಇಲ್ಲಿ ಬರೆಯುತ್ತೇನೆ.

ಒಬ್ಬ ಗೌರವಾನ್ವಿತ ವಕೀಲರು ಪ್ರಶ್ನಿಸಿದರು: "ನಾವು ಸಂಧ್ಯಾವಂದನೆ ಸಮಯದಲ್ಲಿ ಉಪಯೋಗಿಸುವ ಮಂತ್ರಗಳು ಸಂಸ್ಕೃತದಲ್ಲಿಯೆ ನಮಗೆ ಸ್ವಲ್ಪವೂ ಅರ್ಥವಾಗುವುದಿಲ್ಲ. ಅವನ್ನು ಸುಮ್ಮನೆ ಪಠಿಸುತ್ತಾ ಹೋಗುವುದರಿಂದ ನಮಗೆ ಏನಾದರೂ ಪ್ರಯೋಜನವಿದೆಯೆ ?"

ಸ್ವಾಮಿಜಿ ಉತ್ತರಿಸಿದರು: "ಅವು ಸತ್‌ಪರಿಣಾಮವನ್ನು ಮಾಡಿಯೆ ಮಾಡುತ್ತವೆ. ನೀವು ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ್ದೀರಿ; ಬಹು ಸುಲಭ ವಾಗಿ ಆ ಕೆಲವು ಮಂತ್ರಗಳ ಅರ್ಥವನ್ನು ತಿಳಿದುಕೊಳ್ಳಬಹುದಾಗಿತ್ತು. ಹಾಗಲ್ಲ ದಿದ್ದರೂ ನಿಮ್ಮನ್ನು ನಿಂದಿಸುವವರು ಯಾರು? ಅದರ ಅರ್ಥ ತಿಳಿಯದಿದ್ದರೂ, ಪೂಜೆಗೆ ಕುಳಿತಾಗ, ಏನೋ ಒಂದು ಪವಿತ್ರ ಕೆಲಸದಲ್ಲಿ ತೊಡಗಿರುವ ಭಾವನೆ ನಿಮ್ಮಲ್ಲಿ ಇರುತ್ತದೆಯೇ ಹೊರತು—ಕೆಟ್ಟ ಕೆಲಸದಲ್ಲಲ್ಲ. ಯಾವುದೊ ಒಂದು ಯೋಗ್ಯ ಕೆಲಸಮಾಡುತ್ತಿರುವೆ ಎಂಬ ನಂಬಿಕೆ ನಿಮ್ಮಲ್ಲಿದ್ದರೆ ಸಾಕು; ಅಷ್ಟೇ ಬೇಕಾದಷ್ಟಾಗುತ್ತದೆ—ಸತ್‌ಪರಿಣಾಮವನ್ನುಂಟುಮಾಡಲು".

ಅಷ್ಟರಲ್ಲೇ ಮತ್ತೊಬ್ಬರು ಕೇಳಿದರು: "ಧಾರ್ಮಿಕ ವಿಚಾರವಾಗಿ ಮಾತ ನಾಡುವಾಗ ಪರಭಾಷೆಯನ್ನು ಉಪಯೋಗಿಸಬಾರದು. ಏಕೆಂದರೆ ಇಂತಿಂತಹ ಪುರಾಣಗಳಲ್ಲಿ ಅದನ್ನು ನಿಷೇಧಿಸಿದೆ".

ಸ್ವಾಮಿಜಿ ಉತ್ತರಿಸಿದರು: "ಧಾರ್ಮಿಕ ವಿಚಾರವಾಗಿ ಮಾತುಕತೆ ನಡೆಸು ವುದು ಒಳ್ಳೆಯದು. ಭಾಷೆ ಯಾವುದು ಬೇಕಾದರೂ ಆಗಿರಲಿ." ಅದರ ಸಮರ್ಥನೆ ಗಾಗಿ ವೇದಗಳಿಂದಲೇ ಉದ್ಧರಿಸಿ ಮತ್ತೆ ಹೇಳಿದರು: "ಹೈಕೋರ್ಟಿನಿಂದ ಹೊರಟ ತೀರ್ಪನ್ನು, ಇತರ ಕೆಳಕೋರ್ಟುಗಳು ತಿರಸ್ಕರಿಸಲಾರವು".

ಒಂಭತ್ತು ಗಂಟೆ ಹೊಡೆಯುವವರೆಗೂ ಹೀಗೆ ಸಾಗುತ್ತಿತ್ತು. ಆಫೀಸು ಕೋರ್ಟುಗಳಿಗೆ ಹೋಗುವವರು ಎದ್ದು ಹೋದರು. ಬೇರೆಯವರು ಇನ್ನೂ ಕುಳಿತಿದ್ದರು. ಈಗ ಸ್ವಾಮಿಜಿಯ ದೃಷ್ಟಿ ನನ್ನ ಮೇಲೆ ಬಿತ್ತು. "ಮಗು, ಇಷ್ಟೊಂದು ಜನಕ್ಕೆಲ್ಲಾ ನಿರಾಸೆಮಾಡಿ ನಿನ್ನ ಹತ್ತಿರಕ್ಕೆ ಬರಲು ಮನಸ್ಸು ಬರಲಿಲ್ಲ; ದಯವಿಟ್ಟು ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ". ನನ್ನ ಜೊತೆಯಲ್ಲಿ ಬಂದು, ಅಲ್ಲೇ ತಂಗುವಂತೆ ನಾನು ಅವರನ್ನು ಒತ್ತಾಯಪಡಿಸಿದೆ; ಕೊನೆಗೆ ಅವರು ಹೇಳಿದರು: "ನಿನ್ನ ಈ ಸೂಚನೆಯನ್ನು ನನ್ನ ಆತಿಥೇಯರು ಒಪ್ಪುವಂತೆ ಮಾಡಿದರೆ ಬರುತ್ತೇನೆ". ಹೇಗೋ ಮಾಡಿ ಅಂತೂ ನನ್ನ ವಕೀಲಿ ಮಿತ್ರರನ್ನು ಒಪ್ಪಿಸಿದೆ; ಸ್ವಾಮಿಜಿಯೊಂದಿಗೆ ನನ್ನ ಜಾಗಕ್ಕೆ ಬಂದೆ. ಅವರ ಸರಕು ಎಂದರೆ,

ಒಂದು ಕಮಂಡಲು ಮತ್ತು ಕಾವಿಬಟ್ಟೆಯಲ್ಲಿ ಸುತ್ತಿದ ಒಂದು ಪುಸ್ತಕ. ಸ್ವಾಮಿಜಿ ಆಗ ಫ್ರೆಂಚ್ ಸಂಗೀತವನ್ನು ಅಧ್ಯಯನಿಸುತ್ತಿದ್ದರು. ಮನೆಗೆ ಬಂದಮೇಲೆ, ಹತ್ತು ಗಂಟೆಗೆ ನಾವು ಟೀ ತೆಗೆದುಕೊಂಡೆವು. ನನ್ನ ಸ್ವಂತ ಸಂಶಯಗಳನ್ನು ವ್ಯಕ್ತಗೊಳಿಸಲು ನಾನು ಸಂಕೋಚಪಡುತ್ತಿದ್ದೆನೆಂಬುದು ಅವರಿಗೆ ಗೊತ್ತಾಯಿತು; ಹಾಗೆಯೇ ಕೆಲವೇ ಮಾತುಕತೆಗಳಲ್ಲಿ ನನ್ನ ಬೌದ್ಧಿಕ ಮಟ್ಟವನ್ನು ಅವರು ತೂಗಿನೋಡಿದ್ದರು.

ಸ್ವಲ್ಪ ಕಾಲದ ಕೆಳಗೆ 'ಟೈಮ್ಸ್'ನಲ್ಲಿ ಯಾರೊ ಒಬ್ಬರದು ಒಂದು ಪದ್ಯ ಅಚ್ಚಾಗಿತ್ತು; ಅದರಲ್ಲಿ ದೇವರು ಎಂದರೇನು, ಯಾವ ಧರ್ಮ ಸತ್ಯ ಮುಂತಾದ ಗಹನ ಪ್ರಶ್ನೆಗಳನ್ನೆತ್ತಿ, ಅವುಗಳ ವಿಚಾರದಲ್ಲಿ ಒಂದು ನಿರ್ಧಾರಕ್ಕೆ ಬರಲು ಸಾಧ್ಯವೇ ಇಲ್ಲವೆಂದು ಪ್ರತಿಪಾದಿಸಿದ್ದರು. ಆ ದಿನಗಳ ನನ್ನ ಧಾರ್ಮಿಕ ಭಾವನೆಗಳಿಗೆ ಈ ಪದ್ಯ ಬಹುಮಟ್ಟಿಗೆ ಸಂವಾದಿಯಾಗಿತ್ತು. ಆದ್ದರಿಂದ ಅದನ್ನು ಭದ್ರವಾಗಿ ರಕ್ಷಿಸಿಟ್ಟಿದ್ದೆ. ಈಗ ಅದನ್ನು ಅವರ ಮುಂದೆಯಿಟ್ಟೆ. ಅದನ್ನು ಓದಿನೋಡಿ ಹೇಳಿದರು: "ಈ ಮನುಷ್ಯನಿಗೆ ಗಲಿಬಿಲಿಯಾಗಿಹೋಗಿದೆ". ಕ್ರಮೇಣ ನನ್ನ ಹಿಂಜರಿಕೆ ಹಿಂದೆ ಸರಿಯಿತು. ದೇವರು ದಯಾಮಯ ಮತ್ತು ನ್ಯಾಯವಂತ ಎಂಬ ಪರಸ್ಪರ ವಿರುದ್ಧಭಾವನೆಯನ್ನು ಕುರಿತು ಕ್ರೈಸ್ತ ಮಿಶನರಿಗಳಿಂದ ನನಗೆ ಯಾವ ರೀತಿಯ ಪರಿಹಾರವೂ ಸಿಕ್ಕಿರಲಿಲ್ಲ. ಸ್ವಾಮಿಜಿ ಕೂಡ ಅದರ ಮೇಲೆ ಹೆಚ್ಚಿನ ಬೆಳಕನ್ನು ಬೀರಲಾರರೆಂದು ನಾನು ಅಧೈರ್ಯಗೊಂಡಿದ್ದೆ. ಆ ಪ್ರಶ್ನೆಯನ್ನು ಅವರಿಗೆ ಹಾಕಿದಾಗ ಹೇಳಿದರು: "ನೀನು ವಿಜ್ಞಾನವನ್ನು ಬಹಳ ಓದಿರಬಹುದು. ಪ್ರತಿಯೊಂದು ಜಡವಸ್ತುವಿನಲ್ಲೂ, ಕೇಂದ್ರಾನುಗ ಮತ್ತು ಕೇಂದ್ರಾತಿಗ ಎಂಬ ಎರಡು ಪರಸ್ಪರ ವಿರುದ್ಧಶಕ್ತಿಗಳ ಕ್ರಿಯೆ ನಡೆಯುತ್ತಿರುವುದಿಲ್ಲವೇನು? ಇಂಥ ವಿರೋಧ ಒಂದೇ ವಸ್ತುವಿನಲ್ಲಿರುವುದಾದರೆ ನ್ಯಾಯ ಮತ್ತು ದಯೆ ಎರಡೂ ದೇವರೊಬ್ಬನಲ್ಲಿವೆ ಎಂಬುದನ್ನು ಒಪ್ಪಲಾಗದೇನು? ಒಟ್ಟಿನಲ್ಲಿ ಹೇಳುವುದಾದರೆ ನಿನ್ನ ದೇವರ ಕಲ್ಪನೆ ತುಂಬ ದುರ್ಬಲವಾಗಿದೆ." ನಾನು ಮೌನವಾಗಿದ್ದೆ. ಮತ್ತೆ, ನಾನು ನಂಬಿದ್ದೆ: ಸತ್ಯ ಕೇವಲವಾದದ್ದು; ಎಲ್ಲಾ ಧರ್ಮಗಳೂ ಏಕಕಾಲದಲ್ಲಿ ಸತ್ಯವಾಗಲಾರವು. ಆ ಪ್ರಶ್ನೆಗೆ ಉತ್ತರಿಸುತ್ತಾ ಅವರು ಹೇಳಿದರು: "ನಾವು ವಸ್ತುಗಳ ಬಗ್ಗೆ ತಿಳಿದಿರುವುದು ಮತ್ತು ತಿಳಿಯಲಿರುವುದೆಲ್ಲಾ—ಸಾಪೇಕ್ಷಸತ್ಯಗಳು. ಕೇವಲಸತ್ಯವನ್ನು ನಮ್ಮ ಪರಿಮಿತ ಮತಿಯಿಂದ ಗ್ರಹಿಸುವುದೇ ಅಸಾಧ್ಯ. ಆದರೂ, ಸತ್ಯ ಕೇವಲವಾದದ್ದಾದರೂ, ಅದು ಭಿನ್ನ ಮತಿಗಳಿಗೆ ಮತ್ತು ಭಿನ್ನ ಬದ್ಧಜೀವಿಗಳಿಗೆ ವಿವಿಧವಾಗಿ ತೋರುತ್ತದೆ. ಸತ್ಯದ ಈ ಎಲ್ಲ ಅಂಶಗಳೂ ಮತ್ತು ರೀತಿಗಳೂ ಅವಕ್ಕವೇ ಸಮಾನಸತ್ಯಗಳು; ಮತ್ತು ಒಂದೇ ಕೇವಲಸತ್ಯದ ಮೇಲೆ ಆಧಾರಿತವಾದವು. ಇದು ಒಬ್ಬನೇ ಸೂರ್ಯನ ಫೋಟೋವನ್ನು ಬೇರೆಬೇರೆ ದೂರಗಳಿಂದ ತೆಗೆದಂತೆ. ಅವು ಪ್ರತಿಯೊಂದೂ ಸೂರ್ಯರನ್ನು ಪ್ರತಿನಿಧಿಸಿದಂತೆ ತೋರುತ್ತವೆ. ವಿಭಿನ್ನ ಸಾಪೇಕ್ಷಸತ್ಯಗಳು

ಕೇವಲಸತ್ಯದೊಂದಿಗೆ ಇದೇ ರೀತಿಯ ಸಂಬಂಧವನ್ನು ಹೊಂದಿರುತ್ತವೆ. ಹೀಗೆ ಪ್ರತಿ ಧರ್ಮವೂ ಸತ್ಯವೇ; ಹೇಗೆಂದರೆ—ಅದು ಕೇವಲಧರ್ಮದ ಅಭಿವ್ಯಕ್ತಿಯ ರೀತಿಯಾಗಿದೆ ".

ಶ್ರದ್ಧೆಯೆ ಎಲ್ಲ ಧರ್ಮಗಳ ಮೂಲವೆಂದು ನಾನು ಹೇಳಿದಾಗ ಸ್ವಾಮಿಜಿ ಸ್ವಲ್ಪ ನಕ್ಕು ಹೇಳಿದರು: " ವ್ಯಕ್ತಿ ಎಲ್ಲ ಆಸೆಗಳನ್ನು ಮೀರಿಹೋದರೆ ಒಮ್ಮೆಗೇ ರಾಜನಾಗುತ್ತಾನೆ. ಆದರೆ ಹೇಗೆ ಆಗುವುದೆನ್ನುವುದೇ ಅಲ್ಲಿರುವ ಕಷ್ಟ. ಶ್ರದ್ಧೆ ಎಂಬುದು ಹೊರಗಡೆಯಿಂದ ಬಂದು ತುಂಬುತ್ತದೆಯೆ? ಯಾರೇ ಆಗಲಿ, ತಾವೇ ಸ್ವಾನುಭವವನ್ನು ಹೊಂದಿದ್ದಲ್ಲದೆ ನಿಜವಾದ ಶ್ರದ್ಧೆಯನ್ನು ಪಡೆಯಲಾಗುವುದಿಲ್ಲ ".

ಮಾತಿನ ಮಧ್ಯದಲ್ಲಿ ನಾನು ಅವರನ್ನು ' ಸಾಧು ' ಎಂದು ಸಂಬೋಧಿಸಿದೆ. ಅವರು ಹೇಳಿದರು: " ನಾವು ನಿಜವಾಗಿಯೂ ಹಾಗಿರುವೆವೆ? ನೋಟ ಮತ್ತು ಸ್ಪರ್ಶಮಾತ್ರದಿಂದ ಇತರರಲ್ಲಿ ಆಧ್ಯಾತ್ಮಿಕತೆಯನ್ನು ಪ್ರಬೋಧಿಸುವ ಸಾಧುಗಳಿದ್ದಾರೆ! "

ಮತ್ತೆ ನಾನು ಕೇಳಿದೆ: " ಸಂನ್ಯಾಸಿಗಳೇಕೆ ಸೋಮಾರಿಗಳ ರೀತಿಯಲ್ಲಿ ಕಾಲ ಕಳೆಯಬೇಕು? ಬೇರೆಯವರ ಖರ್ಚನ್ನೇಕೆ ಅವರು ಅವಲಂಬಿಸಬೇಕು? ಸಮಾಜಕ್ಕೆ ಉಪಯುಕ್ತವಾಗುವ ಕೆಲಸವನ್ನು ಏಕೆ ಕೈಗೊಳ್ಳಬಾರದು?" ಸ್ವಾಮಿಜಿ ಹೇಳಿದರು: " ಈಗ ಇಲ್ಲಿ ನೋಡು; ನೀನು ಅಷ್ಟೊಂದು ಕಷ್ಟಪಟ್ಟು ಈ ಹಣವನ್ನು ಸಂಪಾದಿಸುತ್ತಿರುವೆ; ಅದರಲ್ಲಿ ಸ್ವಲ್ಪ ಭಾಗ ಮಾತ್ರ ನಿನಗೋಸ್ಕರ ಖರ್ಚಾಗುತ್ತದೆ; ಅದರಲ್ಲಿ ಬೇಕಾದಷ್ಟು ನೀನು ನಿನ್ನವರೆಂದು ತಿಳಿದಿರುವ ಇತರರಿಗಾಗಿ ವ್ಯಯವಾಗುತ್ತದೆ. ಆದರೆ ನೀನು ಅವರಿಗೋಸ್ಕರ ಏನನ್ನು ಮಾಡುವೆಯೊ, ಅದನ್ನವರು ಕೃತಜ್ಞತೆಯಿಂದ ಒಪ್ಪಿಕೊಳ್ಳುವುದೂ ಇಲ್ಲ; ಪಡೆದಷ್ಟರಿಂದ ತೃಪ್ತಿಪಟ್ಟುಕೊಳ್ಳುವುದೂ ಇಲ್ಲ. ನೀನು ಉಳಿಸುವುದು, ಆದರಿಂದ ಎಂದೂ ತೃಪ್ತನಾಗದ ಪುರಾಣದ ಯಕ್ಷನಿಗೆ ಸಮನಾಗಿದೆ. ನೀನು ಕಾಲವಾದಾಗ ಅದನ್ನೆಲ್ಲಾ ಬೇರೆ ಯಾರೋ ಅನುಭವಿಸುತ್ತಾರೆ. ಅಷ್ಟೇ ಅಲ್ಲದೆ ಇನ್ನೂ ಅಧಿಕವಾಗಿ ಕೂಡಿಡಲಿಲ್ಲವೆಂದು ನಿನ್ನನ್ನು ನಿಷ್ಠುರಮಾಡುತ್ತಾರೆ. ಇದು ನಿನ್ನ ಸ್ಥಿತಿ. ಮತ್ತೊಂದು ಕಡೆಯಿಂದ, ನಾನು ಏನೂ ಮಾಡುತ್ತಿಲ್ಲ. ಹಸಿವೆಯಾದಾಗ ನನಗೆ ತಿನ್ನಲು ಬೇಕಾಗಿದೆ ಎಂಬುದನ್ನು ಇತರರೇ ನೋಡಿ ತಿಳಿದುಕೊಳ್ಳಲಿ. ನಾನೇನು ಕಷ್ಟಪಟ್ಟು ಹೋರಾಡುವುದೂ ಇಲ್ಲ, ಉಳಿಸುವುದೂ ಇಲ್ಲ. ನನಗೆ ಸಿಕ್ಕಿದ್ದನ್ನು ತಿನ್ನುತ್ತೇನೆ. ಈಗ ಹೇಳು, ಯಾರು ನಮ್ಮಲ್ಲಿ ಹೆಚ್ಚು ಜಾಣರು? ನಾನೋ ಅಥವಾ ನೀನೊ? " ನಾನು ಬೆರಗಾದೆ. ಏಕೆಂದರೆ ಇದಕ್ಕೂ ಮುನ್ನ ಯಾರೊಬ್ಬರೂ ನನ್ನೊಂದಿಗೆ ಇಷ್ಟು ಸ್ಪಷ್ಟವಾಗಿ ನಿರ್ದಾಕ್ಷಿಣ್ಯವಾಗಿ ಮಾತನಾಡಿರಲಿಲ್ಲ.

ಉಪಾಹಾರವಾದಮೇಲೆ ನಾವು ಸ್ವಲ್ಪ ವಿಶ್ರಾಂತಿ ತೆಗೆದುಕೊಂಡೆವು. ಆಮೇಲೆ ನನ್ನ ವಕೀಲ ಮಿತ್ರರ ಮನೆಗೆ ಹೋದೆವು. ಅಲ್ಲಿ ಇನ್ನೂ ಇಂತಹ ಚರ್ಚೆ ಬೇಕಾದಷ್ಟು ನಡೆಯಿತು. ರಾತ್ರಿ ೯ ಗಂಟೆಗೆ ಮನೆಗೆ ಹಿಂತಿರುಗಿದೆವು.

ದಾರಿಯಲ್ಲಿ ನಾನು ಹೇಳಿದೆ: "ಈ ಎಲ್ಲಾ ವಾದವಿವಾದಗಳಿಂದ ನಿಮಗೆ ಇವತ್ತು ತುಂಬಾ ಬೇಸರವಾಗಿರಬೇಕು."

ಅವರು ಹೇಳಿದರು: "ನಾನು ಸುಮ್ಮನೆ ಬಾಯಿ ಮುಚ್ಚಿಕೊಂಡಿದ್ದು ನೀವೆಲ್ಲಾ ನಾಸ್ತಿಕವಾದಿಗಳಾಗಿದ್ದರೆ, ನನಗೆ ಒಂದು ತುತ್ತು ಅನ್ನವನ್ನು ನೀಡುತ್ತಿದ್ದಿರಾ? ನಾನು ಹೀಗೆ ಹೇಳುತ್ತಾ ಹೋಗುತ್ತೇನೆ. ಜನರು ತಮಾಷೆಗಾಗಿ ನನ್ನ ಸುತ್ತಲೂ ನೆರೆಯುತ್ತಾರೆ. ಆದರೆ ಇದನ್ನು ಮಾತ್ರ ಖಂಡಿತವಾಗಿಯೂ ತಿಳಿ. ಸಭೆಯ ಎದುರಿನಲ್ಲಿ ವಾದಿಸುವವರು ಅಥವಾ ಪ್ರಶ್ನಿಸುವವರೆಲ್ಲರೂ ಸತ್ಯವನ್ನು ತಿಳಿಯಲು ಕಾತರರಾಗಿರುವುದಿಲ್ಲ, ನಾನು ಸಹ ಅವರ ಮನೋಧರ್ಮವನ್ನರಿತು ಅದರಂತೆ ಉತ್ತರಿಸುತ್ತೇನೆ."

"ಸ್ವಾಮಿಜಿ" ನಾನು ಹೇಳಿದೆ, "ನೀವು ಪ್ರಶ್ನೆಗಳಿಗೆಲ್ಲಾ ಅಂತಹ ತಕ್ಕ, ಸಿದ್ಧವಾದ ಉತ್ತರಗಳನ್ನು ಹೇಗೆ ಪಡೆದಿರಿ?"

"ಈ ಪ್ರಶ್ನೆಗಳೆಲ್ಲಾ ನಿನಗೆ ಹೊಸವು" ಅವರು ಹೇಳಿದರು, "ಆದರೆ ಇವನ್ನೆಲ್ಲಾ ಲೆಕ್ಕವಿಲ್ಲದಷ್ಟು ಸಲ ನನ್ನನ್ನು ಕೇಳಿದ್ದಾರೆ; ನಾನು ಉತ್ತರಿಸಿದ್ದೇನೆ."

ಸಂಭಾಷಣೆ ಊಟದ ಸಮಯದವರೆಗೂ ಮುಂದುವರಿಯಿತು. ಹಣವನ್ನು ಮುಟ್ಟಬಾರದೆಂಬ ಪ್ರತಿಜ್ಞೆಯನ್ನು ಕೈಗೊಂಡು ಅವರು ದೇಶಸಂಚಾರವನ್ನು ಕೈಗೊಂಡಿದ್ದರು; ಆಗ ನಡೆದ ಅನೇಕ ಸಾಹಸಮಯ ಸಂಗತಿಗಳನ್ನು ನನಗೆ ಹೇಳಿದರು. ಅದನ್ನು ಕೇಳುತ್ತಾ, ಇವರು ಎಷ್ಟೊಂದು ಕಷ್ಟಸಂಕಟಗಳನ್ನು ಸಹಿಸಿರಬೇಕೆಂದು ನಾನು ವ್ಯಾಕುಲನಾದೆ. ಆದರೆ ಅವರು ಅದೆಲ್ಲಾ ಒಂದು ಮಹಾ ತಮಾಷೆಯೋ ಎನ್ನುವಂತೆ ನಗುತ್ತಾ ಹೇಳುತ್ತಿದ್ದರು. ಕೆಲವೊಮ್ಮೆ ಹೊಟ್ಟೆಗೆ ಇಲ್ಲದೆ ಸುತ್ತುತ್ತಿದ್ದರು. ಕೆಲವು ಸಲ ಬಹಳ ಮೆಣಸಿನಕಾಯಿ ತಿನ್ನುತ್ತಿದ್ದರು. ಆಮೇಲೆ ಹೊಟ್ಟೆಯೊಳಗಿನ ಉರಿಯನ್ನು ತಗ್ಗಿಸಲು ಲೋಟದ ತುಂಬ ಅರಿಶಿಣದ ನೀರು ಕುಡಿಯಬೇಕಾಗಿತ್ತು. ಕೆಲವು ಕಡೆಗಳಲ್ಲಿ "ಸಂನ್ಯಾಸಿಗಳಿಗೆ ಇಲ್ಲಿ ಸ್ಥಳವಿಲ್ಲ"ವೆಂದು ನಿಷ್ಠುರವಾಗಿ ಹಿಂತಿರುಗಿಸುತ್ತಿದ್ದರು. ಕೆಲವು ವೇಳೆ ಸರ್ಕಾರದ ಗುಪ್ತಚಾರರು ಅವರನ್ನು ಬೆನ್ನಟ್ಟುತ್ತಿದ್ದರು. ಇನ್ನು ಕೆಲವು ಘಟನೆಗಳು ಅವರಿಗೆ ತುಂಬ ವಿನೋದಕರವಾಗಿದ್ದು, ಅವನ್ನು ಬಹಳ ಖುಷಿಯಾಗಿ ಹೇಳುತ್ತಿದ್ದರು; ಆದರೆ ಅವು ನನಗೆ ರಕ್ತ ಹೆಪ್ಪುಗಟ್ಟಿಸುತ್ತಿದ್ದವು. ರಾತ್ರಿ ತುಂಬ ಹೊತ್ತಾದ ಮೇಲೆ ಅವರಿಗೆ ಒಂದು ಹಾಸಿಗೆಯನ್ನು ಹಾಸಿಕೊಟ್ಟೆ. ನಾನೂ ವಿರಮಿಸಿದೆ. ಆದರೆ ಆ ರಾತ್ರಿ ನನಗೆ ನಿದ್ದೆ ಬರಲಿಲ್ಲ. ಇಷ್ಟು ವರ್ಷಗಳೂ ಆಳವಾಗಿ ಬೇರೂರಿ ನನ್ನನ್ನು ಬಾಧಿಸುತ್ತಿದ್ದ ಸಂಶಯಗಳೆಲ್ಲಾ ಸ್ವಾಮಿಜಿಯ ದೃಷ್ಟಿ ಮಾತ್ರದಿಂದ ಹಾರಿಹೋದದ್ದು ಹೇಗೆ ಎಂದು ನಾನು ಆಶ್ಚರ್ಯಗೊಂಡಿದ್ದೆ. ಈಗ ನಾನು ಕೇಳುವುದು ಮತ್ತೇನೂ ಇರಲಿಲ್ಲ. ದಿನಕಳೆದಂತೆ ನನ್ನ ಕುಟುಂಬದವರಿಗೆ ಮಾತ್ರವಲ್ಲದೆ ನನ್ನ ಸೇವಕರಿಗೂ ಅವರ ವಿಚಾರದಲ್ಲಿ ಗೌರವಪ್ರೀತಿಗಳು ಅಧಿಕ

ವಾದುವು; ಅವರುಗಳು ಎಷ್ಟೊಂದು ಆದರದಿಂದ ಸ್ವಾಮಿಜಿಯ ಸೇವೆಮಾಡು ತ್ತಿದ್ದರೆಂದರೆ, ಅವರಿಗೆ ಒಮ್ಮೊಮ್ಮೆ ಸಂಕೋಚವಾಗುತ್ತಿತ್ತು.

೧೮೯೨ ಇಸವಿ ಅಕ್ಟೋಬರ್ ೩೦ : ಬೆಳಿಗ್ಗೆ ನಾನು ಸ್ವಾಮಿಜಿಗೆ ನಮಸ್ಕರಿಸಿದೆ. ಈಗ ಅವರಲ್ಲಿ ನನಗೆ ಭಕ್ತಿಭಾವದೊಂದಿಗೆ ಹೆಚ್ಚಿನ ಸಲಿಗೆಯೂ ಉಂಟಾಗಿತ್ತು. ಸ್ವಾಮಿಜಿ ಸಹ ನನ್ನಿಂದ ಕಾಡು, ಬೆಟ್ಟ, ನದಿ ಮತ್ತು ಕಣಿವೆಗೆ ಸಂಬಂಧಿಸಿದಂತೆ. ಅನೇಕ ವಿಚಾರಗಳನ್ನು ಕೇಳಿ ಆನಂದಿಸುತ್ತಿದ್ದರು. ಅವರು ಈ ಊರಿನಲ್ಲಿ ತಂಗಿ ನಾಲ್ಕು ದಿನಗಳಾಗಿತ್ತು. ಐದನೆಯ ದಿವಸ ಅವರು ಹೇಳಿದರು : "ಸಂನ್ಯಾಸಿ ಯಾದವನು ಒಂದು ಊರಿನಲ್ಲಿ ಮೂರು ದಿನಗಳಿಗಿಂತ ಹೆಚ್ಚಾಗಿ ಉಳಿಯ ಬಾರದು—ಹಳ್ಳಿಯಲ್ಲಿ ನಾಲ್ಕು ದಿನಗಳಿಗಿಂತ ಹೆಚ್ಚಾಗಿ. ನಾನು ಇಲ್ಲಿಂದ ಬೇಗ ಹೊರಡಬೇಕು". ನಾನು ಅದಕ್ಕೆಲ್ಲಾ ಕಿವಿಗೊಡಲಿಲ್ಲ. ಅದನ್ನು ವಾದಿಸಿ ನಿರಾಕರಿಸಬೇಕೆಂದೇ ನಿರ್ಧರಿಸಿಕೊಂಡಿದ್ದೆ. ದೀರ್ಘ ಚರ್ಚೆಯ ಅನಂತರ ಅವರು ಹೇಳಿದರು : "ಒಂದೇ ಜಾಗದಲ್ಲಿ ಬಹಳ ಕಾಲ ಇದ್ದರೆ ಇತರರೊಂದಿಗೆ ಸಂಗವನ್ನು ಬೆಳಸಿಕೊಳ್ಳುತ್ತೇವೆ. ನಮ್ಮ ಮನೆ, ಮಠ, ಮಿತ್ರರನ್ನು ತೊರೆದಿದ್ದೇವೆ. ಇಂತಹ, ಮಾಯೆಗೆ ಮೂಲವಾಗುವುದೆಲ್ಲದರಿಂದಲೂ ಆದಷ್ಟು ದೂರದಲ್ಲಿರುವುದೇ ನಮಗೆ ಶ್ರೇಯಸ್ಕರ". ನಾನು ಅವರನ್ನು ಉಳಿಯಲು ಬೇಡಿಕೊಂಡೆ; ಅವರು ಎಂದೂ ಮಾಯಾಪಾಶಕ್ಕೆ ಒಳಗಾಗುವುದಿಲ್ಲವೆಂದೆ ವಾದಿಸಿದೆ. ಕೊನೆಗೆ ಇನ್ನೂ ಕೆಲವು ದಿನಗಳು ಮಾತ್ರ ಇರಲು ಅವರು ಒಪ್ಪಿಕೊಂಡರು.

ಅಷ್ಟರಲ್ಲೆ ನಾನು ಯೋಚಿಸಿದೆ : ಸ್ವಾಮಿಜಿ ಸಾರ್ವಜನಿಕ ಸಮೂಹವನ್ನು ಕುರಿತು ಭಾಷಣ ಮಾಡಿದರೆ, ಅವರ ಜ್ಞಾನದ ಉಪಯೋಗವನ್ನು ನಾವೂ ಪಡೆಯುವುದಲ್ಲದೆ, ಇತರರಿಗೂ ಲಾಭವಾಗುತ್ತದೆ. ನಾನು ಅದಕ್ಕಾಗಿ ಅವರನ್ನು ಬಲಾತ್ಕರಿಸಿದೆ. ಆದರೆ, ವೇದಿಕೆಯ ಮೇಲೇರಿ ಭಾಷಣಮಾಡುವುದು, ಅವರಲ್ಲಿ ಹೆಸರು ಮತ್ತು ಕೀರ್ತಿಯನ್ನು ಗಳಿಸುವ ಆಕಾಂಕ್ಷೆಯನ್ನು ಬೆಳೆಸಬಹುದು ಎಂಬ ನೆವವನ್ನು ಒಡ್ಡಿ ನಿರಾಕರಿಸಿದರು. ಆದರೆ ಆಗಲೆ ಸಾರ್ವತ್ರಿಕ ಮಾತುಕತೆ ನಡೆಸಲು ತಮ್ಮದೇನೂ ಅಡ್ಡಿಯಿಲ್ಲವೆಂದು ಸೂಚಿಸಿದರು.

ಒಂದು ದಿನ ಮಾತಿನ ಮಧ್ಯದಲ್ಲಿ, ಸ್ವಾಮಿಜಿ 'ಪಿಕ್‌ವಿಕ್ ಪೇಪರ್ಸ್'ನಿಂದ ಮೂರೋ ನಾಲ್ಕೋ ಪುಟಗಳನ್ನು ಅಕ್ಷರಶಃ ಉದ್ಧರಿಸಿದರು. ಸಂನ್ಯಾಸಿ ಯಾದವನು ಆ ಲೌಕಿಕ ಗ್ರಂಥದಿಂದ ಅಷ್ಟೊಂದನ್ನು ಹೇಗೆ ಬಾಯಿಪಾಠಮಾಡಿದ ಎಂಬುದು ಅರ್ಥವಾಗದೆ ನಾನು ಬೆರಗಾದೆ. ಅವರು ಸಂನ್ಯಾಸಾಶ್ರಮ ಸ್ವೀಕರಿಸುವ ಮೊದಲು ಬಹಳ ಸಲ ಓದಿರಬೇಕೆಂದು ಭಾವಿಸಿದೆ. ಅವರನ್ನು ಪ್ರಶ್ನಿಸಿದಾಗ ಹೇಳಿದರು : "ನಾನು ಅದನ್ನು ಎರಡು ಬಾರಿ ಓದಿದ್ದೆ! ಶಾಲೆಯಲ್ಲಿರುವಾಗ ಒಮ್ಮೆ; ಈಗ ನಾಲ್ಕೋ ಐದೋ ತಿಂಗಳ ಹಿಂದೆ ಮತ್ತೊಮ್ಮೆ". "ಹಾಗಾದರೆ ಹೇಗೆ ಜ್ಞಾಪಿಸಿಕೊಳ್ಳುತ್ತೀರಿ?" ಆಶ್ಚರ್ಯದಿಂದ ಕೇಳಿದೆ. "ನಮಗೇಕೆ ಹಾಗೆ

ನೆನಪಿಸಿಕೊಳ್ಳಲು ಆಗುವುದಿಲ್ಲ, ನಾವು ಸಂಪೂರ್ಣ ಗಮನವಿಟ್ಟು ಓದಬೇಕು" ಅವರು ವಿವರಿಸಿದರು, "ಆಹಾರದಿಂದ ಪಡೆದ ಶಕ್ತಿಯನ್ನೆಲ್ಲಾ ನಾವು ಅಪವ್ಯಯ ಮಾಡಿಬಿಡಬಾರದು".

ಮತ್ತೊಂದು ದಿವಸ ಸ್ವಾಮಿಜಿ ಹಾಸಿಗೆಯ ಮೇಲೆ ಒರಗಿಕೊಂಡು, ತಮ್ಮಷ್ಟಕ್ಕೆ ತಾವೇ ಒಂದು ಪುಸ್ತಕವನ್ನು ಓದುತ್ತಿದ್ದರು. ನಾನು ಬೇರೆಯ ಕೊಠಡಿಯಲ್ಲಿದ್ದೆ. ಇದ್ದಕ್ಕಿದ್ದಂತೆ ಅವರು ತುಂಬ ಜೋರಾಗಿ ನಕ್ಕರು. ಅಷ್ಟೊಂದು ನಗಲು ಅಲ್ಲಿ ಏನೋ ಸ್ವಾರಸ್ಯವಿರಬೇಕೆಂದು ಭಾವಿಸಿದೆ: ಅದನ್ನು ತಿಳಿದುಕೊಳ್ಳಲು ಅವರ ಕೊಠಡಿಗೆ ಬಂದೆ; ಏನೂ ವಿಶೇಷ ಸಂಭವಿಸಿರಲಿಲ್ಲ ; ಅವರು ಮುನ್ನಿನಂತೆ ಓದುವುದನ್ನು ಮುಂದುವರಿಸುತ್ತಿದ್ದರು. ಅವರು ನನ್ನ ಕಡೆ ನೋಡದಿದ್ದರೂ, ನಾನು ಅಲ್ಲೇ ೧೫ ನಿಮಿಷ ಕಾಯುತ್ತಾ ನಿಂತಿದ್ದೆ. ಅವರ ಸಮಸ್ತ ಮನವೂ ಪುಸ್ತಕದ ಮೇಲೆ ಕೇಂದ್ರೀಕೃತವಾಗಿತ್ತು. ಕೊನೆಗೆ ಅವರು ನನ್ನನ್ನು ನೋಡಿ, ಒಳಗೆ ಬರುವಂತೆ ಹೇಳಿದರು. ಬಹಳ ಹೊತ್ತಿನಿಂದ ನಾನು ಅಲ್ಲೇ ನಿಂತಿದ್ದೇನೆ ಎಂಬುದನ್ನು ತಿಳಿದಾಗ ಹೇಳಿದರು : "ನಾವು ಏನನ್ನೇ ಆಗಲಿ ಮಾಡುತ್ತಿರುವಾಗ, ಆ ಸಮಯದಲ್ಲಿ ನಮ್ಮ ಸಮಗ್ರ ಗಮನ ಮತ್ತು ಶಕ್ತಿಯನ್ನು ಅದರ ಮೇಲೆ ಕೇಂದ್ರೀಕರಿಸಬೇಕು. ಗಾಜಿಪುರದ ಪವಾಹರಿಬಾಬ, ಧ್ಯಾನ, ಜಪ, ಪೂಜೆ, ಅಧ್ಯಯನ ಮಾಡುವಾಗ ಇರುವಂತಹ ಅನನ್ಯ ಏಕಾಗ್ರತೆಯಿಂದಲೆ ತಮ್ಮ ಹಿತ್ತಾಳೆ ನೀರಿನ ಹೂಜಿಯನ್ನು ಬೆಳಗುತ್ತಿದ್ದರು. ಅದು ಬೆಳ್ಳಿಯಂತೆ ಹೊಳೆಯಬೇಕು— ಅಷ್ಟೊಂದು ಪರಿಶ್ರಮಪೂರ್ವಕವಾಗಿ ಬೆಳಗುತ್ತಿದ್ದರು".

ಒಮ್ಮೆ ನಾನು ಸ್ವಾಮಿಜಿಯನ್ನು ಕೇಳಿದೆ: "ಕಳ್ಳತನವನ್ನೇಕೆ ಪಾಪಕರ ವೆಂದು ಭಾವಿಸಬೇಕು? ಎಲ್ಲಾ ಧರ್ಮಗಳೂ ಏಕೆ ಕಳ್ಳತನವನ್ನು ನಿಷೇಧಿಸಿವೆ? ನನಗೇನೋ ಹೀಗೆ ತೋರುತ್ತದೆ: ಒಂದು ವಸ್ತು ನನಗೆ ಸೇರಿದ್ದು, ಮತ್ತೊಂದು ಬೇರೆ ಯಾರಿಗೋ ಸೇರಿದುದು ಎಂದೆಲ್ಲಾ ತಿಳಿಯುವುದು ನಮ್ಮ ಮನಸ್ಸಿನ ಭ್ರಾಂತಿ. ವಾಸ್ತವವಾಗಿ, ನಮ್ಮ ಬಂಧುಗಳಲ್ಲೆ ಒಬ್ಬರು ನನಗೆ ಹೇಳದೆ ಯಾವುದಾದರೂ ವಸ್ತುವನ್ನು ತೆಗೆದುಕೊಂಡುಹೋದರೆ ಕಳ್ಳತನವೆಂದು ಭಾವಿಸುವುದಿಲ್ಲ. ಹಾಗೆಯೆ ಹಕ್ಕಿಗಳು ಅಥವಾ ಪ್ರಾಣಿಗಳು ಏನನ್ನಾದರೂ ಕಚ್ಚಿಕೊಂಡು ಹೋದಾಗ, ಅದನ್ನು ಕಳವು ಎಂದು ತಿಳಿಯುವುದಿಲ್ಲ".

"ಅದೇನೋ ಸತ್ಯ", ಸ್ವಾಮಿಜಿ ಹೇಳಿದರು : ಯಾವ ಕೆಲಸವನ್ನಾಗಲಿ ಎಲ್ಲ ಸಮಯ ಮತ್ತು ಸನ್ನಿವೇಶಗಳಲ್ಲೂ ಕಳ್ಳತನವೆಂದೇ ಪರಿಗಣಿಸಲಾಗುವುದಿಲ್ಲ. ಬದಲಾಗಿ ಮತ್ತೊಂದು ಸಂದರ್ಭದಲ್ಲಿ ಪ್ರತಿಯೊಂದು ಕೆಲಸವನ್ನೂ ತಪ್ಪಾಗಿ, ಅಷ್ಟೇಕೆ, ಪಾಪಕರವಾಗಿ ಭಾವಿಸಬಹುದು. ಇತರರಿಗೆ ನೋವನ್ನುಂಟುಮಾಡುವ, ಹಾಗೆಯೆ ನಿನ್ನನ್ನು ನೈತಿಕ ಅಥವಾ ದೈಹಿಕವಾಗಿ ದುರ್ಬಲಗೊಳಿಸುವ ಕೆಲಸವನ್ನು ನೀನು ಮಾಡಬಾರದು. ಅದೇ ಪಾಪ, ಅದಕ್ಕೆ ವಿರುದ್ಧವಾದದ್ದೆಲ್ಲಾ ಪುಣ್ಯ.

ಯಾರಾದರೂ ನಿನ್ನದು ಏನನ್ನಾದರೂ ಕದ್ದರೆ ನಿನಗೆ ನೋವಾಗುವುದಿಲ್ಲವೆ ? ನಿನಗೆ ಯಾವುದು ಸತ್ಯವೋ ಅದು ಪ್ರಪಂಚಕ್ಕೆಲ್ಲಾ ಸತ್ಯವೇ. ಈ ಪ್ರಪಂಚ ವೇನೋ ಕ್ಷಣಿಕವಾದದ್ದು ನಿಜ ; ಹಾಗೆಂದು ಈ ಜಗತ್ತಿನಲ್ಲಿ ನೀನು ಯಾರಿಗಾದರೂ ನೋವನ್ನುಂಟುಮಾಡುವಷ್ಟು ಕೆಟ್ಟವನಾದರೆ, ಬರುಬರುತ್ತಾ ನಿನಗೆ ಎಂಥಾ ಪಾಪಕಾರ್ಯವಾಗಲಿ ಅಷ್ಟು ದೊಡ್ಡ ತಪ್ಪೆಂದು ಅನ್ನಿಸುವುದೇ ಇಲ್ಲ: ಧರ್ಮಾ ಧರ್ಮದ ಭೇದವೇ ಇಲ್ಲದಾಗ ಸಮಾಜ ಜೀವನವೇ ಅಸಾಧ್ಯವಾಗುತ್ತದೆ. ನೀನು ಕಾಡಿಗೆ ಹೋಗಿ, ಬೇಕಾದರೆ ಬೆತ್ತಲೆಯಾಗಿ ಕುಣಿಯುತ್ತಾ ಹೋಗ ಬಹುದು ; ಅದು ಯಾರಿಗೂ ನೋವನ್ನುಂಟುಮಾಡುವುದಿಲ್ಲ ; ಯಾರೂ ನಿನ್ನನ್ನು ತಡೆಯುವುದೂ ಇಲ್ಲ. ಆದರೆ ಊರಿನಲ್ಲಿ ನೀನು ಹಾಗೆ ಮಾಡಿದರೆ, ಪೋಲೀಸರು ನಿನ್ನನ್ನು ದಸ್ತಗಿರಿ ಮಾಡಬೇಕಾದ್ದೇ ; ನಿರ್ಜನ ಪ್ರದೇಶದಲ್ಲಿ ನಿನ್ನನ್ನು ಬಂಧಿಸಿಡ ಬೇಕಾಗುತ್ತದೆ ".

ಸ್ವಾಮಿಜಿ ಕೆಲವು ವೇಳೆ ಅತ್ಯಂತ ಅಮೂಲ್ಯ ಸಂಗತಿಗಳನ್ನೂ ಹಾಸ್ಯ ಪರಿಹಾಸ್ಯದ ಮೂಲಕವೆ ತಿಳಿಸಿಕೊಡುತ್ತಿದ್ದರು. ಅವರು ನನ್ನ ಗುರುಗಳಾಗಿ ದ್ದರೂ, ಅವರ ಎದುರಿನಲ್ಲಿ ಕುಳಿತುಕೊಳ್ಳುವಾಗ ಶಾಲಾಮಾಸ್ತರರ ಎದುರಿನಲ್ಲಿ ಕುಳಿತುಕೊಳ್ಳುವಂತೆ ಆಗುತ್ತಿರಲಿಲ್ಲ. ತುಂಬ ಗಂಭೀರಸಂಗತಿಗಳನ್ನು ಹೇಳುತ್ತಿರು ವಾಗಲೂ, ಅವರು ಹುಡುಗರಂತೆ ಸಂತೋಷವಾಗಿ ತುಂಬ ಉಲ್ಲಾಸದಿಂದ ನಗೆ ಯಾಡುತ್ತಿದ್ದರು. ಅವರೂ ನಗುತ್ತಿದ್ದರು, ಇತರರನ್ನೂ ತಮ್ಮ ಜೊತೆ ನಗಿಸು ತ್ತಿದ್ದರು ; ಮತ್ತೆ ತಟಕ್ಕನೆ ಗಂಭೀರ ಭಾವದಿಂದ ಜಟಿಲವಾದ ವಿಷಯಗಳನ್ನು ವಿವರಿಸಿ ಹೇಳಲು ತೊಡಗುತ್ತಿದ್ದರು. ಜನರು, ಅವರಿಗೆ ಆ ವಿಷಯದ ಮೇಲೆ ಮತ್ತು ತಮ್ಮ ಮೇಲೆ ಇರುತ್ತಿದ್ದ ಹತೋಟಿಯನ್ನು ಕಂಡು ವಿಸ್ಮಯಪಡುತ್ತಿದ್ದರು. ಅವರು ಯೋಚಿಸುತ್ತಿದ್ದರು : " ಈಗತಾನೆ ಇವರೂ ನಮ್ಮಂತೆ ಇದ್ದದ್ದನ್ನು ಕಂಡಿರಲಿಲ್ಲವೇನು ? " ಜನರು ಅವರಿಂದ ಕಲಿಯುವುದಕ್ಕಾಗಿ ಸಮಯಾಸಮಯ ವೆನ್ನದೆ ಬರುತ್ತಿದ್ದರು ; ಸ್ವಾಮಿಜಿ ಅವರುಗಳಿಗೆ ಸರ್ವದಾ ತಮ್ಮ ಬಾಗಿಲನ್ನು ತೆರೆದಿಡುತ್ತಿದ್ದರು. ಅವರು ನಾನಾ ಉದ್ದೇಶಗಳಿಂದ ಬರುತ್ತಿದ್ದರು : ಕೆಲವರು ಅವರನ್ನು ಪರೀಕ್ಷಿಸಲು ಬರುತ್ತಿದ್ದರು ; ಕೆಲವರು ವಿನೋದದ ಮಾತುಕತೆಗಳ ಸವಿಗಾಗಿ ; ಮತ್ತೆ ಕೆಲವರು ಸ್ವಾಮಿಜಿಯ ಹತ್ತಿರ ಬರುತ್ತಿದ್ದ ಊರಿನ ಗಣ್ಯ ಜನರ ಸಂಪರ್ಕ ಹೊಂದುವುದಕ್ಕಾಗಿ ; ಇನ್ನು ಕೆಲವರು ಪ್ರಾಪಂಚಿಕ ಕ್ಲೇಶಗಳಿಂದ ಕೆಲವು ನಿಮಿಷಗಳು ಬಿಡುಗಡೆ ಹೊಂದಿ, ಅವರ ಆಧ್ಯಾತ್ಮಿಕ ಮಾತುಕತೆಗಳನ್ನು ಕೇಳಿ, ಅದರಿಂದ ಬೆಳಕು ಪಡೆಯಲು ; ಒಮ್ಮೆಗೇ ಅವರುಗಳ ಉದ್ದೇಶಗಳನ್ನೆಲ್ಲಾ ಅರಿತು, ಅವರವರಿಗೆ ಬೇಕಾದಂತೆ ವ್ಯವಹರಿಸುವ ಶಕ್ತಿ ಸ್ವಾಮಿಜಿಯಲ್ಲಿತ್ತು. ಅವರ ತೀಕ್ಷ್ಣ ದೃಷ್ಟಿಯಿಂದ ಯಾರಿಗೂ ಏನನ್ನೂ ಮುಚ್ಚಿಟ್ಟುಕೊಳ್ಳಲು ಸಾಧ್ಯ ವಿರಲಿಲ್ಲ. ಒಮ್ಮೆ ಒಬ್ಬ ಶ್ರೀಮಂತ ಕುಟುಂಬದ ಹುಡುಗ ಸ್ವಾಮಿಜಿ ಬಳಿಗೆ

ಪದೇ ಪದೇ ಬರತೊಡಗಿದ; ಏಕೆಂದರೆ ತನ್ನ ವಿಶ್ವವಿದ್ಯಾನಿಲಯದ ಪರೀಕ್ಷೆಯನ್ನು ತೆಗೆದುಕೊಳ್ಳದೇ ಇರುವುದಕ್ಕಾಗಿ; ಅದನ್ನು ಅವನು ತಾನು ಸಂನ್ಯಾಸಿಯಾಗುವೆನೆಂಬ ಮುಸುಕು ಹಾಕಿ ಎಲ್ಲರ ಹತ್ತಿರವೂ ಹೇಳುತ್ತಿದ್ದ. ಅವನು ನನ್ನ ಮಿತ್ರರೊಬ್ಬರ ಮಗ. ನಾನು ಸ್ವಾಮಿಜಿಯನ್ನು ಕೇಳಿದೆ: "ಯಾಕೆ ಆ ಹುಡುಗ ನಿಮ್ಮ ಹತ್ತಿರ ಪದೇ ಪದೇ ಬರುತ್ತಿದ್ದಾನೆ? ಅವನಿಗೆ ಸಂನ್ಯಾಸಿಯಾಗುವಂತೆ ಉಪದೇಶಿಸಿರುವಿರಾ? ಅವನ ತಂದೆ ನನ್ನ ಸ್ನೇಹಿತರು". ಸ್ವಾಮಿಜಿ ಉತ್ತರಿಸಿದರು: "ಪರೀಕ್ಷೆ ಇನ್ನೇನು ಅವನ ಬುಡಕ್ಕೆ ಬಂದಿದೆ. ಪರೀಕ್ಷೆಗೆ ಹೋಗದಿರುವ ಆದೇಶ ಹೊಂದಬೇಕೆಂಬುದು ಅವನ ಇಷ್ಟ. ನಾನು ಹೇಳಿದೆ: ಎಂ. ಎ. ಪರೀಕ್ಷೆ ಮುಗಿಸಿದ ಮೇಲೆ ಸಂನ್ಯಾಸಿ ಜೀವನಕ್ಕೆ ಬಾ. ಸಾಧು ಜೀವನ ಬಾಳುವುದಕ್ಕಿಂತ ಎಂ. ಎ. ಪರೀಕ್ಷೆ ಪಾಸುಮಾಡುವುದು ಸುಲಭ".

ಸ್ವಾಮಿಜಿ ನಮ್ಮ ಮನೆಯಲ್ಲಿ ತಂಗಿದ್ದಾಗ, ಸಾಯಂಕಾಲಗಳಲ್ಲಿ ತುಂಬ ಜನರು ಅಲ್ಲಿ ಸೇರುತ್ತಿದ್ದರು. ನೋಡುವುದಕ್ಕೆ ಅದೊಂದು ದೊಡ್ಡ ಸಭೆಯಂತೆ ಕಾಣುತ್ತಿತ್ತು. ಆ ದಿನಗಳಲ್ಲಿ ಒಮ್ಮೆ ಗಂಧದ ಮರದ ಕೆಳಗೆ ದಿಂಬಿನ ಮೇಲೆ ಹೊರಳಾಡುತ್ತಾ ಮಲಗಿರುವಾಗ ನಡೆದ ಒಂದು ಘಟನೆಯನ್ನು ಸ್ವಾಮಿಜಿ ಹೇಳಿದರು. ಅದನ್ನು ಎಂದಿಗೂ ಮರೆಯಲಾರೆ. ಅದನ್ನು ತುಂಬ ದೀರ್ಘವಾಗಿ ವಿವರಿಸಬೇಕಾಗುತ್ತದೆ. ಅದರಿಂದ ಮುಂದಿನ ಸಂದರ್ಭಗಳಲ್ಲಿ ವಿವರಿಸಲು ಅದನ್ನು ಮೀಸಲಾಗಿಡುತ್ತೇನೆ. ಇಲ್ಲಿ ನನ್ನ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಸ್ವಲ್ಪ ಕಾಲದ ಮೊದಲು ನನ್ನ ಹೆಂಡತಿ ಯಾರಾದರೂ ಗುರುವಿನ ಬಳಿ ದೀಕ್ಷೆ ತೆಗೆದುಕೊಳ್ಳಬೇಕೆಂಬ ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿದಳು. ನಾನು ಹೇಳಿದೆ: "ನನ್ನ ಗೌರವಕ್ಕೆ ಭಾಜನವಾಗುವಂತಹ ಆದೇಶಗಳನ್ನು ನೀಡುವ ಗುರುವನ್ನು ಹುಡುಕು. ನಿನ್ನ ಗುರುವಿನ ಬರುವಿಕೆಯಿಂದ ಮನೆಯಲ್ಲಿ ನನಗೆ ಅಹಿತ ಭಾವನೆಗಳು ಉಂಟಾದರೆ, ಅದರಿಂದ ನಿನಗೆ ಏನೂ ಅನುಕೂಲವಾಗುವುದಿಲ್ಲ. ಅಂತಹ ಸಜ್ಜನ ವ್ಯಕ್ತಿಯ ಸಹವಾಸವಾದರೆ ನಾವಿಬ್ಬರೂ ಅವರಿಂದ ದೀಕ್ಷೆ ಪಡೆಯೋಣ; ಇಲ್ಲದಿದ್ದರೆ ಬೇಡ". ಅವಳೂ ಅದಕ್ಕೆ ಸಮ್ಮತಿಸಿದ್ದಳು. ಸ್ವಾಮಿಜಿ ನಮ್ಮ ಜೊತೆಯಲ್ಲಿರುವಾಗ ನಾನು ಅವಳನ್ನು ಕೇಳಿದೆ: "ಈ ಗುರುವಿನ ಶಿಷ್ಯಳಾಗಲು ನಿನಗೆ ಇಷ್ಟವಿದೆಯೇ?" "ಅವರು ನಿಜವಾಗಲೂ ಗುರುವಾಗಲು ಒಪ್ಪುವರೇ?" ಅವಳು ಕಾತರದಿಂದ ಕೇಳಿದಳು, "ಅವರು ಸಮ್ಮತಿಸಿದರೆ ನಾವು ಧನ್ಯರಾಗುತ್ತೇವೆ."

ಒಂದು ದಿವಸ ನಾನು ಸ್ವಾಮಿಜಿಯನ್ನು ತುಂಬ ಸಂಕೋಚದಿಂದ ಕೇಳಿದೆ, "ಸ್ವಾಮಿಜಿ, ನನ್ನದೊಂದು ಅಭೀಪ್ಸೆಯನ್ನು ಈಡೇರಿಸಿ ಕೊಡುವಿರಾ?" ಅವರು ಏನೆಂದು ತಿಳಿಯಲು ಬಯಸಿದಾಗ, ನಾನು ನಮ್ಮಿಬ್ಬರಿಗೂ ದೀಕ್ಷೆ ಕೊಡಬೇಕೆಂದು ಕೇಳಿಕೊಂಡೆ. ಅವರು ಹೇಳಿದರು; "ನೋಡಯ್ಯಾ, ಗೃಹಸ್ಥರು ಯಾರಾದರೂ

ಗೃಹಸ್ಥರನ್ನೆ ತಮ್ಮ ಗುರುವಾಗಿ ಸ್ವೀಕರಿಸುವುದೆ ಉತ್ತಮ. ಗುರುವಾಗುವುದು ತುಂಬಾ ಕಷ್ಟಕರ ಸಂಗತಿ. ಗುರು ಶಿಷ್ಯನ ಜವಾಬ್ದಾರಿಯನ್ನು ಹೊತ್ತುಕೊಳ್ಳ ಬೇಕು. ಶಿಷ್ಯನಾಗಿ ದೀಕ್ಷೆ ಸ್ವೀಕರಿಸುವ ಮುನ್ನ ಕೊನೆಯ ಪಕ್ಷ ಗುರುವನ್ನು ಮೂರು ಬಾರಿಯಾದರೂ ಸಂಧಿಸಿರಬೇಕು". ಹೀಗೆಯೇ ನಾನಾ ರೀತಿಯ ಪ್ರತಿ ಪಾದನೆಗಳಿಂದ ಅವರು ನನ್ನ ಕೇಳಿಕೆಯನ್ನು ನಿರಾಕರಿಸತೊಡಗಿದರು. ಆದರೆ ನಾನು ಏನು ಮಾಡಿದರೂ ಮನಸ್ಸು ಬದಲಿಸುವುದಿಲ್ಲವೆಂದು ಕಂಡುಬಂದಾಗ ಅವರು ಒಪ್ಪಿಕೊಂಡರು. ೧೮೯೩ ಇಸವಿ ಅಕ್ಟೋಬರ್ ೨೫ನೇ ತಾರೀಖು ಅವರು ಮಂತ್ರೋಪದೇಶ ನೀಡಿದರು. ಅವರ ಭಾವಚಿತ್ರ ಒಂದನ್ನು ಪಡೆಯಲು ನನಗೆ ಇಷ್ಟವಾಯಿತು. ಅವರು ಒಪ್ಪಲಿಲ್ಲ. ನಾನು ಬಹಳ ಹೊತ್ತು ಬಲಾತ್ಕರಿಸಿದ ಮೇಲೆ ಸಮ್ಮತಿಸಿದರು. ೨೮ನೆಯ ತಾರೀಖು ಅವರ ಫೋಟೋವನ್ನು ತೆಗೆದು ಕೊಂಡೆ. ಅದಕ್ಕೂ ಮುನ್ನವೆ ಮತ್ತೊಬ್ಬ ಸಂಭಾವಿತರು ಸ್ವಾಮಿಜಿಯ ಫೋಟೋ ತೆಗೆದುಕೊಳ್ಳಲು ತುಂಬ ಇಷ್ಟದಿಂದ ಬೇಡಿಕೊಂಡಿದ್ದರೂ ಸ್ವಾಮಿಜಿ ನಿರಾಕರಿ ಸಿದ್ದರು. ಸ್ವಾಮಿಜಿಯ ಕೇಳಿಕೆಯ ಮೇರೆಗೆ, ನನ್ನ ಹತ್ತಿರವಿದ್ದ ಎರಡು ಪ್ರತಿ ಗಳಲ್ಲಿ ಒಂದನ್ನು ಅವರಿಗೆ ಕಳುಹಿಸಿಕೊಡಬೇಕಾಯಿತು.

ಮಾತಿನ ಮಧ್ಯದಲ್ಲಿ ಸ್ವಾಮಿಜಿ ಹೇಳಿದರು: "ಕಾಡಿನಲ್ಲಿ ಬಿಡಾರ ಹಾಕುವಾಗ ನಿನ್ನ ಜೊತೆ ನಾನೂ ಕೆಲವು ದಿವಸಗಳನ್ನು ಕಳೆಯಬೇಕೆಂದು ನನಗೆ ಬಹಳ ಇಷ್ಟವಿತ್ತು. ಆದರೆ ಅವರು ಚಿಕಾಗೋದಲ್ಲಿ ಸರ್ವಧರ್ಮ ಸಮ್ಮೇಳನ ನಡೆಸುತ್ತಾರಂತೆ. ಅವಕಾಶ ಸಿಕ್ಕರೆ ನಾನೂ ಅದರಲ್ಲಿ ಭಾಗವಹಿಸುತ್ತೇನೆ." ಚಂದಾರೂಪದಲ್ಲಿ ಹಣವನ್ನು ಎತ್ತುವ ವಿಷಯವನ್ನು ನಾನು ಪ್ರಸ್ತಾಪಿಸಿದಾಗ ಅವರು ಒಪ್ಪಲಿಲ್ಲ; ಕಾರಣವೇನೋ ಅವರಿಗೆ ಮಾತ್ರ ಗೊತ್ತು. ಆ ಸಮಯದಲ್ಲಿ ಅವರು ಯಾವ ರೀತಿಯಾಗಿಯೂ ಹಣವನ್ನು ಅಂಗೀಕರಿಸುವುದಿಲ್ಲ ಅಥವಾ ಮುಟ್ಟುವುದಿಲ್ಲ ಎಂಬ ವ್ರತದಲ್ಲಿದ್ದರು. ನಾನು ಮಹಾಪ್ರಯತ್ನ ಮಾಡಿ ಮಹಾರಾಷ್ಟ್ರದ ಒಂದು ಜೊತೆ ಗಂಧದ ಪಾದುಕೆ ಮತ್ತು ಬೆತ್ತದ ವಾಕಿಂಗ್ ಸ್ಟಿಕ್ ಅನ್ನು ತೆಗೆದುಕೊಳ್ಳುವಂತೆ ಒಪ್ಪಿಸಿದೆ. ಅದಕ್ಕೆ ಮೊದಲು ಕೊಲ್ಲಾಪುರದ ರಾಣಿ ಯಾವುದಾದರೂ ಕೊಡುಗೆಯನ್ನು ಅವರು ಸ್ವೀಕರಿಸುವಂತೆ ಮಾಡುವುದರಲ್ಲಿ ಅಸಮರ್ಥಳಾಗಿದ್ದಳು. ಆದ್ದರಿಂದ ಈಗ ಅವಳು ಎರಡು ಕಾವಿ ಬಟ್ಟೆಗಳನ್ನು ಕಳುಹಿಸಿದಳು. ಸ್ವಾಮಿಜಿ ಅವುಗಳನ್ನು ಅಂಗೀಕರಿಸಿ, "ಸಂನ್ಯಾಸಿ ಎಂದೂ ಗಂಟು ಕಟ್ಟಬಾರದು" ಎಂದು ಹಳೆಯ ಚಿಂದಿ ಬಟ್ಟೆಗಳನ್ನೆಲ್ಲಾ ಅಲ್ಲೇ ಬಿಟ್ಟರು.

ನಾನು ಸ್ವಾಮಿಜಿಯ ಸಂಗವನ್ನು ಹೊಂದುವ ಮೊದಲು, ಗೀತೆಯನ್ನು ಒಂದಕ್ಕಿಂತ ಹೆಚ್ಚು ಬಾರಿ ಓದಲು ಪ್ರಯತ್ನಿಸಿದ್ದೆ. ಅದನ್ನು ಅರ್ಥಮಾಡಿಕೊಳ್ಳಲು ಆಗದಿದ್ದರೂ, ಅದರಿಂದ ನಿಜವಾಗಿಯೂ ತಿಳಿಯಬಹುದಾದದ್ದು ಏನೂ ಇಲ್ಲವೆಂದೇ ನಿರ್ಧರಿಸಿದೆ. ನನ್ನ ಪ್ರಯತ್ನವನ್ನು ಅಲ್ಲಿಗೆ ಕೈಬಿಟ್ಟೆ. ಒಂದು ದಿನ

ಸ್ವಾಮಿಜಿ ಗೀತೆಯನ್ನು ನಮಗೆ ವಿವರಿಸಿದರು ; ಆಗ ಇದು ಎಂತಹ ಅದ್ಭುತ ಗ್ರಂಥ ವೆಂಬುದನ್ನು ನಾನು ಕಂಡುಕೊಂಡೆ. ಅವರಿಂದ ಗೀತೆಯನ್ನು ಮೆಚ್ಚುವುದನ್ನು ನಾನು ಕಲಿತಂತೆ, ಜ್ಯೂಲ್ಸ್ ವರ್ನ್ ಮುಂತಾದವರ ವೈಜ್ಞಾನಿಕ ಕಾದಂಬರಿ ಗಳನ್ನೂ ಕಾರ್ಲೈಲನ 'ಸಾರ್ಟರ್ ರಿಸಾರ್ಟಸ್' (Sartar Resartus) ಮುಂತಾದುವನ್ನೂ ಓದುವುದನ್ನು ಕಲಿತೆ.

ಆ ಸಮಯದಲ್ಲಿ ನಾನು ಔಷಧಿಗಳನ್ನು ಉದಾರವಾಗಿಯೆ ಸೇವಿಸುತ್ತಿದ್ದೆ. ಸ್ವಾಮಿಜಿ ಹೇಳಿದರು : "ಕೆಲವು ರೋಗಗಳು ಹಾಸಿಗೆ ಹಿಡಿಯುವಂತೆ ಮಾಡುತ್ತವೆ. ಹಾಗೆ ಕಂಡುಬಂದಾಗ ಮಾತ್ರ ನೀನು ಔಷಧಿ ತೆಗೆದುಕೊಳ್ಳಬೇಕಲ್ಲದೆ, ಬೇಕಾಬಿಟ್ಟಿ ಅಲ್ಲ. ಶೇಕಡಾ ೯೦ ಭಾಗ ಇಂತಹ ರೋಗಗಳೆಲ್ಲಾ ನಮ್ಮ ನರಗಳ ದೌರ್ಬಲ್ಯ ಅಥವಾ ಮೆದುಳಿನ ಕಲ್ಪನೆಯಾಗಿರುತ್ತವೆ. ವೈದ್ಯರು ಅಂತಹ ರೋಗಗಳಿಂದ ನರಳುತ್ತಿರುವ ಜನರನ್ನು ಬದುಕಿಸುವುದಕ್ಕಿಂತ ಹೆಚ್ಚಾಗಿ ಕೊಲ್ಲುತ್ತಾರೆ. ಅದೇ ವಿಚಾರಗಳನ್ನು ಕುರಿತು ಸದಾ ಮಾತನಾಡುವುದರಿಂದ ಅಥವಾ ಚಿಂತಿಸುವುದರಿಂದ ನಿನಗೇನು ಲಾಭ ? ನೀನು ಬದುಕಿರುವವರೆಗೂ ಇದನ್ನು ಲಘುವಾಗಿ ಭಾವಿಸಿ ಸಂತೋಷವಾಗಿರು. ಸುಖದ ಆಸೆಯನ್ನು ತಣಿಸಲು ಹೊರಡಬೇಡ. ಅದು ದೇಹದ ಮೇಲೆ ಸುಂಕವನ್ನು ಹೊರಿಸಿ ನೀನು ಪಶ್ಚಾತ್ತಾಪಗೊಳ್ಳುವಂತೆ ಮಾಡು ತ್ತದೆ. ಮರಣದ ಬಗ್ಗೆ ಹೇಳುವುದಾದರೆ, ನನ್ನ ಅಥವಾ ನಿನ್ನಂತಹವರು ಒಬ್ಬಿಬ್ಬರು ಸಾಯುವುದರಿಂದ ಏನಾಗುವುದು ? ಅದರಿಂದೇನು ಭೂಮಿ ತಲೆಕೆಳ ಕಾಗುವುದಿಲ್ಲ. ನಾವು ಅಷ್ಟೊಂದು ಮುಖ್ಯ, ನಾವಿಲ್ಲದಿದ್ದರೆ ಈ ಪ್ರಪಂಚ ನಡೆಯುವುದಿಲ್ಲ ಎಂದು ಭಾವಿಸಬಾರದು".

ಆಗ ನಾನು ಒಂದಲ್ಲ ಒಂದು ಕಾರಣದಿಂದ ನನ್ನ ಮೇಲಧಿಕಾರಿಗಳೊಂದಿಗೆ ಸರಿಯಾಗಿ ವರ್ತಿಸುತ್ತಿರಲಿಲ್ಲ. ಅವರ ಸಣ್ಣಪುಟ್ಟ ಟೀಕೆಗಳೂ ನನಗೆ ತಾಳ್ಮೆ ತಪ್ಪುವಂತೆ ಮಾಡುತ್ತಿದ್ದವು. ನಾನು ಲಾಭಕರ ಉದ್ಯೋಗ ಪಡೆದಿದ್ದರೂ, ಅದರಿಂದ ಒಂದು ದಿವಸವೂ ಸಂತೋಷ ಪಡೆದಿರಲಿಲ್ಲ. ಸ್ವಾಮಿಜಿ ಬಳಿ ನನ್ನ ಕಷ್ಟಗಳನ್ನೆಲ್ಲಾ ತೋಡಿಕೊಂಡೆ. ಅವರು ಹೇಳಿದರು : "ನೀನು ಕೆಲಸದಲ್ಲಿರು ವುದು ಏಕೆ ? ಸಂಬಳ ಪಡೆಯುವುದಕ್ಕೆ ಅಲ್ಲವೇನು ? ಪ್ರತಿ ತಿಂಗಳೂ ತಪ್ಪದೆ ಪಡೆಯುತ್ತಿದ್ದೀಯೆ ; ಅಂದಮೇಲೆ ಏಕೆ ಅಷ್ಟೊಂದು ಉದ್ವೇಗಕ್ಕೆ ಒಳಗಾಗಬೇಕು ? ಯಾವಕ್ಷಣ ಬೇಕಾದರೂ ನೀನು ಅದಕ್ಕೆ ರಾಜಿನಾಮೆ ಕೊಡಬಹುದು. ನಿನ್ನನ್ನು ಯಾರೂ ಅಲ್ಲಿ ಕಟ್ಟಿಹಾಕಿಕೊಳ್ಳುವುದಿಲ್ಲ. 'ಓ, ನಾನು ಎಂಥಾ ಬಂಧನಕ್ಕೆ ಒಳಗಾಗಿದ್ದೇನೆ ?'—ಎಂದು ಯೋಚಿಸುತ್ತಾ ನಿನ್ನ ದುಃಖವನ್ನೇಕೆ ಹೆಚ್ಚಿಸಿಕೊಳ್ಳ ಬೇಕು ? ಮತ್ತೊಂದು ವಿಷಯ : ನಿನ್ನ ಸಂಬಳಕ್ಕಾಗಿ ಕೆಲಸಮಾಡುವುದು ವಿನಾ ನಿನ್ನ ಮೇಲಧಿಕಾರಿಗಳನ್ನು ಸ್ವಲ್ಪವಾದರೂ ಸಂತೋಷಪಡಿಸಲು ಮಾಡಿದ್ದೇನೆ ಎಂದು ಎಂದಾದರೂ ನೀನು ನನ್ನ ಹತ್ತಿರ ಹೇಳಿದ್ದೀಯಾ ? ನೀನು ಎಂದೂ ಹಾಗೆ

ಮಾಡಿಲ್ಲ; ಆದರೂ ನಿನ್ನ ವಿಚಾರದಲ್ಲಿ ಅವರು ಸಂತುಷ್ಟರಾಗಿಲ್ಲವೆಂದು ಕೋಪ ಗೊಂಡಿರುವೆ. ನಿನ್ನ ದೃಷ್ಟಿಯಿಂದ ಅದು ಜಾಣ್ಮೆ ಏನು? ಖಂಡಿತವಾಗಿಯೂ ಇದನ್ನು ತಿಳಿ: ಇತರರನ್ನು ಕುರಿತ ನಮ್ಮ ಭಾವನೆಗಳು ನಮ್ಮ ನಡೆನುಡಿಗ ಳಿಂದಲೆ ವ್ಯಕ್ತವಾಗುತ್ತವೆ, ನಾವು ಬಾಯಿಬಿಟ್ಟು ಅದನ್ನೆಲ್ಲಾ ಹೇಳದಿದ್ದರೂ. ಜನರೂ ಅದರಂತೆ ಪ್ರತಿವರ್ತಿಸುತ್ತಾರೆ. ನಮ್ಮ ಹೃದಯದಲ್ಲಿರುವ ಭಾವನೆಗಳ ಪ್ರತಿರೂಪವನ್ನೆ ನಾವು ಹೊರಗಡೆ ಜಗತ್ತಿನಲ್ಲಿ ಕಾಣುತ್ತೇವೆ. ಈ ಹೇಳಿಕೆ ಎಷ್ಟು ಸತ್ಯವಾದದ್ದು ಎಂಬುದನ್ನು ಯಾರೂ ಕಂಡುಕೊಂಡಿಲ್ಲ: 'ನಾನು ಒಳ್ಳೆಯವ ನಾದಾಗ, ಪ್ರಪಂಚವೆಲ್ಲಾ ಒಳ್ಳೆಯದಾಗುತ್ತದೆ.' ಇವತ್ತಿನಿಂದ ಇತರರಲ್ಲಿ ತಪ್ಪು ಕಂಡುಹಿಡಿಯುವ ಅಭ್ಯಾಸವನ್ನು ಬಿಟ್ಟುಬಿಡು. ಇತರರ ಮನೋಭಾವನೆ ಮತ್ತು ವರ್ತನೆಯೂ ಅದರಂತೆ ಬದಲಾಗುತ್ತಾ ಹೋಗುತ್ತದೆ; ಸ್ವಲ್ಪ ಕಾಲದಲ್ಲಿಯೇ ನೀನು ಅವನ್ನು ಚೆನ್ನಾಗಿ ಕಂಡುಕೊಳ್ಳುವೆ".

ಒಮ್ಮೆ ಯಾವುದು ಪಾಪ, ಯಾವುದು ಪುಣ್ಯ ಎಂಬ ಪ್ರಶ್ನೆ ಎದ್ದಿತು. ಸ್ವಾಮಿಜಿ ಹೇಳಿದರು: "ಯಾವುದು ನಮ್ಮನ್ನು ಗುರಿಯತ್ತ ಕರೆಸೊಯ್ಯುತ್ತದೊ, ಅದೇ ಪುಣ್ಯ; ಅದಕ್ಕೆ ವಿರುದ್ಧವಾದುದೆಲ್ಲಾ ಪಾಪ. ಪಾಪ ಪುಣ್ಯಗಳನ್ನು ಕುರಿತ ನಮ್ಮ ಭಾವನೆಗಳು—ಉಬ್ಬುತಗ್ಗುಗಳನ್ನು ಕುರಿತ ನಮ್ಮ ಭಾವನೆಗಳಂತೆಯೆ; ನಾವು ಮೇಲಕ್ಕೇರಿದಂತೆ ಈ ವ್ಯತ್ಯಾಸಗಳೆಲ್ಲಾ ಅಳಿಸಿಹೋಗುತ್ತವೆ. ಅವರು ಹೇಳುತ್ತಾರೆ—ಚಂದ್ರನಲ್ಲಿ ಕಣಿವೆ, ಗುಡ್ಡಗಳಿವೆ; ಆದರೆ ನಮಗೆ ಸಮತಲಭೂಮಿ ಯಂತೆ ಕಾಣುತ್ತದೆ. ಇದೂ ಹಾಗೆಯೇ". ಸ್ವಾಮಿಜಿಗೆ ಅಂತಹ ವಿಶಿಷ್ಟಶಕ್ತಿ ಇತ್ತು; ಪ್ರಶ್ನೆ ಏನಾದರಾಗಿರಲಿ, ಉತ್ತರ ಅಷ್ಟೊಂದು ಸೂಕ್ತವಾಗಿದ್ದು, ಕೇಳು ವವರು ಅದನ್ನು ಒಪ್ಪಿಕೊಳ್ಳುವಂತಾಗುತ್ತಿತ್ತು.

ಮತ್ತೊಂದು ದಿವಸ, ಕಲ್ಕತ್ತಾದಲ್ಲಿ ಒಬ್ಬ ಮನುಷ್ಯ ಹಸಿವಿನಿಂದ ಸತ್ತಿದ್ದಾನೆ ಎಂಬುದನ್ನು ಪತ್ರಿಕೆಯಲ್ಲಿ ಓದುತ್ತಿದ್ದಾಗ, ಸ್ವಾಮಿಜಿ ಅನುಭವಿಸಿದ ಸಂಕಟವನ್ನು ಮಾತಿನಿಂದ ವರ್ಣಿಸಲಾಗುವುದಿಲ್ಲ. ಮತ್ತೆ ಮತ್ತೆ ಅವರು ಹೇಳಿದರು: "ನಮ್ಮ ದೇಶ ವಿನಾಶದತ್ತ ಸಾಗುತ್ತಿದೆ". ಅದರ ವಿವರಣೆ ಕೇಳಿದಾಗ ಹೇಳಿದರು: "ಬೇರೆ ದೇಶಗಳಲ್ಲಿ ಪ್ರತಿ ವರ್ಷವೂ ನೂರಾರು ಜನರು ಸಾಯುತ್ತಿರುವುದನ್ನು ನೀನು ನೋಡುತ್ತಿಲ್ಲವೇನು? ಅವರಿಗಾಗಿ ದರಿದ್ರರ, ಅಶಕ್ತರ ಬೀಡು, ಧರ್ಮಶಾಲೆ ಇತ್ಯಾದಿ ಇವೆ. ಆದರೆ ನಮ್ಮ ದೇಶದಲ್ಲಿ ಹಸಿವಿನಿಂದ ಸತ್ತದ್ದನ್ನು ನಾವು ಎಂದೂ ಕೇಳಿಲ್ಲ; ಏಕೆಂದರೆ ದಾನಧರ್ಮದ ಪದ್ಧತಿಯಿಂದ. ಇದೇ ಮೊದಲನೆ ಬಾರಿ, ಕಲ್ಕತ್ತಾದಲ್ಲಿ ಕ್ಷಾಮವಿಲ್ಲದೆ ಇರುವಾಗಲೂ ಹಸಿವಿನಿಂದ ಸತ್ತಿದ್ದನ್ನು ನಾನು ಪತ್ರಿಕೆ ಯಲ್ಲಿ ಓದಿದ್ದು".

ನನ್ನ ಇಂಗ್ಲೀಷ್ ವಿದ್ಯಾಭ್ಯಾಸದ ಪರಿಣಾಮವಾಗಿ, ಭಿಕ್ಷುಕರಿಗೆ ಒಂದೆರಡು ಪೈಸಾಗಳನ್ನು ಕೊಡುವುದು ಹಣವನ್ನು ದುಂದುಮಾಡಿದಂತೆ ಎಂದು ತಿಳಿದಿದ್ದೆ.

ಅಂತಹ ಕ್ಷುಲ್ಲಕ ಸಹಾಯದಿಂದ, ತೆಗೆದುಕೊಂಡವನಿಗೆ ಏನೂ ಒಳ್ಳೆಯದಾಗುವು ದಿಲ್ಲ; ಅಷ್ಟೇ ಅಲ್ಲದೆ ಅದರ ಜೊತೆಗೆ ಹೊಗೆಸೊಪ್ಪು ಸೇದಿ ಅವರು ಹಾಳಾಗಲೂ ಕಾರಣವಾಗುತ್ತದೆ. ಕೊಡುವವನಿಗೆ ಖರ್ಚಾಗುವುದಷ್ಟೆ ಅದರಿಂದಾಗುವ ಪ್ರಯೋಜನ! ಆದ್ದರಿಂದ ಅನೇಕರಿಗೆ ಒಂದೆರಡು ಕಾಸು ಕೊಡುವುದಕ್ಕಿಂತ, ಯಾರಿಗಾದರೂ ಸಾಕಷ್ಟು ಹೆಚ್ಚಿನ ಪ್ರಮಾಣದಲ್ಲಿ ಕೊಡುವುದು ಉತ್ತಮವೆಂದು ತೀರ್ಮಾನಕ್ಕೆ ಬಂದಿದ್ದೆ. ನಾನು ಸ್ವಾಮಿಜಿಯನ್ನು ಕೇಳಿದಾಗ ಅವರು ಹೇಳಿದರು: "ತಿರುಕರಿಗೆ, ನಿನ್ನ ಯೋಗ್ಯತಾನುಸಾರ ಏನನ್ನಾದರೂ ಕೊಡುವುದು ಒಳ್ಳೆಯದು. ಹೆಚ್ಚೆಂದರೆ ಒಂದೆರಡು ಪೈಸೆ ಕೊಡುತ್ತೀಯೆ, ಆದರಿಂದ ಆ ಮನುಷ್ಯ ಏನು ಮಾಡುತ್ತಾನೆ—ಅದನ್ನು ಸದುಪಯೋಗಮಾಡುತ್ತಾನೊ ಇಲ್ಲವೊ, ಎಂಬುದಾಗಿ ನೀನೇನು ನಿನ್ನ ಬುದ್ಧಿಯನ್ನೆಲ್ಲಾ ವ್ಯಯಮಾಡಬೇಕಾದುದಿಲ್ಲ. ಅವನು ಅದನ್ನು ಭಂಗಿ ತೆಗೆದು ಕೊಂಡು ವ್ಯರ್ಥಮಾಡಿದರೂ, ಆ ಕೆಲವು ಕಾಸುಗಳನ್ನು ಅವನು ಪಡೆದದ್ದರಿಂದ ಸಮಾಜಕ್ಕೆ ಒಳ್ಳೆಯದಾಗುತ್ತದೆ; ನಿಮ್ಮಂತಹ ಜನ ಸ್ವಯಂ ಇಚ್ಛೆಯಿಂದ ಅದನ್ನು ಕೊಡದೆ ಇದ್ದರೆ, ಅವನು ನಿಮ್ಮಿಂದ ಕದ್ದು ಪಡೆಯುತ್ತಾನೆ. ಅದಕ್ಕೆ ಬದಲಾಗಿ ಭಂಗಿ ತೆಗೆದುಕೊಂಡು ಸ್ವಲ್ಪ ಸೇದುತ್ತಾನೆ, ಆಮೇಲೆ ಸುಮ್ಮನೆ ಕುಳಿತು ಕೊಳ್ಳುತ್ತಾನೆ, ಇದರಿಂದ ನಿಮಗೆ ಪ್ರಯೋಜನವಾಗಲಿಲ್ಲವೆ? ಆದ್ದರಿಂದ ಈರೀತಿಯ ದಾನಧರ್ಮಗಳ ಪರಿಣಾಮವು ಸಮಾಜಕ್ಕೆ ಒಳ್ಳೆಯದಲ್ಲದೆ, ಮತ್ತೇನೂ ಅಲ್ಲ".

ಮೊದಲಿನಿಂದಲೂ ಸ್ವಾಮಿಜಿ ಬಾಲ್ಯವಿವಾಹ ಪದ್ಧತಿಯನ್ನು ವಿರೋಧಿಸು ತ್ತಿದ್ದರು. ಅವರು ಯಾವಾಗಲೂ, ಎಲ್ಲರಿಗೂ, ಅದರಲ್ಲಿಯೂ ವಿಶೇಷವಾಗಿ ಹುಡುಗರಿಗೆ ಈ ಸಾಮಾಜಿಕ ದುಷ್ಟಪದ್ಧತಿ ವಿರುದ್ಧ ದೃಢವಾಗಿ ನಿಲ್ಲುವಂತೆ ಬೋಧಿಸುತ್ತಿದ್ದರು. ನಾನು ಅಂತಹ ದೇಶಭಕ್ತಿಯನ್ನು ಅನ್ಯವ್ಯಕ್ತಿಗಳಲ್ಲಿ ಎಂದೂ ನೋಡಿರಲಿಲ್ಲ. ಸ್ವಾಮಿಜಿ ಪಾಶ್ಚಾತ್ಯ ದೇಶದಿಂದ ಹಿಂತಿರುಗಿದ ಮೇಲೆ ಅನೇಕರು ಅವರನ್ನು ಮೊದಲಬಾರಿ ಸಂಧಿಸಿದರು. ಅವರಲ್ಲಿ ಅನೇಕರಿಗೆ, ಸ್ವಾಮಿಜಿ ಪರಿವ್ರಾಜಕರಾಗಿದ್ದಾಗ ಎಷ್ಟೊಂದು ಕಠಿಣ ನಿಯಮಗಳನ್ನು ಪಾಲಿಸಿದರು, ಹಣವನ್ನೆ ಮುಟ್ಟದೆ ಭಾರತದ ಆದ್ಯಂತ ಹೇಗೆ ಸಂಚರಿಸಿದರು ಮುಂತಾದ ವಿಚಾರ ಗಳೆಲ್ಲಾ ಗೊತ್ತಿರಲಿಲ್ಲ. ಯಾರೊ ಒಬ್ಬರು ಸೂಚಿಸಿದರು, ಅಂತಹ ದೃಢವಾದ ಮನಶ್ಶಕ್ತಿ ಹೊಂದಿರುವ ವ್ಯಕ್ತಿ ಅಷ್ಟೊಂದು ನಿಯಮಗಳನ್ನು ಪಾಲಿಸುವ ಆವಶ್ಯ ಕತೆಯಿಲ್ಲ ಎಂದು. ಅವರು ಉತ್ತರಿಸಿದರು: "ಇಲ್ಲಿ ನೋಡಿ, ಮನಸ್ಸು ಅಷ್ಟೊಂದು ಹುಚ್ಚು ಹುಚ್ಚು, ಅಷ್ಟೊಂದು ಉನ್ಮತ್ತ. ಅದೆಂದಿಗೂ ಸುಮ್ಮನೆ ಕುಳಿತಿರುವುದಿಲ್ಲ; ಅದಕ್ಕೆ ಸ್ವಲ್ಪ ಅವಕಾಶ ಸಿಕ್ಕಿದರೂ, ಅದೇ ನಿಮ್ಮನ್ನು ಎಳೆಯುತ್ತದೆ. ಮನಸ್ಸಿನ ಮೇಲೆ ಹತೋಟಿ ಇಟ್ಟುಕೊಂಡಿರಲು ಸಂನ್ಯಾಸಿ ಕೂಡ ನಿಯಮಗಳನ್ನು ಪಾಲಿಸ ಬೇಕು. ಮನಸ್ಸಿನ ಮೇಲೆ ಸಂಪೂರ್ಣ ಹತೋಟಿ ಸಾಧಿಸಿರುವವರು ಮತ್ತು

ಅಂತೆಯೇ ಸ್ವಲ್ಪ ಸ್ವಾತಂತ್ರ್ಯ ಕೊಟ್ಟಿರುವವರೂ ಎಲ್ಲರೂ ಮಾಯೆಯ ಅಧೀನ ವಾಗಿರುತ್ತಾರೆ. ಧ್ಯಾನಕ್ಕೆ ಕುಳಿತಾಗ, ನಮ್ಮ ಮನಸ್ಸಿನ ಮೇಲೆ ನಾವು ಎಷ್ಟು ಹತೋಟಿಯನ್ನು ಸಾಧಿಸಿದ್ದೇವೆಂಬುದನ್ನು ಚೆನ್ನಾಗಿ ಅರಿತುಕೊಳ್ಳಬಹುದು. ನಿರ್ದಿಷ್ಟ ವಸ್ತುವನ್ನು ಕುರಿತು ಸ್ವಲ್ಪಹೊತ್ತು ಆಲೋಚಿಸಲು ಪ್ರಯತ್ನಿಸಿದಾಗ ಒಂದು ಹತ್ತು ನಿಮಿಷವೂ ಆ ವಸ್ತುವಿನ ಮೇಲೆ ಮನಸ್ಸನ್ನು ಕೇಂದ್ರೀಕರಿಸಲಾರೆವು. ಪ್ರತಿಯೊಬ್ಬರೂ ಭಾವಿಸುತ್ತಾರೆ: ತಾವೇನು ಹೆಣ್ಣಿಗರಲ್ಲ; ಪ್ರೀತಿಯ ಸ್ವಯಂ ಇಚ್ಛೆಯಿಂದ ತಮ್ಮ ಹೆಂಡತಿಯರಿಗೆ ತಮ್ಮ ಮೇಲೆ ಒಂದಿಷ್ಟು ಅಧಿಕಾರ ಚಲಾಯಿಸಲು ಅವಕಾಶ ನೀಡಿದ್ದೇವೆ—ಹೀಗೆಂದು. ಇದೇ ರೀತಿಯಲ್ಲಿ ನಮ್ಮ ಮನಸ್ಸೂ ಬದ್ಧವಾಗಿರುತ್ತದೆ. ಮನಸ್ಸಿನ ಮೇಲೆ ನನಗೆ ಸಂಪೂರ್ಣ ಹತೋಟಿ ಇದೆ ಎಂಬ ಭ್ರಮೆಗೆ ಎಂದೂ ವಶವಾಗಬೇಡಿ ".

ಮಾತಿನ ಮಧ್ಯದಲ್ಲಿ ನಾನು ಹೇಳಿದೆ: " ಸ್ವಾಮಿಜಿ, ಧರ್ಮವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಉನ್ನತ ವ್ಯಾಸಂಗ ಮಾಡಿರಬೇಕೆಂದು ನಾನು ಭಾವಿಸಿದ್ದೇನೆ ". ಅವರು ಹೇಳಿದರು : " ನಮಗೆ ನಾವೇ ಧರ್ಮವನ್ನು ತಿಳಿದುಕೊಳ್ಳಲು ಅಂತಹ ಉನ್ನತ ವಿದ್ಯಾಭ್ಯಾಸದ ಆವಶ್ಯಕತೆ ಇಲ್ಲ ; ಆದರೆ ಬೇರೆಯವರಿಗೆ ವಿವರಿಸಿ ಹೇಳಬೇಕಾದರೆ ಅದು ಬೇಕು. ರಾಮಕೃಷ್ಣ ಪರಮಹಂಸರು ತಮ್ಮ ಸಹಿಯನ್ನು ' ರಾಮಕಿಷ್ಟ ' ಎಂದು ಮಾಡುತ್ತಿದ್ದರು. ಆದರೆ ನಿಜವಾಗಿಯೂ ಧರ್ಮದ ಸಾರವನ್ನು ಅವರಿಗಿಂತಲೂ ಮಿಗಿಲಾಗಿ ಅರಿತವರು ಯಾರು ? "

ಸಾಧು, ಸಂನ್ಯಾಸಿಗಳು ಯಾವಾಗಲೂ ಬಡಕಲಾಗಿ ಅತೃಪ್ತರಾಗಿರುತ್ತಾರೆ ಎಂಬುದು ನನ್ನ ಭಾವನೆಯಾಗಿತ್ತು. ಒಂದು ದಿನ ನಾನು ವ್ಯಂಗ್ಯ ನಗುವಿನಿಂದ ಸ್ವಾಮಿಜಿ ಹತ್ತಿರ ಆ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಅವರು ಪರಿಹಾಸ್ಯ ಧ್ವನಿಯಿಂದ ಹೇಳಿದರು : " ಇದು ನನ್ನ ಆಪದ್ಧನ ! ನನಗೆ ಒಂದು ಪಕ್ಷ ದಿನವೆಲ್ಲಾ ಆಹಾರ ಸಿಕ್ಕದಿದ್ದರೂ ನನ್ನ ಕೊಬ್ಬು ನನಗೆ ತ್ರಾಣ ನೀಡುತ್ತದೆ; ಬದಲಾಗಿ ನಿನಗೇನಾದರೂ ಹಾಗಾದರೆ ಆಗಲೆ ತಲೆಸುತ್ತಲು ಪ್ರಾರಂಭವಾಗುತ್ತದೆ. ಧರ್ಮ ಮನಸ್ಸಿಗೆ ಶಾಂತಿಯನ್ನು ತಂದುಕೊಡದಿದ್ದರೆ ಅದು ಅಜೀರ್ಣರೋಗದಂತೆ ತ್ಯಾಜ್ಯ ".

ಸಂಗೀತದಲ್ಲಿ ಅವರು ಅದ್ವಿತೀಯರಾಗಿದ್ದರು. ಒಂದು ದಿನ ಅವರು ಹಾಡಲು ಪ್ರಾರಂಭಿಸಿದರು ; ಅದನ್ನು ಮೆಚ್ಚಲು ನನಗೆ ಯಾವ ಸಂಸ್ಕಾರದ ಹಿನ್ನೆಲೆಯೂ ಇರಲಿಲ್ಲ ; ಅಲ್ಲದೆ ಅದನ್ನು ಕೇಳುವುದಕ್ಕೆ ನನಗೆ ಸಮಯವೆಲ್ಲಿ ? ಅವರ ಮಾತು ಕತೆಗಳಿಂದ ನಾವೆಲ್ಲಾ ಆಕರ್ಷಿತರಾಗಿದ್ದೆವು. ಅವರಿಗೆ ಆಧುನಿಕ ವಿಜ್ಞಾನದ ವಿವಿಧ ಶಾಖೆಗಳಲ್ಲಿ ಚೆನ್ನಾಗಿ ಪರಿಶ್ರಮವಿತ್ತು. ಉದಾಹರಣೆಗೆ, ರಸಾಯನಶಾಸ್ತ್ರ, ಭೌತಶಾಸ್ತ್ರ, ಖಗೋಳಶಾಸ್ತ್ರ, ಭೂಗರ್ಭಶಾಸ್ತ್ರ, ಮಿಶ್ರಗಣಿತ ಇತ್ಯಾದಿ. ಇವುಗಳೆಲ್ಲದರ ಸಹಾಯದಿಂದ ಅವರು ಕೆಲವೇ ಮಾತುಗಳಲ್ಲಿ ನಮ್ಮ ಸಮಸ್ಯೆಗಳನ್ನು

ಪರಿಹರಿಸುತ್ತಿದ್ದರು. ಜಟಿಲವಾದ ಧಾರ್ಮಿಕ ಸಮಸ್ಯೆಗಳನ್ನೆಲ್ಲಾ ವಿಜ್ಞಾನದ ಸಾದೃಶ್ಯ ಮತ್ತು ನೆರವಿನಿಂದ ಬಿಡಿಸುತ್ತಿದ್ದರು. ಧರ್ಮ ಮತ್ತು ವಿಜ್ಞಾನ ಎರಡರ ಗುರಿಯೂ ಒಂದೇ ಮತ್ತು ಅವೆರಡರ ಪ್ರಗತಿಯೂ ಪರಸ್ಪರ ಪೂರಕ ಎಂಬುದನ್ನು ಅಷ್ಟು ಶಕ್ತಿಯುತವಾಗಿ ಪ್ರಮಾಣೀಕರಿಸುವ ಇತರರು ಯಾರೂ ನನಗೆ ತಿಳಿದಿಲ್ಲ.

ಅವರು ಮೆಣಸಿನ ಕಾಯಿ, ಮೆಣಸಿನ ಕಾಳು ಮುಂತಾದ ಕಟುವಾದ ಪದಾರ್ಥಗಳನ್ನು ಇಷ್ಟಪಡುತ್ತಿದ್ದರು. ಒಂದು ದಿವಸ ನಾನು ಅದಕ್ಕೆ ಕಾರಣ ಕೇಳಲು, ಹೇಳಿದರು : "ಸಾಧುವಾದವನು ಅಲೆಯುತ್ತಿರುವಾಗ ಸಿಕ್ಕಿದ ಆಹಾರ ತಿನ್ನಬೇಕಾಗುತ್ತದೆ; ಬೇರೆಬೇರೆ ಜಾಗದ ನೀರು ಕುಡಿಯಬೇಕಾಗುತ್ತದೆ. ಅವುಗಳ ದುಷ್ಪರಿಣಾಮದಿಂದ ತಪ್ಪಿಸಿಕೊಳ್ಳಲು, ಅನೇಕ ಸಂನ್ಯಾಸಿಗಳು ಅಫೀಮು ಮುಂತಾದ ಮಾದಕ ಪದಾರ್ಥದಲ್ಲಿ ಸಂಸಕ್ತರಾಗಿರುತ್ತಾರೆ. ಅದೇ ಕಾರಣಕ್ಕಾಗಿ ನಾನು ಮೆಣಸಿನ ಕಾಯಿ ಸೇವಿಸುತ್ತೇನೆ."

ದಖನ್ ಮತ್ತು ರಾಜಾಸ್ಥಾನದಂತೆ ಇನ್ನೂ ಅನೇಕ ಕಡೆಯ ರಾಜಕುಮಾರರು ಸ್ವಾಮಿಜಿಯನ್ನು ತುಂಬ ಗೌರವಿಸುತ್ತಿದ್ದರು. ಸ್ವಾಮಿಜಿ ಸಹ ಅವರುಗಳನ್ನು ಪ್ರಾಮಾಣಿಕವಾಗಿ ಪ್ರೀತಿಸುತ್ತಿದ್ದರು. ಇವರಂತಹ ನಿಷ್ಠಾವಂತ ಸಂನ್ಯಾಸಿ ರಾಜಮಹಾರಾಜರೊಡನೆಲ್ಲ ಏಕೆ ಇಷ್ಟೊಂದು ಬೆರೆಯುತ್ತಾರೆ ಎಂಬುದು ಅನೇಕರಿಗೆ ಅರ್ಥವಾಗುತ್ತಿರಲಿಲ್ಲ. ಈ ಅನನ್ವಯವನ್ನು ವ್ಯಂಗ್ಯವಾಗಿ ಆಡಿಕೊಂಡ ಮೂರ್ಖರೂ ಅನೇಕರಿದ್ದಾರೆ. ಕಾರಣ ಕೇಳಿದಾಗ, ಸ್ವಾಮಿಜಿ ಒಂದು ದಿನ ವಿವರಿಸಿದರು : "ನೂರಾರು ಬಡಜನರನ್ನು ನನ್ನ ಬೋಧನೆಯಿಂದ ನಿರ್ದಿಷ್ಟ ಕರ್ಮಮಾರ್ಗದತ್ತ ಪರಿವರ್ತಿಸುವುದಕ್ಕೂ, ಒಬ್ಬರಾಜಕುಮಾರನನ್ನು ಪರಿವರ್ತಿಸುವುದಕ್ಕೂ ಪರಿಣಾಮದಲ್ಲಿ ಆಗುವ ವ್ಯತ್ಯಾಸವನ್ನು ಗಮನಿಸಿ. ಬಡಜನರಿಗೆ ಇಷ್ಟವಿದ್ದರೂ ಅದನ್ನು ನೆರವೇರಿಸಲು ಬೇಕಾದ ಆರ್ಥಿಕ ಬೆಂಬಲವಿಲ್ಲ. ರಾಜಕುಮಾರರಿಗೆ ತನ್ನ ಉದ್ದೇಶ ಸಾಧನೆಗೆ ಬೇಕಾದ ಉತ್ತಮ ಅನುಕೂಲವಿದೆ; ಆದರೆ ನೆರವೇರಿಸಲು ಬೇಕಾದ ಇಚ್ಛೆಯ ಅಭಾವವಿದೆ. ಒಮ್ಮೆ ಆ ಇಚ್ಛೆಯನ್ನು ಅವರಲ್ಲಿ ಜಾಗೃತಗೊಳಿಸಿದರೆ, ಅವರ ಪ್ರಜೆಗಳ ಬಾಳಿಗೆ ಉತ್ತಮದೆಸೆ ಒದಗುತ್ತದೆ; ಅದರಿಂದ ಸಮಾಜಕ್ಕೆ ಅಪಾರ ಉಪಯೋಗವಾಗುತ್ತದೆ."

ಧರ್ಮವನ್ನು ವಿವರಿಸಬೇಕಾದರೆ, ಅದು ಇರುವುದು ವಿದ್ವಾಂಸರ ಚರ್ಚೆ ವಿಚರ್ಚೆಯಲ್ಲಲ್ಲ, ಅದನ್ನು ಸಾಕ್ಷಾತ್ಕರಿಸಿಕೊಳ್ಳುವುದರಲ್ಲಿ. ಅವರು ಹೇಳುತ್ತಿದ್ದರು: "ಗಿಣ್ಣಿಗೆ ರುಜುವಾತು ಅದನ್ನು ತಿನ್ನುವುದರಲ್ಲಿದೆ. ಸಾಕ್ಷಾತ್ಕರಿಸಿಕೊ. ಹಾಗಲ್ಲದೆ ನೀನು ಏನನ್ನೂ ಅರಿಯಲಾರೆ." ಕಳ್ಳ ಸಂನ್ಯಾಸಿಗಳ ಬಗ್ಗೆ ಅವರು ಯಾವ ರೀತಿಯ ದಯಾದಾಕ್ಷಿಣ್ಯವನ್ನೂ ತೋರಿಸುತ್ತಿರಲಿಲ್ಲ. ಅವರು ಹೇಳುತ್ತಿದ್ದರು: "ಮನೆಯಲ್ಲಿರುವಾಗಲೆ ನಾವು ನಮ್ಮ ಮನಸ್ಸಿನ ಮೇಲೆ ಹತೋಟಿ ಸಾಧಿಸಬೇಕು: ಅನಂತರ ಸಂಸಾರ ತ್ಯಾಗಮಾಡಬಹುದು. ಹಾಗಲ್ಲದೆ ಅಫೀಮು ಸೇದುವ ಸಾಧು

ಸಂಗದಲ್ಲಿ ಒಮ್ಮೆ ಬೆರೆತರೆ ನಮ್ಮ ಮೊದಲಿನ ತೇಜಸ್ಸು ನಶಿಸಿಹೋಗುತ್ತದೆ." "ಆದರೆ ಮನೆಯಲ್ಲಿ ಅದನ್ನು ಪಡೆಯುವುದು ಕಷ್ಟ—". ನಾನು ಮಧ್ಯೆ ಬಾಯಿ ಹಾಕಿದೆ: "ಉದಾಹರಣೆಗೆ, ಸಿದ್ಧವ್ಯಕ್ತಿಯಾಗಲು ಉತ್ತಮವು ಮಾರ್ಗವೆಂದು ನೀವು ಹೇಳಿದ ನಿರ್ಲಿಪ್ತತೆ, ನಿಷ್ಕಾಮ ಮುಂತಾದ ಗುಣಗಳನ್ನು ಪಡೆಯಲು ನಾನು ಸಾಧನೆಗೆ ತೊಡಗಿದೆ. ಮಾರನೆ ದಿನದಿಂದಲೆ ನನ್ನ ಸೇವಕರು, ಸಹಾಯಕರು, ಕೊನೆಗೆ ಕುಟುಂಬದ ಇತರರೂ ನಾನು ಒಂದು ಕ್ಷಣವೂ ನೆಮ್ಮದಿಯಿಂದಿರಲು ಬಿಡಲಿಲ್ಲ." ಉತ್ತರ ರೂಪವಾಗಿ ಅವರು, ಶ್ರೀ ರಾಮಕೃಷ್ಣರು ಹೇಳುತ್ತಿದ್ದ ಸಾಧು ಮತ್ತು ಹಾವಿನ ಕತೆಯನ್ನು ದೃಷ್ಟಾಂತವಾಗಿ ನೀಡಿದರು. ಮುಂದುವರಿದು ಹೇಳಿದರು: "ಬುಸುಗುಟ್ಟುವುದನ್ನು ಎಂದಿಗೂ ಬಿಡಬೇಡ. ನಿನ್ನ ಕರ್ತವ್ಯವೆಂದು ಭಾವಿಸಿ ನಿನ್ನ ಕೆಲಸಗಳನ್ನು ಮಾಡುತ್ತಾ ಹೋಗು. ಶಿಕ್ಷಿಸಲೇಬೇಕಾದಾಗ ಶಿಕ್ಷಿಸು. ಶಿಕ್ಷಿಸುವಾಗ ಕೋಪೋದ್ರಿಕ್ತನಾಗದಿರು." ಆಮೇಲೆ ಮತ್ತೆ ಮೊದಲಿನ ವಿಷಯಕ್ಕೆ ಬಂದು ಹೇಳಿದರು: "ಒಮ್ಮೆ ಒಂದು ಯಾತ್ರಾ ಸ್ಥಳದಲ್ಲಿ ನಾನು ಒಬ್ಬ ಪೋಲೀಸ್ ಇನ್‌ಸ್ಪೆಕ್ಟರನ ಅತಿಥಿಯಾಗಿದ್ದೆ. ಅವನೊಬ್ಬ ಧಾರ್ಮಿಕ ಮನುಷ್ಯ; ಅವನಿಗೆ ಸ್ವಲ್ಪ ಭಕ್ತಿಯೂ ಇತ್ತು. ಅವನ ತಿಂಗಳ ವೇತನ ೧೨೫ ರೂ. ಆದರೆ ಅವನ ತಿಂಗಳ ಖರ್ಚು ೨೦೦ ಅಥವಾ ೩೦೦ ರೂಗಳಿಗೂ ಮೀರಿರುತ್ತಿತ್ತು. ನಾವು ಹೆಚ್ಚು ಪರಿಚಿತರಾದಮೇಲೆ, ನಾನು ಕೇಳಿದೆ: "ನಿನ್ನ ಆದಾಯಕ್ಕಿಂತ ಖರ್ಚೆ ಅಧಿಕವಾಗಿರುವಂತೆ ತೋರುತ್ತದೆ. ಹೇಗೆ ನಿಭಾಯಿಸುತ್ತಿಯೆ?" ಅವನು ನಗುತ್ತಾ ಹೇಳಿದ: "ಈ ಯಾತ್ರಾಸ್ಥಳಕ್ಕೆ ಬರುವ ಸಾಧುಗಳೆಲ್ಲಾ ನಿಮ್ಮಷ್ಟೇ ಸಜ್ಜನರೆಂದು ಭಾವಿಸಬೇಡಿ. ನನಗೇನಾದರೂ ಸಂಶಯ ಬಂದರೆ, ಅವರ ಸರಕು ಗಳನ್ನು ಶೋಧಿಸುತ್ತೇನೆ; ಆಗಾಗ ಸಾಕಷ್ಟು ಹಣ ಸಿಗುತ್ತದೆ. ಅವರುಗಳಲ್ಲಿ ಯಾರಾದರೂ ಕದ್ದಿದ್ದಾರೆ ಎಂಬ ಗುಮಾನಿ ಬಂದಾಗ, ಅವರು ತಮ್ಮ ಸರಕನ್ನೆಲ್ಲಾ ಅಲ್ಲಿಯೆ ಬಿಟ್ಟು, ಹೇಳದೆ ಕೇಳದೆ ಕಾಲುಕೀಳುತ್ತಾರೆ. ಆಗ ಅದೆಲ್ಲಾ ನನ್ನ ಸ್ವತ್ತಾಗುತ್ತದೆ. ಹೀಗಲ್ಲದೆ ಲಂಚ ಇತ್ಯಾದಿ ಯಾವ ಕೀಳು ಮಾರ್ಗಗಳನ್ನೂ ನಾನು ಅವಲಂಬಿಸಿಲ್ಲ."

ಒಂದು ದಿನ ನಾನು ಸ್ವಾಮಿಜಿಯೊಂದಿಗೆ ಅನಂತತೆಯನ್ನು ಕುರಿತು ಬಹು ಸ್ವಾರಸ್ಯಕರ ಮಾತುಕತೆಯನ್ನು ನಡೆಸಿದೆ. ಕಾಲ, ಹಾಗೆಯೆ ಆಕಾಶ ಸಹ ಅನಂತವಾದದ್ದು ಎಂದು ನಾನು ಹೇಳಿದಾಗ, ಅವರು ಉತ್ತರಿಸಿದರು: "ಆಕಾಶ ಅನಂತವೆಂಬುದನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ಕಾಲ ಹೇಗೆ ಅನಂತ ವೆಂಬುದು ನನ್ನ ತಿಳುವಳಿಕೆಗೆ ಮೀರಿದೆ. ಎರಡು ಅನಂತಗಳಿದ್ದರೆ ಅವುಗಳ ಎಲ್ಲೆಯನ್ನು ನೀನು ಹೇಗೆ ಗುರುತಿಸುವೆ? ನೀನು ಮುಂದುವರಿದಂತೆ ಕಾಲ ಮತ್ತು ಆಕಾಶಗಳೆರಡೂ ಒಂದರೊಳಗೆ ಒಂದು ವಿಲೀನವಾಗುವುದನ್ನು ಕಂಡುಕೊಳ್ಳುವೆ. ಇನ್ನೂ ಮುಂದುವರಿದಂತೆ ಎಲ್ಲ ವಸ್ತುಗಳೂ ಅನಂತವಾಗಿರುವುದನ್ನು ತಿಳಿಯುವೆ.

ಆದರೆ ಆ ಅನಂತವಸ್ತುಗಳು ಅವುಗಳ ಮೂಲಸತ್ತ್ವದಲ್ಲಿ ಒಂದೇ ಆಗಿರುವುವಲ್ಲದೆ, ಎರಡಲ್ಲ."

ಹೀಗೆ ಅಕ್ಟೋಬರ್ ೨೬ರವರೆಗೆ ಸ್ವಾಮಿಜಿ ನಮ್ಮೊಡನೆ ಇದ್ದರು. ಮನೆಯಲ್ಲೆಲ್ಲಾ ಹಬ್ಬದ ಸಂತೋಷ ನೆಲೆಸಿತ್ತು. ೨೭ನೆ ತಾರೀಖು ಹೇಳಿದರು: "ನಾನು ಇನ್ನು ಹೆಚ್ಚುಕಾಲ ಇರಲಾರೆ. ರಾಮೇಶ್ವರವನ್ನು ತಲುಪುವ ಉದ್ದೇಶದಿಂದ ದಕ್ಷಿಣದ ಕಡೆಗೆ ಹೋಗುತ್ತಿದ್ದೇನೆ." ಅವರನ್ನು ಪುನಃ ಉಳಿಯುವಂತೆ ಮಾಡುವ ನನ್ನ ಕೇಳಿಕೆ ನಿಷ್ಫಲವಾಯಿತು. ೨೭ನೆ ತಾರೀಖು ಅವರು ಮರ್ಮಗಾನ್ (Marmagaon)ನ ರೈಲಿನಲ್ಲಿ ಹೋಗಲು ನಿರ್ಧರಿಸಿದರು. ಅವರಿಗಾಗಿ ನಾನು ಒಂದು ಟಿಕೇಟನ್ನು ತೆಗೆಸಿಕೊಟ್ಟೆ. ಅವರನ್ನು ರೈಲಿನಲ್ಲಿ ಕೂರಿಸಿದ ಮೇಲೆ ಅವರಿಗೆ ನಮಸ್ಕರಿಸಿ ಹೇಳಿದೆ: "ಸ್ವಾಮಿಜಿ, ನನ್ನ ಈ ಜೀವ ಮಾನದಲ್ಲಿ ಯಾರಿಗೂ ಎಂದೂ ಹೀಗೆ ಹೃದಯ ತುಂಬಿ ನಮಸ್ಕರಿಸಲಿಲ್ಲ; ಈಗ ಹಾಗೆ ಮಾಡುತ್ತಿದ್ದೇನೆ. ಅದಕ್ಕೆ ತಕ್ಕ ಪ್ರತಿಫಲವನ್ನು ಅನುಭವಿಸುತ್ತಿರುವ ಭಾವನೆ ತುಂಬಿ ಬಂದಿದೆ."

೨

ನಾನು ಸ್ವಾಮಿಜಿಯನ್ನು ಕೇವಲ ಮೂರು ಬಾರಿ ಮಾತ್ರ ಸಂಧಿಸಿದೆ. ಮೊದಲನೆ ಭೇಟಿ ಅವರು ಅಮೆರಿಕಾಕ್ಕೆ ಹೋಗುವ ಮೊದಲು. ಅದು ಸಂಭವಿಸಿದ್ದು ಬೆಳಗಾಂನಲ್ಲಿ; ಅದರ ವಿಚಾರವಾಗಿ ನಾನು ಆಗಲೆ ಸಾಕಷ್ಟು ಹೇಳಿದ್ದೇನೆ. ಎರಡನೆಯ ಭೇಟಿ, ಅವರು ಎರಡನೆ ಸಲ ಪಾಶ್ಚಾತ್ಯ ದೇಶಗಳಿಗೆ ಹೋಗುವ ಮುನ್ನ. ಮೂರನೆ ಸಲ ಸಂಧಿಸಿದ್ದು, ಅವರು ಈ ಲೋಕದಿಂದಲೆ ತೆರಳುವುದಕ್ಕೆ ಐದಾರು ತಿಂಗಳು ಮೊದಲು. ಈ ಭೇಟಿಗಳಲ್ಲೆಲ್ಲಾ ನಾನು ಅವರಿಂದ ಕಲಿತದ್ದನ್ನು ವಿವರ ವಾಗಿ ಹೇಳುವುದು ಅಸಾಧ್ಯ. ಕೆಲವು ಸಂಗತಿಗಳು ಇಲ್ಲಿ ಹೇಳಲಾರದಷ್ಟು ವೈಯಕ್ತಿಕ ವಾಗಿವೆ; ಮತ್ತೆ ಕೆಲವು ನನ್ನ ನೆನಪಿನಿಂದ ನುಣುಚಿಕೊಂಡಿವೆ. ಇನ್ನು ನನ್ನ ನೆನಪಿನಲ್ಲಿರುವ, ಸಾಮಾನ್ಯ ವಾಚಕರಿಗೆ ಕುತೂಹಲಕರವಾಗಿರುವ ಸಂಗತಿಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸುತ್ತೇನೆ.

ಅವರು ಪಾಶ್ಚಾತ್ಯ ದೇಶದಿಂದ ಹಿಂತಿರುಗಿ ಬಂದಿದ್ದಾಗಲಷ್ಟೆ, ಮದ್ರಾಸಿನಲ್ಲಿ ಕೆಲವು ಉಪನ್ಯಾಸಗಳನ್ನು ಕೊಟ್ಟರು. ಆಗ ಜಾತಿಪದ್ಧತಿ ವಿಚಾರವಾಗಿ ಪ್ರಸ್ತಾಪಿಸುತ್ತಾ ಅವರು ಉಪಯೋಗಿಸಿದ ಭಾಷೆ ತುಂಬ ಕಟುವಾಯಿತೆಂದು ನನಗೆ ತೋರಿತು. ನಾನು ಹಾಗೆಂದೇ ಅವರಿಗೆ ಹೇಳಿದೆ; ಅವರು ಈ ರೀತಿ ಉತ್ತರಿಸಿದರು: "ನಾನು ಸತ್ಯವನ್ನೇ ನುಡಿದೆ, ಸತ್ಯವಲ್ಲದ್ದು ಏನನ್ನೂ ಆಡಲಿಲ್ಲ. ಪರಿಸ್ಥಿತಿಯ ಭೀಕರತೆಯೊಂದಿಗೆ ಹೋಲಿಸಿದಾಗ, ನಾನು ಉಪಯೋಗಿಸಿದ ಭಾಷೆಯ ಕಟುತ್ವ ಏನೂ ಇಲ್ಲವೆನ್ನಬಹುದು. ಸತ್ಯವನ್ನೇಕೆ ನೀರುನೀರು

ಮಾಡಬೇಕು? ಏಕೆ ಮರೆಮಾಚಬೇಕೊ ನನಗೆ ತಿಳಿಯದು. ಅದಕ್ಕೇ ನಾನು ಆ ಪದ್ಧತಿಗಳನ್ನು ಖಂಡಿಸಿದೆ. ಹಾಗೆಂದು ನನಗೆ ಆ ಜನರ ಬಗ್ಗೆ ದುರಭಿಪ್ರಾಯ ವಿದೆಯೆಂದೂ ಅರ್ಥವಲ್ಲ; ಅಥವಾ ನಾನು ಕರ್ತವ್ಯ ಪ್ರಜ್ಞೆ ಇಲ್ಲದೆ ಏನನ್ನಾದರೂ ಮಾಡಿದ್ದೇನೆಂದು ಸ್ವಲ್ಪವೂ ಖಿನ್ನನಾಗಿಲ್ಲ; ಈ ಎರಡೂ ಪರಿಸ್ಥಿತಿಯೂ ನಿಜ ವಾದದ್ದೆ; ನಾನು ಕೋಪೋದ್ರಿಕ್ತನಾಗಿ ಮಾತನಾಡಲಿಲ್ಲ; ಈಗ ಅದಕ್ಕಾಗಿ ಪಶ್ಚಾತ್ತಾಪ ಪಡುವುದೂ ಇಲ್ಲ; ಮತ್ತೊಮ್ಮೆ ಅದೇ ರೀತಿಯ ಅಹಿತ ಕರ್ತವ್ಯವನ್ನು ನೆರವೇರಿಸಬೇಕಾದ ಸಂದರ್ಭ ಒದಗಿದರೆ, ನಾನು ಸ್ವಲ್ಪವೂ ಹಿಂಜರಿಯದೆ ಮತ್ತೆ ಹಾಗೆಯೆ ಮಾಡುತ್ತೇನೆ."

ಕಪಟ ಸಂನ್ಯಾಸಿಗಳ ಬಗ್ಗೆ ಅವರಿಗಿದ್ದ ಭಾವನೆಯನ್ನು ನಾನು ಹಿಂದೆಯೆ ಪ್ರಸ್ತಾಪಿಸಿದ್ದೇನೆ. ಮತ್ತೊಂದು ದಿವಸ ಅದೇ ವಿಷಯದ ಮೇಲೆ ಮಾತು ಬೆಳೆದು ಅವರು ಹೇಳಿದರು: "ಅದೇನೋ ನಿಜ; ಕೆಲವು ಠಕ್ಕರೂ ಸಂನ್ಯಾಸಿಗಳ ವೇಷ ಕಟ್ಟುತ್ತಾರೆ—ತಮ್ಮ ಪಾತಕ ಕೃತ್ಯಗಳಿಂದ ತಪ್ಪಿಸಿಕೊಳ್ಳಲೊ ಅಥವಾ ಘೋರ ಅಪರಾಧಗಳನ್ನು ಮಾಡಿ ಪತ್ತೆಹಚ್ಚದಂತೆ ಮರೆಮಾಡಿಕೊಳ್ಳಲೊ. ಆದರೆ ಅವರನ್ನು ಹಳಿಯುವಾಗ, ಸಮಾಜವೂ ಅದರಲ್ಲಿ ಅಷ್ಟೇ ಪಾಲುಗೊಳ್ಳಬೇಕಾಗುತ್ತದೆ. ಸಮಾಜ ಒಬ್ಬನನ್ನು ಅಪನಂಬಿಕೆಯಿಂದ ನಡೆಸಿಕೊಂಡಾಗ, ಅವನು ಅದಷ್ಟು ಜಾಗ್ರತೆ ಅದರಿಂದ ಪಾರಾಗಲು ಸುಲಭೋಪಾಯವಾದ ಸಂನ್ಯಾಸ ಸ್ವೀಕರಿಸು ತ್ತಾನೆ ನಿಮ್ಮ ಎಣಿಕೆಯಲ್ಲಿ ಅವನು ಹೊಟ್ಟೆತುಂಬ ತಿನ್ನುವುದೂ ತಪ್ಪು; ಹಾಸಿಗೆಯ ಮೇಲೆ ಮಲಗುವುದೂ ತಪ್ಪು. ಕೊನೆಗೆ ಅತ್ಯಂತ ಸಾಮಾನ್ಯ ವಸ್ತು ಗಳಾದ ಛತ್ರಿ ಬೂಟುಗಳನ್ನೂ ಉಪಯೋಗಿಸಬಾರದು. ಏಕೆ, ಅವನೂ ನಿಮ್ಮಂತೆ ಮನುಷ್ಯನಲ್ಲವೇನು? ಒಬ್ಬ ವ್ಯಕ್ತಿ ಪರಮಹಂಸನೇ ಆಗಿದ್ದಲ್ಲದೆ, ಕಾವಿಬಟ್ಟೆ ಧರಿಸಬಾರದು ಎಂದು ಭಾವಿಸುವುದು ತುಂಬಾ ತಪ್ಪು. ಒಮ್ಮೆ ನಾನು ಒಳ್ಳೇ ಶೋಕಿ ಬಟ್ಟೆ ಧರಿಸಿದ ಒಬ್ಬ ಸಾಧುವನ್ನು ಸಂಧಿಸಿದೆ. ಅವನೊಬ್ಬ ವಿಲಾಸಿ ಮನುಷ್ಯ ಎಂದು ನೀವು ತಪ್ಪು ತಿಳಿಯಬಹುದಾಗಿತ್ತು. ಆದರೆ ವಾಸ್ತವವಾಗಿಯೂ ಅವನೊಬ್ಬ ಸಾಚಾ ಸಂನ್ಯಾಸಿ."

ಸ್ವಾಮಿಜಿ ಹೇಳುತ್ತಿದ್ದರು: "ಮನುಷ್ಯರ ಮನೋಧರ್ಮಗಳೂ ಭಾವನೆಗಳೂ ಕಾಲದೇಶ ಸನ್ನಿವೇಶವನ್ನವಲಂಬಿಸಿ ಭಿನ್ನ ಭಿನ್ನವಾಗಿರುತ್ತವೆ. ಧರ್ಮದಲ್ಲೂ ಇದೇ ಪರಿಸ್ಥಿತಿ ಇದೆ. ಅಲ್ಲದೆ, ಮತ್ತೆ, ಪ್ರತಿವ್ಯಕ್ತಿಗೂ ಯಾವುದಾದರೂ ಒಂದು ವಿಚಾರದಲ್ಲಿ ಹೆಚ್ಚಿನ ಪಕ್ಷಪಾತ ಇರುತ್ತದೆ; ಪ್ರಪಂಚದಲ್ಲಿ ಪ್ರತಿಯೊಬ್ಬನೂ ತಾನೇ ಇತರರಿಗಿಂತ ಹೆಚ್ಚು ಬುದ್ಧಿವಂತನೆಂದು ಭಾವಿಸುತ್ತಾನೆ, ಅದರಿಂದೇನೂ ಅಂತಹ ಹಾನಿಯಿಲ್ಲ; ಆದರೆ ನಿಜವಾದ ತೊಡಕು ಪ್ರಾರಂಭವಾಗುವುದು, ತನ್ನದನ್ನು ಬಿಟ್ಟು ಅನ್ಯರದಲ್ಲಿ ಸತ್ಯವಿಲ್ಲವೆಂದು ಯೋಚಿಸಹೊರಟಾಗ. ಪ್ರತಿಯೊಬ್ಬನೂ ಒಂದು ಸಂಗತಿಯನ್ನು ಇತರರೂ ತನ್ನ ದೃಷ್ಟಿಯಿಂದಲೆ ನೋಡಬೇಕು, ಹಾಗೆಯೆ ಅರ್ಥಮಾಡಿಕೊಳ್ಳ

ಬೇಕೆಂದು ಅಪೇಕ್ಷಿಸುತ್ತಾನೆ; ತಾನು ಅರಿತಿರುವುದು ಮಾತ್ರ ಸತ್ಯ, ಬೇರೆಯದೆಲ್ಲಾ ಅಲ್ಲವೆಂದು ತಿಳಿಯುತ್ತಾನೆ. ಆದರೆ ಅವನು ಪಟ್ಟು ಹಿಡಿದಿರುವ ಅಂತಹ ಭಾವನೆಗಳನ್ನು ಇತರರು ಅನುಮೋದಿಸುವುದಿಲ್ಲ. ಧಾರ್ಮಿಕ ಅಥವಾ ಇತರ ಲೌಕಿಕ ಜ್ಞಾನಕ್ಷೇತ್ರದಲ್ಲೂ ಹೀಗೇ ಇರುವುದು."

"ಏನೇ ಆದರೂ, ಯಾವ ಕ್ಷೇತ್ರದಲ್ಲಾಗಲಿ ಜಗತ್ತಿನ ಜನರಿಗೆಲ್ಲಾ ಏಕ ನಿಯಮವನ್ನು ಅನ್ವಯಿಸಲಾಗುವುದಿಲ್ಲ. ಉದಾಹರಣೆಗೆ, ನೈತಿಕ ಮೌಲ್ಯಗಳನ್ನು ಗಮನಿಸಬಹುದು; ಅಥವಾ ಸೌಂದರ್ಯ ಪ್ರಶಂಸೆಯಾಗಿರಬಹುದು; ಇವೂ ಕಾಲ ದೇಶ ಪರಿಸ್ಥಿತಿಗೆ ಅನುಗುಣವಾಗಿ ಬೇರೆಬೇರೆಯಾಗಿರುತ್ತವೆ. ಟಿಬೆಟ್‌ನಲ್ಲಿ ಬಹುಪತಿತ್ವವು ಒಂದು ಸಂದಿಗ್ಧಸ್ಥಿತಿಯಲ್ಲಿದೆ. ಹಿಮಾಲಯದಲ್ಲಿ ನಾನು ಸ್ವಲ್ಪ ಕಾಲ ತಂಗಿದ್ದಾಗ, ಅಂತಹ ಕುಟುಂಬದ ಸಹವಾಸದಲ್ಲಿದ್ದೆ. ಆ ಕುಟುಂಬದಲ್ಲಿ ಆರು ಜನ ಪುರುಷರಿದ್ದರು. ಅವರಿಗೆಲ್ಲಾ ಏಕಮಾತ್ರ ಸತಿಯಿದ್ದಳು. ನಮ್ಮಲ್ಲಿ ಪರಸ್ಪರ ಹೆಚ್ಚು ಸಲಿಗೆ ಬೆಳೆದ ಮೇಲೆ, ನಾನು ಆ ಪದ್ಧತಿಯ ದುರಾಚಾರವನ್ನು ಎತ್ತಿ ಆಡಿದೆ. ಆಗ ಅವರುಗಳು ಹಾಗೆ ಆಡಿದ್ದನ್ನು ಅಪರಾಧವೆಂದೇ ಭಾವಿಸಿ ಹೇಳಿದರು: "ನೀವು ಸಾಧುಗಳು. ಆದರೂ ಜನರಿಗೆ ಈ ರೀತಿಯ ಸ್ವಾರ್ಥವನ್ನು ಬೋಧಿಸುತ್ತೀರಿ. ಯಾವುದಾದರೂ ವಸ್ತುವನ್ನು ಇತರರಿಗೆ ಇಲ್ಲದಂತೆ ತಾನೊಬ್ಬನೆ ಭೋಗಿಸಬೇಕೆಂದು ಯೋಚಿಸುವುದು ತಪ್ಪಲ್ಲವೇನು?"

"ಚೀನಾದಲ್ಲಿ ಮೂಗು ಗಿಡ್ಡದಾಗಿದ್ದು, ಪಾದಗಳು ಚಿಕ್ಕದಾಗಿರುವುದನ್ನೆ ಸೌಂದರ್ಯದ್ಯೋತಕವೆಂದು ಭಾವಿಸುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಆಹಾರದ ವಿಚಾರದಲ್ಲಿಯೂ ಇದೇ ವಿಲಕ್ಷಣ ಅಭಿಪ್ರಾಯಗಳನ್ನು ಕಾಣುತ್ತೇವೆ. ನಾವು ಅಷ್ಟೊಂದು ಆದರಿಸುವ ಸಿಹಿಅನ್ನ ಇಂಗ್ಲಿಷರಿಗೆ ಒಗ್ಗುವುದಿಲ್ಲ. ಒಮ್ಮೆ ಒಬ್ಬ ನ್ಯಾಯಾಧೀಶನನ್ನು ಒಂದು ಸ್ಥಳದಿಂದ ಮತ್ತೊಂದು ಕಡೆಗೆ ವರ್ಗಾಯಿಸಿದರು. ಆಗ ವಕೀಲರೆಲ್ಲರೂ ಸೇರಿ ಅವರಿಗೆ ತುಂಬಾ ರುಚಿಕರ ತಿಂಡಿಗಳನ್ನು ಕಳುಹಿಸಿ ಕೊಟ್ಟರು. ಅದರಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಿಹಿಅನ್ನವೂ ಇತ್ತು. ಆ ಅನ್ನವನ್ನು ಬಡಿಸಿದಾಗ, ಆತ ಅದು ಹಳಸಿರಬೇಕೆಂದು ಭಾವಿಸಿದ. ಅವನು ವಕೀಲರನ್ನು ಮತ್ತೊಮ್ಮೆ ಸಂಧಿಸಿದಾಗ ಹೇಳಿದ: "ಆ ಹಳಸಲು ಅನ್ನವನ್ನು ಮಾತ್ರ ಕೊಡಬೇಡಿ". ಒಮ್ಮೆ ನಾನು ರೈಲಿನಲ್ಲಿ ಪ್ರಯಾಣಮಾಡುತ್ತಿದ್ದೆ. ಅದೇ ಗಾಡಿಯಲ್ಲಿ ನಾಲ್ಕೈದು ಜನ ಯೂರೋಪಿಯನ್ ಸಹಪ್ರಯಾಣಿಕರಿದ್ದರು. ಮಾತಿನ ಮಧ್ಯದಲ್ಲಿ ನಾನು ಹೇಳಿದೆ: "ಹೊಗೆಸೊಪ್ಪನ್ನು ಆಸ್ವಾದಿಸುವ ಅತ್ಯುತ್ತಮ ವಿಧಾನವೆಂದರೆ ಹುಕ್ಕದಿಂದ ಸೇದುವುದು; ಅದರಲ್ಲಿ ಕೆಳಗಡೆ ನೀರಿದ್ದು, ಮೇಲಕ್ಕೆ ಜೋನಿಬೆಲ್ಲ ಮತ್ತು ಮಸಾಲೆ ಹಾಕಿ ಸಿದ್ಧಪಡಿಸಿದ ಹೊಗೆಸೊಪ್ಪಿನ ಮುದ್ದೆ ಇಟ್ಟಿರುತ್ತಾರೆ. ನನ್ನ ಹತ್ತಿರ ಅಂತಹ ಹೊಗೆಸೊಪ್ಪಿತ್ತು. ನಾನು ಅದನ್ನು ಅವರಿಗೆ ತೋರಿಸಿದೆ. ಅವರು ಅದನ್ನು ಮೂಸಿನೋಡಿ ಹೇಳಿದರು: "ಎಂಥಾ ಕೆಟ್ಟವಾಸನೆ

ಬರುತ್ತಿದೆ. ಇದನ್ನು ನೀವು ಸುವಾಸನೆ ಎನ್ನುತ್ತೀರಲ್ಲಾ ". ಹಾಗೆ ವಾಸನೆ ರುಚಿ ಸೌಂದರ್ಯ ಇತ್ಯಾದಿಗಳನ್ನು ಕುರಿತಾದ ಅಭಿಪ್ರಾಯಗಳು ಕಾಲದೇಶ ಸಾಮಾಜಿಕ ಪರಿಸರಗಳನ್ನು ಅವಲಂಬಿಸಿ ಭಿನ್ನವಾಗಿರುತ್ತವೆ. "

ಸ್ವಾಮಿಜಿಯ ಈ ಮಾತುಗಳನ್ನು ಮೆಚ್ಚಿಕೊಳ್ಳಲು ನನಗೆ ಹೆಚ್ಚು ಸಮಯ ಬೇಕಾಗಿರಲಿಲ್ಲ. ನನ್ನ ಪ್ರಾರಂಭದ ದಿನಗಳಲ್ಲಿ ನನಗೆ ಬೇಟೆ ಎಷ್ಟು ಪ್ರಿಯವಾಗಿತ್ತೆಂಬುದು ನನ್ನ ಮನಸ್ಸಿನಲ್ಲಿನ್ನೂ ಹಸಿಯಾಗಿದೆ. ಯಾವಾಗಲಾಗಲಿ ಯಾವುದೇ ಪ್ರಾಣಿಪಕ್ಷಿಗಳು ನನ್ನ ದೃಷ್ಟಿಗೆ ಬಿದ್ದುವೆಂದರೆ, ಅವನ್ನು ಕೊಲ್ಲುವವರೆಗೂ ನನಗೆ ನೆಮ್ಮದಿ ಇರುತ್ತಿರಲಿಲ್ಲ. ಅದು ಸಾಧ್ಯವಾಗದಿದ್ದರೆ ತುಂಬ ಖಿನ್ನನಾಗುತ್ತಿದ್ದೆ. ಈಗ ಆ ರೀತಿ ಕೊಲ್ಲುವುದು ನನಗೆ ಸ್ವಲ್ಪವೂ ಇಷ್ಟವಿಲ್ಲ. ಹಾಗೆ ಇಷ್ಟಾನಿಷ್ಟಗಳು ಒಂದು ರೀತಿಯ ಅಭ್ಯಾಸ.

ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ತನ್ನ ಸ್ವಂತದೃಷ್ಟಿಗೆ ಪಟ್ಟುಹಿಡಿದು ಅಮರಿಕೊಳ್ಳುವ ಮನೋಧರ್ಮವಿರುತ್ತದೆ—ಅದರಲ್ಲಿಯೂ ವಿಶೇಷವಾಗಿ ಧಾರ್ಮಿಕ ವಿಚಾರದಲ್ಲಿ. ಅದನ್ನು ಕುರಿತು ಸ್ವಾಮಿಜಿ ಒಂದು ಕಥೆ ಹೇಳುತ್ತಿದ್ದರು : " ಒಮ್ಮೆ ಒಬ್ಬ ರಾಜ ಪರರಾಜ್ಯದ ಮೇಲೆ ದಂಡೆತ್ತಿಹೋದ. ಆಗ ಸಹಜವಾಗಿಯೆ ಆ ಸಣ್ಣ ರಾಜಧಾನಿಯಲ್ಲಿ ಶತ್ರುವಿನಿಂದ ತಮ್ಮನ್ನು ರಕ್ಷಿಸಿಕೊಳ್ಳುವ ವಿವಿಧ ತಂತ್ರಗಳನ್ನು ಮಂತ್ರಾಲೋಚಿಸಲು ದೊಡ್ಡ ಸಭೆ ಸೇರಿತು. ಎಲ್ಲಾ ದರ್ಜೆಯ ಜನರೂ ಆ ಸಭೆಯಲ್ಲಿ ಪ್ರತಿನಿಧಿಸಿದ್ದರು—ಎಂಜಿನಿಯರು, ಬಡಗಿಗಳು, ಕಮ್ಮಾರರು, ಚಮ್ಮಾರರು, ವಾದಿಗಳು ಮತ್ತು ಪೂಜಾರಿಗಳು. ಎಂಜಿನಿಯರು ಹೇಳಿದರು : " ಸುತ್ತಲೂ ಕೋಟೆ ಕಟ್ಟಿ ಆಳವಾದ ಕಂದಕ ತೋಡೋಣ ". ಬಡಗಿಗಳು " ಒಂದು ಮರದ ಗೋಡೆ ಕಟ್ಟೋಣ " ಎಂದರು. ಚಮ್ಮಾರರು ಹೇಳಿದರು : " ಚರ್ಮದಂತಹ ವಸ್ತು ಬೇರೊಂದಿಲ್ಲ. ಸುತ್ತಲೂ ಚರ್ಮದ ಅಡ್ಡಗೋಡೆ ಕಟ್ಟೋಣ ". ಕಮ್ಮಾರರು ಹೇಳಿದರು : " ಇವುಗಳೆಲ್ಲದರಿಂದ ಏನೂ ಪ್ರಯೋಜನವಿಲ್ಲ ; ಉಕ್ಕಿನ ಗೋಡೆ ಹಾಕುವುದೇ ಅತ್ಯುತ್ತಮ ಮಾರ್ಗ. ಏಕೆಂದರೆ ಗುಂಡುಗಳು ಅದನ್ನು ಭೇದಿಸಿಕೊಂಡು ಬರಲಾರವು ". ವಾದಿಗಳು ಎಂದರು : " ಇಲ್ಲ, ಇವೆಲ್ಲಾ ಸರಿಯಾದ ಮಾರ್ಗಗಳಲ್ಲ ; 'ನಿಮಗೆ ನಮ್ಮ ರಾಜ್ಯವನ್ನು ಆಕ್ರಮಿಸಿಕೊಳ್ಳಲು ಯಾವ ಅಧಿಕಾರವೂ ಇಲ್ಲ' ಎಂದು ಶತ್ರುವನ್ನು ವಾದದಿಂದ ಸಮರ್ಥಿಸಿ ಒಪ್ಪಿಸೋಣ ". ಪೂಜಾರಿಗಳು ಹೇಳಿದರು : " ನೀವೆಲ್ಲಾ ಹುಚ್ಚರಂತೆ ಬಡಬಡಿಸುತ್ತಿದ್ದೀರಿ, ಬಲಿಗಳನ್ನು ಸಮರ್ಪಿಸಿ ಈ ಕೇಡಿನಿಂದ ಪಾರಾಗಲು ಇತರ ಧಾರ್ಮಿಕ ವಿಧಿಗಳನ್ನು ನೆರವೇರಿಸಿ ತುಳಸಿದಳ ಮುಂತಾದುವನ್ನು ಸಮರ್ಪಿಸಬೇಕು. ಆಗ ಶತ್ರು ವಿಫಲನಾಗುತ್ತಾನೆ ". ಇದರ ಪರಿಣಾಮವಾಗಿ ಶತ್ರುವಿನಿಂದ ರಾಜ್ಯವನ್ನು ಸಂರಕ್ಷಿಸಲು ಯಾವ ಕಾರ್ಯವನ್ನೂ ಕೈಗೊಳ್ಳಲಿಲ್ಲ. ಸಭಾಸದರೆಲ್ಲಾ ಭಾವರೂಪದ ಕ್ರಿಯೆಯಲ್ಲೆ ಚರ್ಚೆಯನ್ನು ಮುಂದುವರಿಸುತ್ತಿದ್ದರು. ಇದೇ ಮನುಷ್ಯಸ್ವಭಾವ ".

ಮತ್ತೊಂದು ಸಂದರ್ಭದ ಒಂದು ಘಟನೆ ನನ್ನ ನೆನಪಿನಲ್ಲಿತ್ತು. ಅದನ್ನು ಸ್ವಾಮಿಜಿಗೆ ಹೇಳಿದೆ: "ಸ್ವಾಮಿಜಿ, ಹುಡುಗನಾಗಿದ್ದಾಗ ನನಗೆ ಹುಚ್ಚರೊಡನೆ ಮಾತಾಡುವುದೆಂದರೆ ತುಂಬಾ ಖುಷಿ. ಒಮ್ಮೆ ಬುದ್ಧಿವಂತನಂತೆ ಕಾಣುತ್ತಿದ್ದ ಒಬ್ಬ ಹುಚ್ಚನ ಪರಿಚಯವಾಯಿತು. ಅವನಿಗೆ ಅಲ್ಪಸ್ವಲ್ಪ ಇಂಗ್ಲಿಷ್ ಬರುತ್ತಿತ್ತು. ಅವನಿಗೆಲ್ಲಾ ಬೇಕಾಗಿದ್ದುದೆಂದರೆ ಕುಡಿಯುವುದಕ್ಕೆ ನೀರು. ಅವನ ಹತ್ತಿರ ಒಂದು ಒಡಕಲು ನೀರಿನ ಚಟ್ಟಿ ಇತ್ತು. ಎಲ್ಲಾದರೂ ಸರಿ, ಒಂದು ಹೊಂಡವಾಗಲಿ, ಒದಗೆಯಾಗಲಿ, ಸಿಕ್ಕಲ್ಲೆಲ್ಲಾ ಅವನು ಆ ಚಟ್ಟಿಯಿಂದ ನೀರು ಕುಡಿಯುತ್ತಿದ್ದ. ಏಕೆ ಅಷ್ಟೊಂದು ನೀರು ಕುಡಿಯುತ್ತೀಯಾ ಎಂದು ನಾನು ಕೇಳಿದೆ. ಅವನು ಹೇಳಿದ: 'ನೀರಿನಂಥದು ಮತ್ತೆ ಯಾವುದೂ ಇಲ್ಲ'. ಅವನಿಗೆ ನಾನೊಂದು ಒಳ್ಳೆಯ ನೀರಿನ ಚಟ್ಟಿಯನ್ನು ಕೊಡಲು ಹೋದೆ; ಆದರೆ ಅವನು ತೆಗೆದುಕೊಳ್ಳಲಿಲ್ಲ. ಕಾರಣ ಕೇಳಿದಾಗ, ಹೇಳಿದ: 'ನಾನು ಎಷ್ಟೋ ಕಾಲದಿಂದ ಆ ಒಡೆದಿರುವ ಚಟ್ಟಿಯನ್ನೇ ಇಟ್ಟುಕೊಂಡಿದ್ದೇನೆ. ಏಕೆಂದರೆ ಅದು ಒಡಕಲು. ಅದೇನಾದರೂ ಚೆನ್ನಾಗಿದ್ದಿದ್ದರೆ ಎಂದೋ ಕಳುವಾಗುತ್ತಿತ್ತು'".

ನಾನು ಮುಗಿಸಿದಾಗ ಸ್ವಾಮಿಜಿ ಹೇಳಿದರು: "ಅವನು ತುಂಬಾ ತಮಾಷೆ ಹುಚ್ಚನಿರಬೇಕು. ಅಂಥವರನ್ನು ಅರೆಹುಚ್ಚರು ಎನ್ನುತ್ತಾರೆ. ಪ್ರತಿಯೊಬ್ಬನಲ್ಲಿಯೂ ಅಂತಹ ಉನ್ಮಾದವಿರುತ್ತದೆ. ಆದರೆ ನಮಗೆ ಅದನ್ನು ಮುಚ್ಚಿಟ್ಟುಕೊಳ್ಳುವ ಶಕ್ತಿ ಇದೆ, ಅಷ್ಟೆ; ತೂಕ ತಪ್ಪಿದ ವ್ಯಕ್ತಿಗಳಲ್ಲಿ ಅದರ ಅಭಾವ ಉಂಟಾಗಿರುತ್ತದೆ. ಅಲ್ಲೇ ನಾವು ಹುಚ್ಚರಿಂದ ಬೇರ್ಪಟ್ಟಿರುವುದು. ಮನುಷ್ಯ ತುಂಬ ದುಃಖಿತನಾದಾಗ, ರೋಗ, ಶೋಕ, ಅಹಂಕಾರ, ಭಾವಾತಿರೇಕ, ಕೋಪ, ಅಸೂಯೆ ಅಥವಾ ಯಾವುದೇ ರೀತಿಯ ಆತ್ಮತಿರಸ್ಕಾರ, ಆತ್ಮಾವನತಿಯಿಂದ ಒಮ್ಮೆಗೇ ಆತ್ಮಸಂಯಮವನ್ನು ಕಳೆದುಕೊಳ್ಳುತ್ತಾನೆ. ಆಗ ಅವನು ತನ್ನ ಉನ್ಮಾದವನ್ನು ಅದುಮಿಡಲು ಅಸಮರ್ಥನಾಗುತ್ತಾನೆ; ಅಲ್ಲದೆ ನಾವು ಅವನಿಗೆ ತಲೆಕೆಟ್ಟಿದೆ ಎಂದು ಹೇಳುತ್ತೇವೆ."

ಸ್ವಾಮಿಜಿಯ ದೇಶಭಕ್ತಿ ತುಂಬ ಆಳವಾದದ್ದು. ಅವರ ವಿಚಾರವಾಗಿ ಹಿಂದೆಯೆ ಹೇಳಿದ್ದೇನೆ. ಒಮ್ಮೆ ಆ ವಿಚಾರವಾಗಿ ಚರ್ಚೆ ಬಿಸಿ ಏರಿತು. ಯಾರೋ ಒಬ್ಬರು ಹೇಳಿದರು: "ಲೌಕಿಕ ಜೀವನ ನಡೆಸುತ್ತಿರುವ ಸಾಮಾನ್ಯ ಜನರು ತಮ್ಮ ದೇಶವನ್ನು ಪ್ರೀತಿಸಲೇ ಬೇಕಾದದ್ದು ಅವರ ಕರ್ತವ್ಯವಾಗಿರಬಹುದು; ಆದರೆ ಸಂನ್ಯಾಸಿಗಳು ಎಲ್ಲಾ ಬಂಧನಗಳಿಂದಲೂ, ತಮ್ಮ ಸ್ವಂತ ದೇಶ ಎಂಬುದರಿಂದಲೂ ಮೇಲೇರಿರಬೇಕು; ಎಲ್ಲ ದೇಶವನ್ನು ಪ್ರೀತಿಸಬೇಕು; ಎಲ್ಲರ ಕಲ್ಯಾಣಕ್ಕಾಗಿ ಪ್ರಾರ್ಥಿಸಬೇಕು." ಸ್ವಾಮಿಜಿಯಿಂದ ಸಿಡಿದುಬಂದ ಆ ಮಾರ್ಮಲಿತದ ನುಡಿಗಳನ್ನು ನಾನು ಎಂದಿಗೂ ಮರೆಯಲಾರೆ: "ತನ್ನ ಹೆತ್ತತಾಯನ್ನೇ ಸಲಹಲಾರದವನು, ಹೇಗೆ ತಾನೆ ಬೇರೆಯವರ ತಾಯನ್ನು ನೋಡಿಕೊಳ್ಳಬಲ್ಲ?"

ನಮ್ಮ ಸದ್ಯದ ಧಾರ್ಮಿಕ ರೀತಿನೀತಿ, ಅಭ್ಯಾಸ ಮತ್ತು ಸಾಮಾಜಿಕ ಪದ್ಧತಿಗಳಲ್ಲಿ ಸಾಕಷ್ಟು ಕುಂದುಕೊರತೆಗಳಿವೆ ಎಂಬುದನ್ನು ಅವರು ಒಪ್ಪಿಕೊಳ್ಳು ತ್ತಿದ್ದರು. "ಎಲ್ಲಾ ರೀತಿಗಳಿಂದಲೂ ಅದನ್ನು ತಿದ್ದಿ ರೂಪಿಸುವುದು ನಮ್ಮ ಆದ್ಯ ಕರ್ತವ್ಯ. ಆದರೆ ಅದನ್ನು ಆಂಗ್ಲರ ಎದುರಿನಲ್ಲಿ ಹೇಳಬೇಕು, ಪತ್ರಿಕೆಗಳಲ್ಲಿ ಅಚ್ಚುಹಾಕಿಸಬೇಕೆಂದು ಅರ್ಥವಲ್ಲ. ತನ್ನ ಕೊಳಕಲು ಬಟ್ಟೆಯನ್ನು ಎಲ್ಲರ ಎದುರಿನಲ್ಲಿ ಒಗೆಯುವವನಿಗಿಂತಲೂ ಮಹಾಮೂರ್ಖ ಮತ್ತೊಬ್ಬನಿಲ್ಲ" —ಎನ್ನುತ್ತಿದ್ದರು.

ಒಂದು ದಿವಸ ನಾವು ಕ್ರೈಸ್ತ ಪಾದ್ರಿಗಳ ವಿಚಾರವಾಗಿ ಮಾತನಾಡಲು ಪ್ರಾರಂಭಿಸಿದೆವು. ನಮ್ಮ ದೇಶದ ಒಳಿತಿಗಾಗಿ ಅವರು ತುಂಬಾ ಕೆಲಸ ಮಾಡಿದ್ದಾರೆ, ಮಾಡುತ್ತಿದ್ದಾರೆ ಎಂದು ನಾನು ಹೇಳಿದೆ. ಸ್ವಾಮಿಜಿ ಹೇಳಿದರು: "ಅವರಿಂದಾಗಿರುವ ಕೆಡುಕಿನ ಪ್ರಮಾಣವೂ ಏನೂ ಕಮ್ಮಿಯಿಲ್ಲ. ನಮ್ಮ ನಾಡಿನ ಜನತೆ ತಮ್ಮಲ್ಲಿ ಮತ್ತು ತಮ್ಮ ಸಂಸ್ಕೃತಿಯಲ್ಲಿಟ್ಟಿರುವ ಶ್ರದ್ಧೆಯನ್ನು ಗಾಳಿಗೆ ತೂರಲು ಅವರು ಶಕ್ತಿಮಿರಿ ಪ್ರಯತ್ನಿಸುತ್ತಿದ್ದಾರೆ. ಶ್ರದ್ಧೆಗೆಡುವುದೆಂದರೆ ತಮ್ಮ ವ್ಯಕ್ತಿತ್ವವನ್ನು ಛಿದ್ರಗೊಳಿಸಿಕೊಂಡಂತೆ. ಇದನ್ನು ಯಾರಾದರೂ ಅರ್ಥಮಾಡಿ ಕೊಳ್ಳುತ್ತಿರುವರೇನು ? ನಮ್ಮ ಧರ್ಮವನ್ನು ಖಂಡಿಸದೆ, ನಮ್ಮ ದೇವರನ್ನು ನಿಂದಿಸದೆ, ಹೇಗೆತಾನೆ ಆ ಪಾದ್ರಿಗಳು ತಮ್ಮ ಧರ್ಮದ ಮೇಲ್ಮೆಯನ್ನು ಎತ್ತಿ ಹಿಡಿಯಬಲ್ಲರು ? ಮತ್ತೊಂದು ಸಂಗತಿಯನ್ನು ಗಮನಿಸಬಹುದು : ಯಾರೇ ಆಗಲಿ, ಒಂದು ನಿರ್ದಿಷ್ಟ ಧರ್ಮವನ್ನು ಬೋಧಿಸಬೇಕಾದರೆ, ಅದನ್ನು ನಂಬಿ ಬಿಟ್ಟರೆ ಸಾಲದು. ಪೂರ್ಣಶ್ರದ್ಧೆ ಮತ್ತು ನಿಷ್ಠೆಯಿಂದ ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು. ಬಹುಜನ ಪಾದ್ರಿಗಳು ಬಾಯಲ್ಲಿ ಹೇಳುವುದು ಒಂದು ; ಕೈಯಲ್ಲಿ ಮಾಡುವುದು ಮತ್ತೊಂದು. ನಾನು ಈ ವಂಚನೆಯನ್ನು ಮಾತ್ರ ಎಂದೂ ಸಹಿಸಲಾರೆ."

ಒಂದು ದಿನ ಅವರು ಆಧ್ಯಾತ್ಮ ಮತ್ತು ಯೋಗ ವಿಚಾರವನ್ನು ಕುರಿತು ಅನೇಕ ಅಮೂಲ್ಯ ಸಂಗತಿಗಳನ್ನು ಹೇಳಿದರು. ನನಗೆ ಸಾಧ್ಯವಾದಷ್ಟೂ ಅದರ ಸಾರವನ್ನು ಇಲ್ಲಿ ಹೇಳುತ್ತೇನೆ : "ಎಲ್ಲಾ ಜೀವರೂ ಆನಂದಾನುಭವವನ್ನು ಹೊಂದಲು ಸತತವೂ ತವಕಿಸುತ್ತಿರುತ್ತಾರೆ. ಅವರು ಅದನ್ನು ಪಡೆಯುವ ಪ್ರಯತ್ನದಲ್ಲೇ ನಿರಂತರವೂ ತೊಡಗಿರುತ್ತಾರೆ; ಆದರೂ ಗುರಿಯ ಹತ್ತಿರ ಸರಿಯುವುದು ಮಾತ್ರ ತುಂಬ ಅಪೂರ್ವವಾಗಿರುತ್ತದೆ. ಅನೇಕರು ಅದನ್ನು ನಿಲ್ಲಿಸಿ ಏಕೆ ಹೀಗೆ ವಿಫಲರಾಗುತ್ತಿದ್ದೇವೆ ಎಂಬ ಕಾರಣವನ್ನು ಕಂಡುಹಿಡಿಯುವುದಿಲ್ಲ. ಅದಕ್ಕೇ ಮನುಷ್ಯರು ಅಷ್ಟೊಂದು ದುಃಖಕ್ಕೆ ಒಳಗಾಗುವುದು. ನಾವು ಹೊಂದಿದ ಧಾರ್ಮಿಕ ಭಾವನೆಯಿಂದಲೆ ನಮಗೆ ಚಿರಂತನ ಆನಂದ ಲಭಿಸುತ್ತದೆ ಎಂಬ ದೃಢ ವಿಶ್ವಾಸವಿರುವವರೆಗೂ, ಯಾರೂ ನಮ್ಮ ಶ್ರದ್ಧೆಯನ್ನು ಅಲುಗಿಸುವ ಪ್ರಯತ್ನವನ್ನು

ಮಾಡಲಾರರು. ಕೊನೆಗೆ ಅದನ್ನು ತಿದ್ದಲು ಪ್ರಯತ್ನಿಸಿದರೂ ಅದು ಬಾಗು ವುದಿಲ್ಲ. ಅಲ್ಲದೆ ಹಾಗೆ ಆದರೂ ನಮ್ಮ ಹೃತ್ಪೂರ್ವಕ ಒಪ್ಪಿಗೆ ಇಲ್ಲದೆ ಅದರ ಪರಿಣಾಮವೂ ಒಳ್ಳೆಯದಾಗುವುದಿಲ್ಲ. ಯಾವುದೇ ಪಥವಾಗಿರಬಹುದು; ಧಾರ್ಮಿಕ ಪ್ರಸಂಗವನ್ನು ಕೇಳುವುದರಲ್ಲಿ ಮಾತ್ರ ಕುತೂಹಲವಿದ್ದು, ಅದರ ಆಚರಣೆಯಲ್ಲಿ ಅದಿಲ್ಲದಿದ್ದರೆ, ನೀನು ಅವನಿಗೆ ಯಾವುದರಲ್ಲಿಯೂ ದೃಢಶ್ರದ್ಧೆಯಿಲ್ಲವೆಂಬ ತೀರ್ಮಾನಕ್ಕೆ ತಕ್ಷಣ ಬರಬಹುದು."

"ಧರ್ಮದ ಮೂಲ ಉದ್ದೇಶ ಮಾನವನಿಗೆ ಶಾಂತಿಯನ್ನು ತಂದು ಕೊಡುವುದು. ನಾವು ಈ ಜನ್ಮದಲ್ಲಿ ದುಃಖವನ್ನು ಅನುಭವಿಸಿದರೆ, ಮುಂದಿನ ಜನ್ಮದಲ್ಲಿ ಸುಖಿಸಬಹುದೆಂಬುದು ಅಂತಹ ಜಾಣ್ಮೆಯ ಸಂಗತಿಯಲ್ಲ. ಇಲ್ಲೂ ಅಲ್ಲೂ ಸಂತೋಷವಾಗಿರಬೇಕು. ಯಾವ ಧರ್ಮ ಮಾನವತೆಗೆ ಅದನ್ನು ತಂದು ಕೊಡಬಲ್ಲುದೊ ಅದೇ ನಿಜವಾದ ಧರ್ಮ. ಇಂದ್ರಿಯಸಂತೋಷ ಕ್ಷಣಿಕ ವಾದದ್ದು, ಅದು ಅನಿವಾರ್ಯವಾಗಿ ದುಃಖದೊಂದಿಗೆ ಮಿಶ್ರಿತವಾಗಿರುತ್ತದೆ.

ಕೇವಲ ಮಕ್ಕಳು, ಮೂರ್ಖರು, ಪ್ರಾಣಿಗಳು ಮಾತ್ರ ಈ ಮಿಶ್ರ ಸಂತೋಷವನ್ನೆ ನಿಜವಾದ ಆನಂದವೆಂದು ತಿಳಿಯುತ್ತಾರೆ. ಆದರೂ ಸಹ ಯಾರಾದರೂ ಜೀವನದ ಸರ್ವಸ್ವವೂ ಅದರಲ್ಲೇ ಇರುವುದೆಂದು ಆ ಸಂತೋಷವನ್ನೇ ನೆಮ್ಮಿ, ಅದರಿಂದಲೇ ಚಿರಂತನ ಆನಂದವನ್ನೂ, ಆಶಾವಿಮೋಚನೆಯನ್ನೂ ಹೊಂದುವುದಾದರೆ, ಆಗ ನಾನು ಅದನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಆದರೆ ಅಂತಹ ವ್ಯಕ್ತಿಯನ್ನು ನಾನು ಇನ್ನೂ ಕಾಣಬೇಕಾಗಿದೆ. ಇಂದ್ರಿಯ ಸುಖವೇ ಪರಮ ಆನಂದವೆಂದು ಕೆಲವರು ತಪ್ಪು ತಿಳಿಯುತ್ತಾರೆ. ಅನ್ಯರು ಅವರಿಗಿಂತ ಐಶ್ವರ್ಯವಂತರೂ ಸುಖಿಗಳೂ ಆದಾಗ, ಅವರನ್ನು ಕಂಡು ಕರುಬುತ್ತಾರೆ; ನಮ್ಮ ಸಾಮಾನ್ಯ ಅನುಭವದಲ್ಲೇ ಇದನ್ನು ಕಾಣುತ್ತೇವೆ. ಅವರ ಇಂದ್ರಿಯ ಸುಖವೆ ಹೆಚ್ಚು ಹೆಚ್ಚು ಧಾರ್ಮಿಕ ಸಂಸ್ಕಾರವನ್ನು ಪಡೆದಂತೆ, ಅವರಿಗೆ ತಾವು ಅತ್ಯಾಶೆ ಪಟ್ಟಿದ್ದಕ್ಕಾಗಿ ವ್ಯಥೆಯಾಗುತ್ತದೆ. ಅಲೆಗ್ಝಾಂಡರ್ ಮಹಾಶಯ ಜಗತ್ತನ್ನೆಲ್ಲಾ ಜಯಿಸಿದ ಮೇಲೆ ತುಂಬ ಅಸುಖಿಯಾದ. ಅದರ ಚಿಂತೆಯಿಂದ ಮುಂದೆ ಅವನು ಯಾವ ರಾಜ್ಯವನ್ನೂ ಜಯಿಸದಾದ. ಅದಕ್ಕಾಗಿಯೆ ವಿವೇಚನಾಯುತರಾದ ವ್ಯಕ್ತಿಗಳು ಬಹುಕಾಲದ ಅನುಭವ ಮತ್ತು ಪರಿವೀಕ್ಷಣೆ ಯಿಂದ ಈ ನಿರ್ಧಾರಕ್ಕೆ ಬಂದಿದ್ದಾರೆ: ಮನುಷ್ಯ ನಿಜವಾಗಿಯೂ ಸುಖಿಯಾಗ ಬೇಕಾದರೆ, ಆಶೆಯಿಂದ ಬಿಡುಗಡೆ ಹೊಂದಬೇಕಾದರೆ, ಒಂದಲ್ಲ ಒಂದು ಧರ್ಮದಲ್ಲಿ ಭರವಸೆ ತಾಳಿದಾಗ ಮಾತ್ರವೆ ಸಾಧ್ಯ."

"ಮನುಷ್ಯರು ಸ್ವಾಭಾವಿಕವಾಗಿಯೆ ಅವರವರ ಬೌದ್ಧಿಕ ಸಾಧನೆ ಸಿದ್ಧಿಗಳಿಗೆ ಅನುಸಾರವಾಗಿ ಭಿನ್ನಭಿನ್ನವಾಗಿರುತ್ತಾರೆ. ಹಾಗೆಯೆ ಧರ್ಮವೂ ಅವರವರ ಮನೋಧರ್ಮಕ್ಕೆ ಅನುಗುಣವಾಗಿ ಬೇರೆ ಬೇರೆಯಾಗಿರುತ್ತದೆ. ಹಾಗಿಲ್ಲದಿದ್ದ

ಪಕ್ಷದಲ್ಲಿ ನಾವು ಅದರಿಂದ ಯಾವ ತೃಪ್ತಿಯನ್ನೂ ಪಡೆಯುತ್ತಿರಲಿಲ್ಲ; ಅದರಿಂದ ಪರಮ ಪ್ರಯೋಜನವನ್ನು ಹೊಂದಲಾಗುತ್ತಿರಲಿಲ್ಲ. ಸೂಕ್ಷ್ಮವಾದ ಆಲೋಚನೆ ಪ್ರಯೋಗ ಪರೀಕ್ಷೆಗಳಿಂದ ತಮ್ಮ ವಿಶಿಷ್ಟ ಮನೋಧರ್ಮಕ್ಕೆ ಅನುಗುಣವಾದ ಧರ್ಮವನ್ನು ಕಂಡುಕೊಳ್ಳಬೇಕು. ಅದಲ್ಲದೆ ಬೇರೆ ದಾರಿಯಿಲ್ಲ. ಧಾರ್ಮಿಕ ಗ್ರಂಥಗಳ ಅಧ್ಯಯನ, ಗುರುವಿನ ಆದೇಶ ಮತ್ತು ಸಾಧುಸಂಗ ಈ ಅನ್ವೇಷಣೆಗೆ ಕೇವಲ ಸಹಾಯಮಾಡಬಲ್ಲುದು.

ಕರ್ಮದಲ್ಲಿಯೂ ಹಾಗೆಯೆ. ಯಾರಿಂದಲೂ ಸಂಪೂರ್ಣ ಕರ್ಮತ್ಯಾಗ ಮಾಡಲು ಸಾಧ್ಯವಿಲ್ಲ. ಒಂದಲ್ಲ ಒಂದು ಕೆಲಸದಲ್ಲಿ ತೊಡಗಿರಲೆಬೇಕಾಗುತ್ತದೆ. ಯಾವ ಕೆಲಸವೂ ಸಂಪೂರ್ಣ ಒಳ್ಳೆಯದು ಅಥವಾ ಕೆಟ್ಟದ್ದಲ್ಲ. ನೀನು ಒಂದು ಒಳ್ಳೆಯ ಕೆಲಸದಲ್ಲಿ ತೊಡಗಿದಾಗಲೆ, ಜೊತೆಜೊತೆಯಲ್ಲಿ ಸ್ವಲ್ಪ ಕೆಟ್ಟ ಕೆಲಸದಲ್ಲೂ ಭಾಗಿಯಾಗುವೆ. ಪರಿಣಾಮವಾಗಿ ಒಳ್ಳೆಯ ಕೆಲಸದಿಂದ ಪಡೆಯುವ ಸಂತೋಷದ ಜೊತೆಜೊತೆಗೆ ಸ್ವಲ್ಪ ಅಸಂತೋಷ, ಅತೃಪ್ತಿಯೂ ಬರುತ್ತದೆ. ಈ ಕೆಟ್ಟದ್ದನ್ನು ವರ್ಜಿಸಲು ಬಯಸಿದರೆ, ಇಂದ್ರಿಯ ಸುಖದಿಂದ ಬರುವ ಬಹಿಸ್ಸಂತೋಷವನ್ನೂ ಪಡೆಯುವ ಆಸೆಯನ್ನು ತ್ಯಜಿಸಬೇಕು. ಅದಕ್ಕಾಗಿಯೆ ಎಲ್ಲ ಸ್ವಾರ್ಥ ಕಾಮನೆಗಳನ್ನೂ ತ್ಯಜಿಸಿ ಕೇವಲ ಕರ್ತವ್ಯಪ್ರಜ್ಞೆಯಿಂದ ಕೆಲಸಮಾಡು ಎಂದು ಹೇಳುವುದು. ಅದಕ್ಕೇ 'ನಿಷ್ಕಾಮ ಕರ್ಮ'ವೆಂದು ಹೇಳುವುದು. ಗೀತೆಯಲ್ಲಿ ಅರ್ಜುನ ಅದರ ವಿವರಣೆ ಕೇಳಿದಾಗ, ಶ್ರೀಕೃಷ್ಣ ಹೇಳಿದ: "ಕೆಲಸಮಾಡು, ಆದರೆ ಅದರ ಫಲವನ್ನೆಲ್ಲಾ ನನಗೆ ಸಮರ್ಪಿಸಿ ಬಿಡು. ಅದನ್ನೆ ನನಗಾಗಿ ಕರ್ಮಮಾಡು ಎಂದು ಹೇಳಿದ್ದು."

* * * *

ಒಂದು ದಿವಸ ನಾನು ಸ್ವಾಮಿಜಿಯನ್ನು, ಕುರುಕ್ಷೇತ್ರ ಯುದ್ಧ ಪ್ರಾರಂಭವಾಗುವ ಮುನ್ನ ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶವು ಚಾರಿತ್ರಿಕ ಘಟನೆಯೆ ಎಂದು ಕೇಳಿದೆ. ಅದಕ್ಕೆ ಅವರು ಉತ್ತರಿಸಿದ ರೀತಿ ಮನೋಜ್ಞವಾಗಿದೆ:

"ಗೀತೆ ತುಂಬ ಪ್ರಾಚೀನ ಗ್ರಂಥ, ಪ್ರಾಚೀನ ಕಾಲದಲ್ಲಿ ಐತಿಹಾಸಿಕ ಸಂಗತಿಗಳನ್ನು ಬರೆಯುವುದು ಅಥವಾ ಪುಸ್ತಕಗಳನ್ನು ಅಚ್ಚುಹಾಕಿಸುವುದು ರೂಢಿಯಲ್ಲಿರಲಿಲ್ಲ. ಆದ್ದರಿಂದ ನಿಮ್ಮಂತಹ ಜನರಿಗೆ ಗೀತೆಯ ಚಾರಿತ್ರಿಕತೆಯನ್ನು ಸಮರ್ಥಿಸಿ ಹೇಳುವುದು ಕಷ್ಟ. ಆದರೂ, ಗೀತೆಯಲ್ಲಿ ಉಕ್ತವಾಗಿರುವ ಘಟನೆಯ ಸತ್ಯತೆಯ ವಿಚಾರವಾಗಿ ಏಕೆ ನಿಮ್ಮ ಬುದ್ಧಿಯನ್ನೆಲ್ಲಾ ವ್ಯಯಮಾಡಬೇಕೊ ನನಗೆ ತಿಳಿಯುತ್ತಿಲ್ಲ. ಗೀತೆ ಶ್ರೀಕೃಷ್ಣ ಅರ್ಜುನನಿಗೆ ಹೇಳಿದ ಪ್ರತ್ಯಕ್ಷಮಾತುಗಳನ್ನೆ ಪ್ರತಿನಿಧಿಸುತ್ತದೆ ಎಂದು ಯಾರಾದರೂ ನಿರ್ವಿವಾದವಾಗಿ ಸಾಧಿಸಬಹುದು. ಆಗ ನೀನು ಆ ಪುಸ್ತಕದಲ್ಲಿರುವುದನ್ನೆಲ್ಲಾ ನಿಜವಾಗಿಯೂ ನಂಬುತ್ತೀಯಾ? ಸಾಕ್ಷಾತ್

ಭಗವಂತನೆ ಅವತರಿಸಿ ಬಂದು ನಿನಗೆ ಬೋಧಿಸಿದರೂ, ಅವನ ದೇವತ್ವವನ್ನು ಸಮರ್ಥಿಸುವಂತೆ ನೀನು ಅವನಿಗೆ ಸವಾಲು ಹಾಕಬಹುದು. ನಿನ್ನ ಸ್ವಂತವಾದವ ನ್ನೊಡ್ಡಿ ಅವನ ಪ್ರತಿಪಾದನೆಗಳನ್ನೆಲ್ಲಾ ನಿರಾಕರಿಸಬಹುದು. ಆದ್ದರಿಂದ ಗೀತೆಯ ಸತ್ಯತೆಯ ವಿಚಾರವಾಗಿ ಏಕೆ ಅಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳಬೇಕು? ನೀನು ಮಾಡಬಹುದಾದದ್ದೆಂದರೆ ಗೀತೆಯ ಬೋಧನೆಯಲ್ಲಿ ನಿನಗೆ ಸಾಧ್ಯವಾದಷ್ಟನ್ನು ಒಪ್ಪಿಕೊಂಡು, ಅದನ್ನು ನಿನ್ನ ಜೀವನದಲ್ಲಿ ಸಾಕ್ಷಾತ್ಕರಿಸಿಕೊಳ್ಳುವುದು. ಅದರಿಂದ ನಿನಗಾಗುವ ನಿಜವಾದ ಪ್ರಯೋಜನ ಅದೇ. ಶ್ರೀ ರಾಮಕೃಷ್ಣರು ಹೇಳುತ್ತಿದ್ದರು: 'ಮಾವಿನ ತೋಪಿಗೆ ಹೋದರೆ ನಿಮಗೆ ಸಾಧ್ಯವಾದಷ್ಟೂ ರಸಭರಿತ ಹಣ್ಣುಗಳನ್ನು ಮೆಲ್ಲಿ. ಅದರ ಎಲೆಗಳನ್ನು ಎಣಿಸುತ್ತಾ ಕೂರುವುದರಿಂದ ನಿಮಗೆ ಏನು ತಾನೆ ಪ್ರಯೋಜನ?' ಧಾರ್ಮಿಕ ಗ್ರಂಥಗಳಲ್ಲಿ ನಂಬಿಕೆ ಅಪನಂಬಿಕೆಗಳು ಅವರವರ ವೈಯಕ್ತಿಕ ಅಭಿರುಚಿಯನ್ನು ಅವಲಂಬಿಸಿದಂತೆ ನನಗೆ ತೋರುತ್ತದೆ. ಕೆಲವರು ಕೆಲವು ಪರಿಸ್ಥಿತಿಗೆ ಒಳಗಾಗುತ್ತಾರೆ. ತಮಗೆ ಒದಗಿರುವ ಸ್ಥಿತಿ, ತಮ್ಮ ಗಮನ ಸೆಳೆದ ಪುಸ್ತಕದಲ್ಲಿ ಉಕ್ತವಾದ ಘಟನೆಗಳಂತೆಯೆ ಇರುವುದನ್ನು ಕಂಡುಕೊಳ್ಳು ತ್ತಾರೆ. ಆಗ ಅದರಲ್ಲಿನ ವಿಷಯವೆಲ್ಲಾ ನಿಜವಿರಬೇಕೆಂದೇ ಭಾವಿಸುತ್ತಾರೆ. ತಮಗೊದಗಿರುವ ವಿಪತ್ತಿನಿಂದ ಪಾರಾಗಲು, ಆ ಪುಸ್ತಕದಲ್ಲಿ ಹೇಳಿರುವ ವಿಷಯ ಗಳನ್ನು ಅಳವಡಿಸಿಕೊಳ್ಳಲು ತವಕಿಸುತ್ತಾರೆ."

ಒಂದು ದಿನ ಸ್ವಾಮಿಜಿ, ನಮ್ಮ ದೈಹಿಕ ಮತ್ತು ಮಾನಸಿಕ ಶಕ್ತಿ ಸಾಧ್ಯ ವಾದಷ್ಟೂ ಹೊರಹೋಗದಂತೆ ರಕ್ಷಿಸಿಟ್ಟುಕೊಳ್ಳುವುದು ನಮ್ಮ ಕರ್ತವ್ಯವೆಂದು ತುಂಬ ಆಕರ್ಷಕ ರೀತಿಯಲ್ಲಿ ಹೇಳಿದರು: "ನಾವು ನಮ್ಮ ಶಕ್ತಿಯನ್ನು, ಪರರ ವ್ಯವಹಾರಗಳಲ್ಲೆಲ್ಲಾ ತಲೆಹಾಕುವುದು, ಅಲ್ಲದೆಹೋದ ಕೆಲಸಗಳಲ್ಲಿ ತೊಡಗುವುದು ಮುಂತಾಗಿ ವ್ಯರ್ಥಮಾಡಬಾರದು. ನಿರ್ದಿಷ್ಟ ಕೆಲಸವನ್ನು ಮಾಡುವಾಗ ವ್ಯಯ ವಾದ ಶಕ್ತಿಯನ್ನು ಪುನಃ ಹೊಂದಲು ಸಾಧ್ಯವಾಗುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿ ಯಲ್ಲಿಯೂ ಒಂದು ನಿಯತ ಪ್ರಮಾಣದ ಶಕ್ತಿಯ ಮೊತ್ತವು ಪ್ರಕಟವಾಗುತ್ತದೆ. ಅದು ಹೀಗೆ ನಿಷ್ಪ್ರಯೋಜಕ ದಾರಿಯಲ್ಲಿ ಸೋರಿಹೋದರೆ, ಮುಂದೆ ಯಾವುದೇ ರೀತಿಯ ಉದ್ದೇಶಿತ ಚಟುವಟಿಕೆಗೆ ಬಳಸುವಾಗ ಅದನ್ನು ಮತ್ತೆ ಪಡೆದುಕೊಳ್ಳ ಲಾಗುವುದಿಲ್ಲ. ಆಳವಾದ ಆಧ್ಯಾತ್ಮಿಕ ಸತ್ಯಗಳನ್ನು ಸಾಕ್ಷಾತ್ಕರಿಸಿಕೊಳ್ಳುವಾಗ ನಮಗೆ ಪ್ರಚಂಡ ಶಕ್ತಿ ಬೇಕಾಗುತ್ತದೆ. ಅದಕ್ಕಾಗೇ ಎಲ್ಲ ಜನಾಂಗದ ಧಾರ್ಮಿಕ ಗ್ರಂಥಗಳೂ, ಸಾಧಕನಾದವನು ಇಂದ್ರಿಯವಸ್ತುಗಳನ್ನು ಭೋಗಿಸುವುದರ ಮೂಲಕ ತನ್ನ ಶಕ್ತಿಯನ್ನು ವ್ಯಯಮಾಡಬಾರದೆಂದೂ ಬ್ರಹ್ಮಚರ್ಯ ಮುಂತಾದ ಸಾಧನಗಳಿಂದ ಅದನ್ನು ರಕ್ಷಿಸಿಟ್ಟುಕೊಳ್ಳಬೇಕೆಂದೂ ಹೇಳಿರುವುದು."

ಬಂಗಾಳದ ಹಳ್ಳಿಗಳಲ್ಲಿ ಪ್ರಬಲವಾಗಿದ್ದ ಕೆಲವು ಪದ್ಧತಿಗಳು ಸ್ವಾಮಿಜಿಗೆ ಹಿಡಿಸುತ್ತಿರಲಿಲ್ಲ. ಒಂದೇ ಜಲಾಶಯವನ್ನು ಸ್ನಾನಮಾಡುವುದಕ್ಕೆ, ಬಟ್ಟೆ

ಒಗೆಯುವುದಕ್ಕೆ ಮತ್ತು ಕುಡಿಯುವ ನೀರನ್ನು ಒಯ್ಯುವುದಕ್ಕೆ ಉಪಯೋಗಿಸುವ ಪದ್ಧತಿ ಅವರಿಗೆ ಅಸಹ್ಯಕರವಾಗಿತ್ತು. ಅವರು ಪದೇ ಪದೇ ಹೇಳುತ್ತಿದ್ದರು : "ಪ್ರಪಂಚದ ಹೊಲಸನ್ನೆಲ್ಲಾ ತಲೆಯಲ್ಲಿ ತುಂಬಿಕೊಂಡಿರುವ ಇವರಿಂದ ನೀನು ಏನನ್ನು ತಾನೆ ನಿರೀಕ್ಷಿಸಬಲ್ಲೆ ? ಅನ್ಯರ ವ್ಯವಹಾರಗಳಲ್ಲೆಲ್ಲಾ ತಲೆಹಾಕುವ ಈ ಹಳ್ಳಿಗರ ಪದ್ಧತಿ ತುಂಬ ಕೆಟ್ಟದ್ದು. ಪಟ್ಟಣಿಗರಲ್ಲೇನು ಈ ಹವ್ಯಾಸಗಳು ಇಲ್ಲದೆ ಇಲ್ಲ. ಆದರೆ ಅವರಿಗೆ ಕಾಲ ಕಳೆಯಲು ಅಷ್ಟೊಂದು ಅವಕಾಶವಿರುವುದಿಲ್ಲ. ಪೇಟೆಯ ಜೀವನ ತುಂಬ ದುಬಾರಿ ; ಆದರಿಂದ ಕಷ್ಟಪಟ್ಟು ದುಡಿಯಬೇಕು. ದಿನದ ದುಡಿತದ ಅನಂತರ, ಚದುರಂಗ ಆಡುತ್ತಾ, ಸೇದುತ್ತಾ ಬೇರೆಯವರ ವಿಚಾರವಾಗಿ ಹರಟೆಕೊಚ್ಚುವಷ್ಟು ಸಮಯ ಅವರಿಗೆ ಉಳಿದಿರುವುದಿಲ್ಲ. ಹಾಗಲ್ಲ ದಿದ್ದರೆ ಪೇಟೆ ದೆವ್ವಗಳು ಆ ವಿಚಾರದಲ್ಲಿ ಹಳ್ಳಿ ದೆವ್ವಗಳನ್ನೂ ಮೀರಿಸಿ ಮೆರೆಯು ತ್ತಿದ್ದವು ".

ಪ್ರತಿ ದಿನವೂ ಸ್ವಾಮಿಜಿ ಆಡುತ್ತಿದ್ದ ಈ ರೀತಿಯ ಸ್ವಾರಸ್ಯಕರ ಮಾತುಕತೆ ಗಳಿಂದ ಒಂದು ಸಂಪುಟವನ್ನೆ ತುಂಬಬಹುದಾಗಿತ್ತು. ಒಂದು ಪ್ರಶ್ನೆಗೆ ಒಂದೇ ರೀತಿಯಲ್ಲಿ ಉತ್ತರಿಸುವುದು ಅಥವಾ ಒಂದೇ ವಿಧಾನದಿಂದ ವಿವರಿಸುವುದು ಅವರ ರೀತಿಯಾಗಿರಲಿಲ್ಲ. ಎಂದಾದರೂ ಅದೇ ಪ್ರಶ್ನೆಯನ್ನು ಎತ್ತಿಕೊಳ್ಳಬೇಕಾದ ಸಂದರ್ಭ ಒದಗಿದಾಗ, ಆದರ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತಿದ್ದರು. ಅಂಥಾ ಹೊಸ ಉಪಮಾನ ಮತ್ತು ವಿವರಣೆಯನ್ನು ಉಪಯೋಗಿಸುತ್ತಿದ್ದರು ; ಇದೊಂದು ಹೊಸ ವಿಷಯವೋ ಎಂದು ತೋರುವಂತೆ ಹೊಸ ರೀತಿಯಲ್ಲಿ ವ್ಯಾಖ್ಯಾನಿಸುತ್ತಿದ್ದರು. ಪರಿಣಾಮವಾಗಿ ಅವರ ಮಾತುಗಳು ಎಂದೂ, ಯಾರಿಗೂ ಬೇಸರವನ್ನುಂಟು ಮಾಡುತ್ತಿರಲಿಲ್ಲ ; ಬದಲಾಗಿ ಹೆಜ್ಜೆ ಹೆಜ್ಜೆಗೂ ಅವರ ಕುತೂಹಲವನ್ನು ಕೆರಳಿಸು ತ್ತಿತ್ತು ; ಜನರು ಮಂತ್ರಮುಗ್ಧರಾಗಿ ಕುಳಿತಿರುತ್ತಿದ್ದರು. ಅವರ ಸಾರ್ವಜನಿಕ ಭಾಷಣಗಳಲ್ಲಿಯೂ ಇದೇ ವಿಧಾನವನ್ನು ಬಳಸುತ್ತಿದ್ದರು. ಮೊದಲೇ ಸಮಗ್ರ ವಿಷಯವನ್ನು ಕುರಿತು ಆಲೋಚಿಸಿ, ಕಾಗದದ ಮೇಲೆ ಗುರುತುಹಾಕಿಕೊಳ್ಳುವ ಅಭ್ಯಾಸ ಅವರಿಗೆ ಇರಲಿಲ್ಲ. ಉಪನ್ಯಾಸಕ್ಕೆ ಒಂದು ನಿಮಿಷ ಮೊದಲು ಕೂಡ ಅವರು ನಾನಾ ವಿಷಯಗಳ ಮೆಲೆ ಮಾತನಾಡುತ್ತಾ, ತಮಾಷೆ ಮಾಡುತ್ತಾ, ಹಾಸ್ಯಚಟಾಕಿಗಳನ್ನು ಹಾರಿಸುತ್ತಿದ್ದರು. ಇವು ಯಾವುವೂ ಅವರ ಉಪನ್ಯಾಸದ ವಿಷಯಕ್ಕೆ ಸ್ವಲ್ಪವೂ ಸಂಬಂಧಪಟ್ಟಿರುತ್ತಿರಲಿಲ್ಲ. ಬಹುಶಃ ಅವರು ಏನು ಮಾತ ನಾಡುತ್ತಾರೆ ಎಂಬುದು ಅವರಿಗೂ ಗೊತ್ತಿರುತ್ತಿರಲಿಲ್ಲ. ಅದು ಹೇಗಾದರೂ ಇರಲಿ, ಕೆಲವು ದಿನಗಳು ಅವರ ಸಂಗಲಾಭವನ್ನು ಹೊಂದುವ ಸದವಕಾಶ ನಮಗೆ ಒದಗಿತ್ತು ; ಆಗ ಅವರು ನಮಗೆ ಹೇಳಿದ ಸಂಗತಿಗಳಲ್ಲಿ ನನಗೆ ಸಾಧ್ಯವಾದಷ್ಟನ್ನು ಇಲ್ಲಿ ನಿರೂಪಿಸುತ್ತೇನೆ.

ವಿಜ್ಞಾನದ ಬೆಳಕಿನಲ್ಲಿ ಧರ್ಮವನ್ನು ಉಜ್ವಲವಾಗಿ ವ್ಯಾಖ್ಯಾನಿಸುವುದರಲ್ಲಿ

ಮತ್ತು ಅವೆರಡನ್ನೂ ಯಶಸ್ವಿಯಾಗಿ ಸಮನ್ವಯಗೊಳಿಸುವುದರಲ್ಲಿ ಸ್ವಾಮಿಜಿಗೆ ಸಮನಾದ ಮತ್ತೊಬ್ಬ ವ್ಯಕ್ತಿಯನ್ನು ನಾನು ಕಂಡಿಲ್ಲವೆಂದು ಹಿಂದೆಯೆ ಹೇಳಿದ್ದೇನೆ. ಅಂತಹ ಕೆಲವು ಮಾತುಗಳನ್ನು ಇಲ್ಲಿ ಹೇಳುತ್ತೇನೆ. ಎಷ್ಟಾದರೂ ಅವೆಲ್ಲಾ ನನ್ನ ನೆನಪಿನ ವರದಿ. ಈ ಪ್ರಸ್ತಾಪದಲ್ಲಿ ಏನಾದರೂ ದೋಷಗಳು ಕಂಡುಬಂದರೆ, ಅದು ಸ್ವಾಮಿಜಿಯ ವ್ಯಾಖ್ಯಾನದ ತಪ್ಪಲ್ಲ; ನನ್ನ ದುರ್ಬಲ ನೆನಪಿನ ಪರಿಣಾಮ. ಸ್ವಾಮಿಜಿ ಹೇಳಿದರು :

"ಎಲ್ಲಾ ವಸ್ತುಗಳೂ—ಜಡ ಮತ್ತು ಚೇತನ—ಹೇಗೆ ಹೇಗೆಯೊ ಅಂತೂ ಏಕತ್ವದ ಕಡೆ ಧಾವಿಸುತ್ತಿವೆ. ಪ್ರಾರಂಭದಲ್ಲಿ ಮನುಷ್ಯರು ತಮ್ಮ ಕಣ್ಣಿಗೆ ಬಿದ್ದ ಬೇರೆ ಬೇರೆ ವಸ್ತುಗಳಿಗೆ ಬೇರೆ ಬೇರೆ ಹೆಸರು ಕೊಟ್ಟರು. ಅನಂತರ ಪರೀಕ್ಷಿಸಿದ ಮೇಲೆ, ಎಲ್ಲಾ ವಸ್ತುಗಳೂ ೬೩ ಮೂಲವಸ್ತುಗಳಿಂದ ಬಂದಿವೆ ಎಂಬ ನಿರ್ಣಯಕ್ಕೆ ಬಂದರು. ಈಗ ಮತ್ತೆ, ಆ ಮೂಲವಸ್ತುಗಳು ಅವಕ್ಕೂ ಮೂಲವಾದ ಕೆಲವು ವಸ್ತುಗಳಿಂದ ಸಂಯೋಜಿತವಾಗಿರಬೇಕೆಂದು ಕೆಲವರು ಅನುಮಾನಿಸುತ್ತಾರೆ. ರಸಾಯನಶಾಸ್ತ್ರ ತನ್ನ ಗುರಿಮುಟ್ಟಿದಾಗ, ಬೇರೆ ಬೇರೆ ರೂಪದಲ್ಲಿರುವ ಎಲ್ಲಾ ವಸ್ತುಗಳೂ ಒಂದೇ ಮೂಲದಿಂದ ಉದ್ಭವಿಸಿರಬೇಕೆಂದು ಕಂಡು ಹಿಡಿದಿರುತ್ತಾರೆ. ಮೊದಲು ಜನರು ಉಷ್ಣ, ಬೆಳಕು ಮತ್ತು ವಿದ್ಯುತ್ ಬೇರೆ ಬೇರೆ ಎಂದು ಎಣಿಸಿದ್ದರು. ಈಗ ಅವು ಒಂದೇ ಶಕ್ತಿಯ ಭಿನ್ನ ಭಿನ್ನ ರೂಪಗಳೆಂಬುದನ್ನು ಸಮರ್ಥಿಸುತ್ತಾರೆ. ಪ್ರಾರಂಭದ ದಿನಗಳಲ್ಲಿ ಜಗತ್ತಿನ ವಸ್ತುಗಳನ್ನೆಲ್ಲಾ ಜೀವ, ಅಜೀವ ಮತ್ತು ಸಸ್ಯಗಳು ಎಂದು ವಿಭಾಗಿಸಿದ್ದರು. ಈಗ ಅವರು ಇತರ ಜೀವಂತ ಪ್ರಾಣಿಗಳಂತೆ ಸಸ್ಯಗಳಿಗೂ ಜೀವವಿದೆ, ಸಂವೇದನೆಗಳಿವೆ ಎಂದು ಕಂಡುಹಿಡಿದಿದ್ದಾರೆ ; ಒಂದೇ ಒಂದು ವ್ಯತ್ಯಾಸ ವೆಂದರೆ ಅವುಗಳಿಗೆ ಚಲನೆಯಿಲ್ಲ. ಆದ್ದರಿಂದ ನಾವು ಈಗ ಕೇವಲ ಎರಡು ವಿಭಾಗ ಮಾಡಿದ್ದೇವೆ—ಜೀವ ಮತ್ತು ಅಜೀವ. ನಾವು ಈಗ ಜಡವೆಂದು ಪರಿಗಣಿಸಿರು ವುದಕ್ಕೂ ಒಂದಲ್ಲ ಒಂದು ರೀತಿಯ ಜೀವವಿದೆ ಎಂದು ಕಂಡುಹಿಡಿಯುವ ದಿನ ಬಹುಬೇಗನೆ ಬರುತ್ತದೆ.

ಭೂಮಿಯ ಮೇಲ್ಪದರದಲ್ಲಿರುವ ಏರಿಳಿತಗಳ ಪ್ರದೇಶವು ಸಮತಟ್ಟಾಗಲು ಪ್ರಯತ್ನಿಸುವುದನ್ನು ನಾವು ಕಾಣುತ್ತೇವೆ. ಮಳೆಯನೀರು ಬೆಟ್ಟಗಳನ್ನು ಕೊರೆದು ಕಣಿವೆಗಳನ್ನು ತುಂಬುತ್ತದೆ. ಬಿಸಿ ಪದಾರ್ಥವನ್ನು ಇತರ ವಸ್ತುಗಳ ಮಧ್ಯದಲ್ಲಿ ಇಟ್ಟಾಗ, ಅವು ಉಷ್ಣಕಿರಣಗಳ ಮೂಲಕ ಸ್ವಲ್ಪಮಟ್ಟಿನ ಶಾಖವನ್ನು ತಾವೂ ಪಡೆಯಲು ಪ್ರಯತ್ನಿಸುತ್ತವೆ. ಹೀಗೆ ವಸ್ತುಗಳು ಪ್ರವಹನ, ಪ್ರಸಾರಣ ಮತ್ತು ವಿಕಿರಣದಿಂದ ಸಮತ್ವದತ್ತ ಮುಂದುವರಿಯುತ್ತಿರುತ್ತವೆ.

ಮರದ ಹೂವು, ಹಣ್ಣು, ಬೇರು, ಎಲೆಗಳು ಬೇರೆ ಬೇರೆಯೆಂದು ನಮಗೆ ತೋರುತ್ತದೆ. ಆದರೆ ಅವೆಲ್ಲಾ ಒಂದೇ ಎಂದು ವಿಜ್ಞಾನ ಪುಷ್ಟೀಕರಿಸುತ್ತದೆ. ಒಂದು ಬೆಳಕಿನ ಕಿರಣವನ್ನು ಯವದ ಮೂಲಕ ನೋಡಿದಾಗ ಅದು ಒಡೆದು ಏಳು

ಬಣ್ಣಗಳು ಗೋಚರಿಸುತ್ತವೆ. ಬರಿಗಣ್ಣಿಗೆ ಒಂದು ಬಣ್ಣವಾಗಿ ತೋರುವುದು ನೀಲಿ ಅಥವಾ ಕೆಂಪು ಗಾಜಿನ ಮೂಲಕ ನೋಡಿದಾಗ ನೀಲಿ ಅಥವಾ ಕೆಂಪಾಗಿ ಕಾಣಿಸುತ್ತದೆ.

ಹೀಗೆ ಸತ್ಯವೂ ಒಂದೇ. ಆದರೆ ಮಾಯೆಯ ಮೂಲಕ ಅನೇಕವಾಗಿ ಕಾಣಿಸುತ್ತದೆ. ಈ ರೀತಿಯಾಗಿ ಜನರು, ಕಾಲದೇಶಾತೀತವಾಗಿರುವ ಆ ಅಖಂಡ ಸತ್ಯ, ಅದರಲ್ಲಿ ಮತ್ತು ಅದರ ಮೂಲಕ ಎಲ್ಲಾ ರೀತಿಯ ಜ್ಞಾನವನ್ನು ಪಡೆಯುತ್ತಾರೆ. ಆದರೆ ಅದನ್ನು ಮಾತ್ರ ಅರಿಯುವುದೂ ಇಲ್ಲ; ಅರಿಯಲೂ ಆರರು."

ಸ್ವಾಮಿಜಿ ಹಾಗೆ ಮಾತನಾಡಿದಾಗ ನಾನು ಸೇರಿಸಿದೆ: "ನಮ್ಮ ಸ್ವಂತ ಕಣ್ಣುಗಳನ್ನೆ ನಾವು ನಂಬಬಹುದೇನು? ಎರಡು ರೈಲುಗಳು ಪರಸ್ಪರ ಸಮಾನಾಂತರವಾಗಿ ನಿಂತಿರುವಾಗ, ಅವು ಕೊನೆಯಲ್ಲಿ ಸಂಧಿಸಿದಂತೆ ಕಾಣಿಸುತ್ತವೆ. ಅದೇ ಅವುಗಳ ಕೊನೆಯ ತುದಿ. ಹಗ್ಗವನ್ನು ಹಾವೆಂದು ಭ್ರಮಿಸುವುದಂತೂ ದಿನನಿತ್ಯದ ವ್ಯಾಪಾರ; ಹಾಗೆಯೆ ಮರೀಚಿಕೆಯೂ ನಮ್ಮ ಕಣ್ಣಿನ ಭ್ರಾಂತಿ. ಜಾನ್ ಸ್ಟೂಯರ್ಟ್ ಮಿಲ್ ಹೇಳುತ್ತಾನೆ: ಮನುಷ್ಯ ಸತ್ಯವನ್ನರಿಯಬೇಕೆಂದು ಹುಚ್ಚನಾಗುತ್ತಾನೆ. ಆದರೂ ಕೇವಲ ಸತ್ಯವನ್ನರಿಯುವ ಶಕ್ತಿ ಅವನಲ್ಲಿ ಇರುವುದಿಲ್ಲ. ಏಕೆಂದರೆ ಕೇವಲ ಸತ್ಯ ಅವನಿಗೆ ಗೋಚರಿಸಿದಾಗ, ಅದೇ ಸತ್ಯವಾದದ್ದೆಂದು ಅವನಿಗೆ ಹೇಗೆ ಗೊತ್ತಾಗಬೇಕು? ನಮ್ಮ ಜ್ಞಾನವೆಲ್ಲಾ ಸಾಪೇಕ್ಷವಾದದ್ದು; ಆ ಕೈವಲ್ಯವನ್ನು ಗ್ರಹಿಸುವ ಸಾಮರ್ಥ್ಯವನ್ನು ನಾವು ಹೊಂದಿಲ್ಲ."

ಸ್ವಾಮಿಜಿ ಹೇಳಿದರು: "ಕೇವಲ ಜ್ಞಾನವನ್ನು ಅರಿಯಲಾಗುವುದಿಲ್ಲ ಎಂಬುದು ನನ್ನ ವಿಚಾರದಲ್ಲಿ, ಇತರ ಸಾಮಾನ್ಯ ಜನರ ವಿಚಾರದಲ್ಲಿ ಸತ್ಯವಿರಬಹುದು; ಆದರೆ ಯಾರೂ ಅದನ್ನು ಹೊಂದಲಾರರೆಂದು ನೀನು ಹೇಗೆ ಹೇಳುವೆ? ನೀನು ಯಾವುದನ್ನು ಜ್ಞಾನವೆಂದು ಕರೆಯುವೆಯೊ ಅದು ನಿಜವಾಗಿಯೂ ಅಜ್ಞಾನದ ಒಂದು ರೂಪ. ಸತ್ಯಜ್ಞಾನ ಉದಯವಾದಾಗ ಮಿಥ್ಯಾಜ್ಞಾನ ಮಾಯವಾಗುತ್ತದೆ. ಆಗ ನೀನು ನೋಡುತ್ತೀಯೆ, ಎಲ್ಲವೂ ಒಂದೇ ಆಗಿರುವುದನ್ನು. ದ್ವೈತ ತತ್ತ್ವಭಾವನೆ ಅಜ್ಞಾನಜನ್ಯ."

"ಸ್ವಾಮಿಜಿ ಇದು ತುಂಬ ಸಂದಿಗ್ಧ ಸ್ಥಿತಿಯಲ್ಲಿದೆ"—ನಾನು ವಿರೋಧಿಸಿದೆ; "ಸತ್ಯಜ್ಞಾನ ಮತ್ತು ಮಿಥ್ಯಾಜ್ಞಾನವೆಂದು ಎರಡು ರೀತಿಯ ಜ್ಞಾನಗಳಿರುವ ಪಕ್ಷದಲ್ಲಿ, ನೀವು ಸತ್ಯಜ್ಞಾನವೆಂದು ಹೇಳುತ್ತಿರುವುದೇ ಮಿಥ್ಯವಾಗಿರಬಹುದು; ನೀವು ಮಿಥ್ಯವೆಂದು ಖಂಡಿಸುತ್ತಿರುವ ದ್ವೈತ ತತ್ತ್ವವೇ ನಿಜವಾದ ಸತ್ಯವಾಗಿರಬಹುದು."

"ಹೌದು ಮತ್ತೆ"—ಅವರು ಹೇಳಿದರು, "ಅದಕ್ಕಾಗಿಯೆ ನಾವು ವೇದಗಳಲ್ಲಿ ನಂಬಿಕೆಯಿಡಬೇಕು. ವೇದಗಳು ದ್ವೈತಾವಸ್ಥೆಯನ್ನು ಮೀರಿಹೋಗಿ ಏಕವನ್ನು ಅರಿತ ನಮ್ಮ ಪ್ರಾಚೀನ ಋಷಿಗಳ, ದ್ರಷ್ಟಾರರ ಅನುಭವಸತ್ಯವನ್ನು

ಒಳಗೊಂಡಿವೆ. ಕೇವಲ ಕಾರ್ಯಕಾರಣವನ್ನೇ ಅವಲಂಬಿಸಿದ್ದರೆ ನನಸಿನ ಸ್ಥಿತಿ ಸತ್ಯವೋ ಅಥವಾ ಕನಸಿನ ಸ್ಥಿತಿ ಸತ್ಯವೋ ಎಂಬ ಸಿದ್ಧಾಂತಕ್ಕೆ ಬರಲಾರೆವು. ಅವೆರಡನ್ನೂ ವಸ್ತುಸ್ಥಿತಿಯ ದೃಷ್ಟಿಯಿಂದ ಸವಿಾಕ್ಷಿಸಬಹುದಾದ, ಅವೆರಡಕ್ಕೂ ವಿಾರಿದ ನಿಲುವಿನಲ್ಲಿ ನಿಂತಲ್ಲದೆ ಅರಿಯಲಾರೆವು. ಅವೆರಡರಲ್ಲಿ ಯಾವುದು ಸತ್ಯ ಎಂಬುದನ್ನು ನಾವು ಹೇಗೆತಾನೆ ಕಂಡುಕೊಳ್ಳಬಲ್ಲೆವು? ಅದರ ವಿಚಾರವಾಗೆಲ್ಲಾ ಹೇಳಲು ಎರಡು ಸ್ಥಿತಿಯನ್ನೂ ಅನುಭವಿಸಿರಬೇಕು. ಒಂದು ಅನುಭವಿಸುತ್ತಿದ್ದಾಗ ಮತ್ತೊಂದು ಮಿಥ್ಯೆ ಎಂದು ತೋರುತ್ತದೆ. ನಿನ್ನ ಕನಸಿನಲ್ಲಿ ನೀನು ಕಲ್ಕತ್ತಾದಲ್ಲಿ ವ್ಯಾಪಾರ ಮಾಡುತ್ತಿರಬಹುದು. ಆದರೆ ನೀನು ಎಚ್ಚರಗೊಂಡಾಗ ಹಾಸಿಗೆಯಲ್ಲಿ ಮಲಗಿರುವುದು ಅರಿವಾಗುತ್ತದೆ. ಅಖಂಡಜ್ಞಾನ ಉದಯವಾದಾಗ ನೀನು ಒಂದನ್ನಲ್ಲದೆ ಬೇರೆ ಏನನ್ನೂ ಕಾಣುವುದಿಲ್ಲ; ಆಗ ನಿನಗೆ ಮೊದಲಿನ ದ್ವೈತ ಭಾವನೆ ಮಿಥ್ಯೆ ಎಂಬುದು ಅರಿವಾಗುತ್ತದೆ. ಆದರೆ ಅದೆಲ್ಲಾ ತುಂಬ ದೂರ ಸಾಗಿದ ಮೇಲೆ. ನಾವು ವರ್ಣಮಾಲೆಯನ್ನೆ ಕಲಿಯಲು ಪ್ರಾರಂಭಿಸಿಲ್ಲ; ಆಗಲೆ ರಾಮಾಯಣ ಮಹಾಭಾರತ ಓದಬೇಕೆಂದು ಆಶಿಸಬಹುದೇನು? ಧರ್ಮವೆನ್ನುವುದು ಒಂದು ರೀತಿಯ ಅನುಭವ, ಬುದ್ಧಿಯ ಅರಿಯುವಿಕೆ ಅಲ್ಲ. ಇದನ್ನರಿಯಲು ಸಾಧನೆ ಮಾಡಬೇಕು. ಭೌತಶಾಸ್ತ್ರ, ರಸಾಯನಶಾಸ್ತ್ರ, ಸಸ್ಯಶಾಸ್ತ್ರ ಮುಂತಾದ ವಿಜ್ಞಾನಗಳಿಂದ ಇಂತಹ ಸ್ಥಿತಿ ಸಮರ್ಥಿಸಲ್ಪಡುತ್ತದೆ. ಒಂದು ಸೀಸೆ ಆಮ್ಲಜನಕ ಮತ್ತು ಎರಡು ಸೀಸೆ ಜಲಜನಕವನ್ನು ಅಕ್ಕಪಕ್ಕದಲ್ಲಿಟ್ಟು "ನೀರೆಲ್ಲಿ?" ಎಂದು ಹೇಳಲಾಗುವುದಿಲ್ಲ. ಅವುಗಳ ಸೀಸೆಗಳನ್ನು ಹತ್ತಿರದಲ್ಲಿ ಇಟ್ಟು ಅವುಗಳ ಮೂಲಕ ವಿದ್ಯುತ್ ಪ್ರವಾಹ ಹರಿಸಿದಾಗ, ಎರಡೂ ಸಂಯೋಜಿಸಿ ನೀರಾಗುತ್ತದೆ. ಆಗ ಮಾತ್ರ ನೀನು ನೀರನ್ನು ನೋಡಬಲ್ಲೆ. ಆಮ್ಲಜನಕ ಮತ್ತು ಜಲಜನಕಗಳ ಸಂಯೋಜನೆಯಿಂದ ನೀರು ಉತ್ಪನ್ನವಾಗುತ್ತದೆ ಎಂಬುದನ್ನು ತಿಳಿಯಬಲ್ಲೆ. ಅಖಂಡ ಅನುಭವವನ್ನು ಪಡೆಯಲು ಆಶಿಸಿದರೆ, ಅದೇ ರೀತಿಯ ಶ್ರದ್ಧೆಯನ್ನು ಧರ್ಮದಲ್ಲಿಯೂ ಇಡಬೇಕು; ಅದೇ ರೀತಿಯ ಕುತೂಹಲ, ದೃಢಪ್ರಯತ್ನ, ನಿರಂತರ ಪರಿಶ್ರಮ ಬೇಕು. ಆಗ ಮಾತ್ರ ಸಫಲವಾಗುವೆ. ನಮಗೆ ಒಂದು ತಿಂಗಳಿನಿಂದಾದ ಅಭ್ಯಾಸವನ್ನೆ ಬಿಡುವುದಕ್ಕೆ ಆಗುವುದಿಲ್ಲ; ಹಾಗಿರುವಾಗ ವರ್ಷಾನುಗಟ್ಟಲೆ ಆಗಿರುವ ಅಭ್ಯಾಸದ ವಿಚಾರವಾಗಿ ಏನು ಹೇಳುವುದು? ಪ್ರತಿಯೊಬ್ಬ ವ್ಯಕ್ತಿಯೂ ಜನ್ಮಾಂತರಗಳಿಂದ ಪಡೆದುಕೊಂಡು ಬಂದಿರುವ ಪ್ರವೃತ್ತಿಗಳ ದೊಡ್ಡ ಹೊರೆಯಿಂದ ಅವನ ದೃಷ್ಟಿ ಮಸುಕಾಗುತ್ತದೆ. ಆದರೂ ಎಂತಹ ಅಲ್ಪವಾಗಲಿ, ಅದರಲ್ಲಿ ಕೇವಲ ಸತ್ಯದ ಅಂಶ ಇರುತ್ತದೆ! ನಮಗೆ ಬಲವಾದ ಹೊಡೆತ ಬಿದ್ದಾಗ ಪ್ರಪಂಚವನ್ನು ಕುರಿತ ಕ್ಷಣಿಕ ವೈರಾಗ್ಯ ಉಂಟಾಗುತ್ತದೆ. ಆಗ ನಾವು ಕಿರಿಚಿಕೊಳ್ಳುತ್ತೇವೆ: "ನಾನೇಕೆ ಅನಂತವನ್ನು ಸಾಕ್ಷಾತ್ಕರಿಸಿಕೊಳ್ಳಬಾರದು?"

"ಸ್ವಾಮಿಜಿ, ನೀವು ಹೇಳುವುದು ನಿಜವಾದರೆ", ನಾನು ಪ್ರತಿಪಾದಿಸಿದೆ, "ಅದು ಅದೃಷ್ಟಸಿದ್ಧಾಂತವಾಗುತ್ತದೆ. ಜನ್ಮಾಂತರ ಕರ್ಮ ಸಂಸ್ಕಾರವನ್ನೆಲ್ಲಾ ಒಂದೇ ಜನ್ಮದಲ್ಲಿ ತೊಡೆದುಹಾಕಲು ಆಗದಿದ್ದ ಪಕ್ಷದಲ್ಲಿ, ನಮ್ಮ ಎಲ್ಲಾ ಪ್ರಯತ್ನ ವನ್ನು ತ್ಯಜಿಸಿಬಿಟ್ಟು ಸುಮ್ಮನಿರುವುದೆ ಮೇಲು. ಎಲ್ಲಾ ಅದಾಗೇ ಆಗುವವರೆಗೂ ನಾನು ಮುಕ್ತಿಗಾಗಿ ಕಾಯುತ್ತಿರಬಹುದು."

"ಅದಲ್ಲಾ ನಿಜವಾದ ಸ್ಥಿತಿ"—ಅವರು ವಿವರಿಸಿದರು, "ನಮ್ಮ ಪೂರ್ವ ಜನ್ಮದ ಕರ್ಮಫಲಗಳನ್ನು ನಾವು ಅನುಭವಿಸಬೇಕೆಂಬುದು ನಿಜ; ಆದರೂ ಕೆಲವು ವಿಧಾನಗಳಿಂದ ಆದಷ್ಟು ಜಾಗ್ರತೆ ಅದರಿಂದ ತಪ್ಪಿಸಿಕೊಳ್ಳಬಹುದು. ಹತ್ತು ಮಾಯಾಯಂತ್ರದ ಚಿತ್ರಗಳನ್ನು ನೀನು ಹತ್ತು ನಿಮಿಷದಲ್ಲೆ ತೋರಿಸಬಹುದು, ಅಥವಾ ರಾತ್ರಿಯೆಲ್ಲಾ ಅವನ್ನು ತೋರಿಸುವುದರಲ್ಲೆ ಕಳೆಯಬಹುದು. ಅದು ನಿಮ್ಮ ನಿಮ್ಮ ಅಭಿರುಚಿ ಶ್ರದ್ಧೆಗಳನ್ನು ಅವಲಂಬಿಸಿದೆ."

ಸೃಷ್ಟಿ ರಹಸ್ಯದ ವಿಚಾರವಾಗಿ ಸ್ವಾಮಿಜಿಯ ವಿವರಣೆ ತುಂಬ ಆಸಕ್ತಿಕರ ವಾಗಿದೆ: "ಎಲ್ಲಾ ಸೃಷ್ಟ ವಸ್ತುಗಳನ್ನೂ ನಮ್ಮ ಅನುಕೂಲಕ್ಕಾಗಿ, ಜಡ ಮತ್ತು ಚೇತನವೆಂದು ದರ್ಜೆಗಳಾಗಿ ವಿಂಗಡಿಸಿದ್ದೇವೆ. ಸೃಷ್ಟಿಯ ವಸ್ತುಗಳಲ್ಲೆಲ್ಲಾ ಮನುಷ್ಯ ಅತ್ಯುನ್ನತ ಅಂತಸ್ತಿನಿಂದ ಬಂದಿದ್ದಾನೆ. ಕೆಲವು ಧರ್ಮಗಳ ಪ್ರಕಾರ ದೇವರು ತನ್ನ ಸ್ವಂತ ಆಕೃತಿಯನ್ನು ಅನುಸರಿಸಿ ಮನುಷ್ಯನನ್ನು ಸೃಷ್ಟಿಸಿದ: ಮತ್ತೆ ಕೆಲವರ ಪ್ರಕಾರ ಮನುಷ್ಯ ಕೇವಲ ಬಾಲವಿಲ್ಲದ ಕಪಿ. ಕೆಲವರು, ಮಾನವ ನಿಗೆ ಮಾತ್ರ ಆಲೋಚನಾಶಕ್ತಿ ಇರುವುದು; ಏಕೆಂದರೆ ಅವನ ಮೆದುಳಿನಲ್ಲಿ ಕಂದುವರ್ಣದ ವಸ್ತು ಹೆಚ್ಚಾಗಿದೆ ಎನ್ನುತ್ತಾರೆ. ಅಂತೂ ಮನುಷ್ಯ ಒಬ್ಬ ಜೀವಿ; ಹಾಗೆಯೆ ಸೃಷ್ಟಿಯಲ್ಲಿ ಅವನು ಅಂತರ್ಗತನಾಗಿದ್ದಾನೆ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಈಗ ಸೃಷ್ಟಿ ಎಂದರೆ ಏನೆಂದು ತಿಳಿದುಕೊಳ್ಳೋಣ. ಒಂದು ಕಡೆಯಿಂದ ಪಾಶ್ಚಾತ್ಯ ವಿದ್ವಾಂಸರು ವಿಶ್ಲೇಷಣೆ ಮತ್ತು ವಿಭಜನೆಯ ದಾರಿಯನ್ನು ಹಿಡಿದು ಹೊರಟಿದ್ದಾರೆ; ಅವರು ಪ್ರತಿಯೊಂದನ್ನೂ ಪ್ರತ್ಯೇಕವಾಗಿ ಪರೀಕ್ಷಿಸಲು ತೊಡಗಿದ್ದಾರೆ. ಮತ್ತೊಂದು ಕಡೆಯಿಂದ ಭಾರತದಲ್ಲಿ ನಮ್ಮ ಪಿತೃಗಳು ಈ ಉಷ್ಣವಲಯದ ಹವಾ ಮತ್ತು ಫಲವತ್ತಾದ ಭೂಮಿಯಲ್ಲಿ ತಮ್ಮ ದೇಹಪೋಷ ಣೆಗೆ ಬಹಳ ಅಲ್ಪಕಾಲವನ್ನು ವಿನಿಯೋಗಿಸಿ, ಒಂದು ಮುಬ್ಬುಹಣತೆ ಮತ್ತು ಸಿಂಹದ ಚರ್ಮದಿಂದ ತೃಪ್ತರಾಗಿ, ತಮ್ಮ ಸಮಸ್ತ ಅಭಿರುಚಿಯನ್ನು ಈ ಸಮಸ್ಯೆಗೆ ಉತ್ತರ ಕಂಡುಹಿಡಿಯಲು ಉಪಯೋಗಿಸುತ್ತಿದ್ದರು:—"ಯಾವುದನ್ನು ತಿಳಿಯು ವುದರಿಂದ ಎಲ್ಲವನ್ನೂ ಅರಿಯಬಹುದೊ ಅದು ಯಾವುದು?" ಅವರ ಗುಂಪಿನಲ್ಲಿ ಎಲ್ಲಾ ರೀತಿಯ ಜನರೂ ಇದ್ದರು. ಆದ್ದರಿಂದ ನಮ್ಮ ಧರ್ಮದಲ್ಲಿ, ಅತಿ ವಾಸ್ತವಿಕ ವಾದಿಗಳಾದ ಚಾರ್ವಾಕರಿಂದ ಹಿಡಿದು ಪರಮ ಅದ್ವೈತಿಗಳಾದ ಶಂಕರಾ ಚಾರ್ಯರವರೆಗಿನ ಎಲ್ಲ ಶ್ರೇಣಿಯ ಅಭಿಪ್ರಾಯಛಾಯೆಗಳನ್ನು ಕಾಣುತ್ತೇವೆ.

3

ಈ ಎರಡು ಗುಂಪಿನ ಜನರು (ಪೂರ್ವ ಮತ್ತು ಪಶ್ಚಿಮದವರು) ಈಗ ಒಂದೇ ಬಿಂದುವಿನಲ್ಲಿ ಸಂಗಮಿಸಿ ಒಂದೇ ರೀತಿಯಲ್ಲಿ ಹೇಳತೊಡಗಿದ್ದಾರೆ. ಅವರು, ಈಗ ವಿಶ್ವದ ಎಲ್ಲಾ ವಸ್ತುಗಳೂ ಒಂದು ಮೂಲ ಸತ್ಯದಿಂದ ಉದ್ಭವಿಸಿವೆ ; ಅದು ಕಾಲ ದೇಶಗಳಲ್ಲಿ ಅನಂತವಾಗಿದೆ; ವಿವರಣೆಗೆ ಅತೀತವಾಗಿದೆ ಎಂದು ಹೇಳುತ್ತಾರೆ. ಕಾಲ ಮತ್ತು ಆಕಾಶಗಳೂ ಅದೇ ರೀತಿಯವಾಗಿವೆ. ಕಾಲದ ಇಂಥ ಸಾಮಾನ್ಯ ಭಾವನೆಗಳನ್ನು ಹೇಳುವುದಕ್ಕೆ ದಿನ, ವಾರ, ತಿಂಗಳುಗಳಿವೆ ; ಇದನ್ನು ಪ್ರಧಾನ ವಾಗಿ ಸೂರ್ಯನ ಚಲನೆಯ ಆಧಾರದ ಮೇಲೆ ನಿರ್ಧರಿಸುತ್ತೇವೆ. ಈಗ ಕಾಲ ವನ್ನು ಕುರಿತು ಗಂಭೀರವಾಗಿ ಆಲೋಚಿಸು. ಅದರ ಮೊತ್ತವೇನು ? ಸೂರ್ಯನಿಗೆ ಆದಿ ಇಲ್ಲದೆ ಇಲ್ಲ. ಸೂರ್ಯ ಮೈದೋರುವ ಮೊದಲೂ ಕಾಲವಿತ್ತು. ಸೂರ್ಯನ ಅಸ್ತಿತ್ವ ನಾಶವಾದಾಗಲೂ ಕಾಲವಿರುವುದು ಖಂಡಿತ. ಆದ್ದರಿಂದ ಅಖಂಡ ಕಾಲ, ಒಂದು ಅಭಿವ್ಯಕ್ತಗೊಳಿಸಲಾರದ ಭಾವನೆ ಅಥವಾ ವಸ್ತು ಎಂಬುದಕ್ಕಿಂತ ಹೆಚ್ಚಾಗಿ ಏನನ್ನೂ ಹೇಳಲು ಸಾಧ್ಯವಾಗುವುದಿಲ್ಲ. ಅನಂತ ಸೃಷ್ಟಿಯ ಅನಂತ ಭಾಗವಾದ ' ಆಕಾಶ ' ಎಂಬ ಶಬ್ದಕ್ಕೆ ನಾವು ಭೂಮಿ ಅಥವಾ ಸೌರವ್ಯೂಹದಿಂದ ಪರಿಮಿತವಾದ, ಒಂದು ಮಿತವಾದ ಜಾಗ ಎಂದು ಅರ್ಥೈಸುತ್ತೇವೆ. ಯಾವ ವಸ್ತು ಇಲ್ಲದಿರುವ ಕಡೆಯೂ ಆಕಾಶವಿರುವ ಸಾಧ್ಯತೆ ಇದೆ. ಆದ್ದರಿಂದ ಅನಂತ ಆಕಾಶವೂ ಕಾಲದಂತೆ ಒಂದು ಅಭಿವ್ಯಕ್ತಗೊಳಿಸಲಾರದ ಭಾವನೆ ಅಥವಾ ವಸ್ತು. ಈಗ ಎಲ್ಲಿಂದ ಮತ್ತು ಹೇಗೆ ಈ ಸೌರವ್ಯೂಹ ಮತ್ತು ಈ ಎಲ್ಲಾ ಸೃಷ್ಟಿಯೂ ಬಂದಿದೆ ? ಸಾಮಾನ್ಯವಾಗಿ ನಾವು ಉತ್ಪಾದಕನಿಲ್ಲದ ಉತ್ಪಾದನೆಯನ್ನು ಕಾಣುವುದಿಲ್ಲ; ಆದ್ದರಿಂದ ಸೃಷ್ಟಿಗೂ ಒಬ್ಬ ಸೃಷ್ಟಿಕರ್ತನಿರಲೇಬೇಕೆಂಬ ನಿರ್ಧಾರಕ್ಕೆ ಬರುತ್ತೇವೆ. ಆದರೆ ಆಗ ಆ ಸೃಷ್ಟಿಕರ್ತನಿಗೆ ಮತ್ತೊಬ್ಬ ಅಜ್ಞಾತ ಸೃಷ್ಟಿಕರ್ತನಿರ ಬೇಕು. ಹಾಗೆ ಮೊದಲು ಸೃಷ್ಟಿಕರ್ತ ಅಥವಾ ಮೊದಲ ಮೂಲ ಅಥವಾ ದೇವರು, ಅಭಿವ್ಯಕ್ತಗೊಳಿಸಲಾರದ ಒಂದು ಭಾವನೆ ಅಥವಾ ವಸ್ತುವಾಗಿರಬೇಕು. ಆ ಅನಂತಗಳು ಕೆಲವು ಇರಲಾರವು ; ಆದ್ದರಿಂದ ಈ ಎಲ್ಲಾ ಅನಂತಗಳೂ ಒಂದೇ ವಸ್ತುವಿನ ಭಿನ್ನಭಿನ್ನ ಅಭಿವ್ಯಕ್ತಿಗಳಾಗಿವೆ ; ಮತ್ತು ಅವು ಒಂದೇ ಆಗಿರಲೇಬೇಕು ".

ಒಮ್ಮೆ ನಾನು ಅವರನ್ನು ಕೇಳಿದೆ : " ಸ್ವಾಮಿಜಿ, ಮಂತ್ರ ಇತ್ಯಾದಿ ವಿಚಾರ ಗಳಲ್ಲಿರುವ ಸಾಮಾನ್ಯ ನಂಬಿಕೆ ಸತ್ಯವಾದದ್ದೆ ? " ಅವರು ಹೇಳಿದರು : " ಅದೇಕೆ ಸತ್ಯವಾಗದೆ ಇರಬೇಕೊ, ನನಗೆ ಕಾರಣ ತಿಳಿಯುತ್ತಿಲ್ಲ. ನಿನ್ನನ್ನು ಯಾರಾದರೂ ಮಧುರವಾಗಿ, ನಯವಾಗಿ ಮಾತನಾಡಿಸಿದಾಗ ನೀನು ಸಂತೋಷಪಡುವೆ. ಹಾಗೆಯೆ ಕ್ರೂರವಾಗಿ ಕಠಿಣವಾಗಿ ಮಾತನಾಡಿಸಿದಾಗ ರೇಗಿಬೀಳುವೆ. ಹಾಗಿರು ವಾಗ ಬೇರೆ ಬೇರೆ ವಿಷಯದಲ್ಲಿ ನಿಯುಕ್ತರಾಗಿರುವ ದೇವತೆಗಳು, ಸುಮಧುರ ಪ್ರಾರ್ಥನೆಗೆ ಏಕೆ ಆನಂದಿತರಾಗದೆ ಇರಬೇಕು ? "

ಇದೆಲ್ಲಾ ಚರ್ಚೆಯ ಅನಂತರ ನಾನು ಹೇಳಿದೆ : " ಸ್ವಾಮಿಜಿ, ಈಗ ನೀವು

ನನ್ನ ಬೌದ್ಧಿಕ ಸಾಮರ್ಥ್ಯವನ್ನೆಲ್ಲಾ ಅಳೆದು ತೂಗಿ ನೋಡಿದ್ದೀರಿ. ನಾನು ಅನುಸರಿಸಬೇಕಾದ ದಾರಿಯನ್ನು ದಯವಿಟ್ಟು ತೋರಿಸಿಕೊಡುವಿರಾ ? " ಸ್ವಾಮಿಜಿ ಉತ್ತರಿಸಿದರು : " ಮೊದಲು ಮನಸ್ಸನ್ನು ಹತೋಟಿಗೆ ತರಲು ಪ್ರಯತ್ನಿಸು, ದಾರಿ ಯಾವುದಾದರೂ ಆಗಲಿ, ಪರವಾಯಿಲ್ಲ. ಮಿಕ್ಕ ಎಲ್ಲವೂ ಅದೇ ರೀತಿ ಆಗುತ್ತದೆ. ಮತ್ತು ಅದ್ವೈತಜ್ಞಾನವನ್ನು ಪಡೆಯುವುದು ತುಂಬಾ ಕಷ್ಟ. ಅದೇ ಮಾನವನ ಪರಮಗುರಿಯಾಗಬೇಕು. ಅದನ್ನು ತಿಳಿ. ಆದರೆ ನಾವು ಆ ಮಟ್ಟವನ್ನು ತಲಪುವ ಮೊದಲು, ದೀರ್ಘವಾದ ಪೂರ್ವಸಿದ್ಧತೆ ಮತ್ತು ದೀರ್ಘ ಪ್ರಯತ್ನ ಮಾಡಬೇಕು. ಸಾಧುಸಂಗ ಮತ್ತು ನಿಷ್ಕಾಮವೇ ಅದಕ್ಕೆ ದಾರಿ. ಇದಲ್ಲದೆ ಬೇರೆ ದಾರಿಗಳಿಲ್ಲ ".

ಅನು : ' ಇಂ '

ಎಂ. ಸಿ. ವಸಂತಕುಮಾರ್

# ಕರ್ಣ

ಭಾವದ ಗಡಿಯಾರ ಬಡಿದುಕೊಳ್ಳುತ್ತಿದ್ದರೂ ನಾನು ಸತ್ತಿದ್ದೆ !
ನಿರಾಶೆಯ ಮರುಭೂಮಿಯ ಕಾವಿನಲಿ ಬೆಂದಿದ್ದೆ!
ತಾಳಲಯ ಗತಿ–ಗತ್ತುಗಳೊಂದೂ ಗೊತ್ತಿಲ್ಲದವರ
ಹಿರಿ ಹಿರಿಯ-ಸಿರಿಸಿರಿಯ ಕುಣಿತದಡಿಯಲಿ
ಸಿಕ್ಕಿ ಪೆಚ್ಚಾಗಿ
ಭಾಗವತರ ಭರಾಟೆಯ ಪ್ರೋತ್ಸಾಹದ ಚಂಡೆ
ಅಮಲು ಬರಿಸಿತ್ತು ಅವರ
ಗೊತ್ತಿದ್ದರೂ ನನಗುತ್ತಮದ ಕುಣಿತ ಕುಣಿಯಲಾರೆ ;
ಏಕೆನೆ :

ದ್ರೋಣಾರ್ಯನ ಬಳಿ ಕರ್ಣ ಶಿಷ್ಯ.

ಎಂ. ಆರ್. ನರಸಿಂಹನ್

# ಮಿಲ್ಟನ್ ಮಹಾಕವಿಯ ಸ್ಯಾಂಸನ್ ಅಗೋನಿಸ್ಟ್ರಸ್

(ಕನ್ನಡಾನುವಾದ)

ಸ್ಯಾಂಸನ್

ಕ್ಷಮೆಯ ಯಾಚಿಸೆನವನ, ಆವ ಸಿದ್ಧಿಗೆ ಜೀವ
ರಕ್ಷಣೆಯ ಬೇಡಲಾನ್ ? ಬಲವಿರಲ್ಕೆನ್ನಲ್ಲಿ
ಮರ್ತ್ಯರನು ಕಡೆಗಣಿಸಿ, ಸಿರಿದಾಶಯಂಗಳಿಂ.
ಯೌವ್ವನದ ಮದಗಳಿಂ, ದಿವ ನುಡಿದ ಮಜ್ಜನ್ಮ
ವಿವರಣೆಯ ಭವ್ಯದಿಂ, ಸಾಸದೌನ್ನತ್ಯದಿಂ,
ದೈವಾಂಶಪೂರ್ಣದಿಂ, ಮಹದೆನಿಪ ಸಾಸದಾ
ತುಂಬುಪ್ರಮಾಣದಿಂ, ಆನಾಕ[1]ಸುತರ್ಗಳ್ಗೆ
ಶತದನಿತು ಪೇರ್ಸ್ಪಿತ್ತು, ಪೆರ್ಚುತುಂ ಖ್ಯಾತಿಯಲಿ
ಭೀತಿಯಂ ಕಳೆಯುತಲಿ, ಕಿರಿದೇವನೆಂಬವೊಲು          ೫೦೦
ಕಾಲಾಡಿದೆನ್ ಎಲ್ಲು. ಬಳಸೆನುರೆಸೊಲ್ಲುಗಳ್
ಅರಿನೆಲದಿ ನಡೆವಿವನ ಮುಂದೊರ್ವ ಸುಳಿಯನಲ !
ಗರ್ವದಲಿ ಬೀಗುತ್ತ ಜಾರಿದೆನ್ ಜಾಲದೊಳ್ !
ಕುಡಿಗಣ್ಣಮಾಯದಲಿ ವನಿತಾವಿಲಾಸದಲಿ,
ವಿಷಯೋಪಭೋಗದಲಿ, ಮಂಕಾಗಿ ವಾಲುತಲಿ
ತಲೆಯ ಚೆಲ್ಲಿದೆನಯ್ಯೊ[2]–ದಿವವೆನಗೆ ಅಡವಿಟ್ಟ

---

[1] ಪ್ಯಾಲಿಸ್ಟೈನಿನ ಒರ್ವ ರಾಕ್ಷಸ ಆನಾಕ (Anak), ಅವನ ವಂಶಜರು ಆನಾಕಿಮ್ (Anakim).

[2] ದೇವರು ತನ್ನಲ್ಲಿ ಭದ್ರವಾಗಿಡಲು ಕೊಟ್ಟ ಶಕ್ತಿಯ ಗೋಪ್ಯವನ್ನು ತನ್ನ ಹೆಂಡತಿಗೆ ಹೇಳಿದನು ಸ್ಯಾಂಸನ್.

ಶಕ್ತಿಸಂಚಯುವನ್ನು–ವೇಶ್ಯೆಯೀ ವಂಚಕಿಯ
ಮಧುಸದನದಂಕದಲಿ,[1] ಮುಗ್ಧ ಕುರಿಯಂತಿರಲು
ತರಿದಳಹ ವೆಗ್ಗಳದ ತುಪ್ಪುಳನು ಸಕಲವನು
ಹಾಸ್ಯಕ್ಕೆ ಪಕ್ಕಾದೆ; ಶಕ್ತಿಗಾಯಿತು ಮುಕ್ಕು! ೫೧೦
ನಿರಾಯುಧದಿ ಮುಂಡನದಿ ಆರಿಗೆ ನಾ ಸಿಲುಕಿರ್ದೆ

ಮೇಳ

[2]ಮತ್ತೀವ ಪೇಯದಿಂ, ಮತ್ತಿತರ ಕುಡಿತದಿಂ
ವಿಖ್ಯಾತಶೂರರಿರೆ ಕೀಳ್ದೆಸೆಯನಡರುತ್ತೆ,
ತಡೆದಿರ್ಪೆ ನೀನವನು, ವಜ್ರದ್ಯುತಿಯನು ಪೋಲ್ವ
ಸುರಿಯೆ ಮಿಂಚಂತೆಸೆವ, ನರುಗಂಪಿನುರುರುಚಿಯ
ದೇವಮಾನವ ಮನವ ಹಾತೊರೆಸಿ ಉರ್ಬಿಸುವ
ಮಧು ಸೆಳೆಯದಾದುದಲಾ ತಣ್ಪು ತಿಳಿವಾರಿಯಿಂ!

ಸ್ಯಾಂಸನ್

ಚಿಲುಮೆಗಳ ಮೇಣಿನ್ನು ಪೂರ್ವರವಿರಶ್ಮಿಗ
ಳ್ಗಿದುರಾಗಿ ಪರಿದುಬಹ, ನಿರ್ಮಲದ, ತಿಳಿಗೊಂಡ
ದಿವವೆಸೆವ ಬೆಂಗದಿರ ಪುಣ್ಯಸ್ಪರ್ಶನವುಂಡ, ೫೨೦
ತೊರೆನೀರ ಕುಡಿದಪೆಂ. ಪಾಲ್ತೆರದ ವಾರಿಯಿಂ
ತಣಿದಪೆಂ. ಕಳೆದಪೆಂ ದಣಿವನ್ನು. ಆದರುಂ
ತೆಗಳೆನಾ ಬಗ್ಗಡದ ಮದ್ಯಪ್ರಮತ್ತರಂ.

ಮೇಳ

ತೀಕ್ಷ್ಣತರ ಪೇಯುಗಳ, ಸೂಕ್ಷ್ಮವಹ ಮದ್ಯಗಳ–
ನಾರೋಗ್ಯವರ್ಧಕಗಳೆಂಬರಲ ಪಂದೆಗಳ್.
ತೊರೆಯುತೀ ವ್ಯಸನಗಳ ತೊರೆನೀರನೊಂದನೇ

---

[1] ವಿಷಯಸುಖದ ಅಮಲಿನಲ್ಲಿ ಮುಗ್ಧನಾಗಿ, ಕುರಿಮರಿಯು ಮಡಿಯಲ್ಲಿ ಮಲಗುವಂತೆ ಹೆಂಡತಿಯ ಮಡಿಲಲ್ಲಿ ಮಲಗಿರುವಾಗ, ಆ ವಂಚಕಿಯು ಅವನ ತುಪ್ಪಳಿನಂತಹ ತಲೆಗೂದಲನ್ನು ತರಿದುಹಾಕಿದಳು.

[2] ಈ ವಿಷಯ ಅನವಶ್ಯಕವಾಗಿ ಪ್ರಸ್ತಾಪವಾಗಿರುವಂತೆ ತೋರಿಬಂದಿದೆ. ಆದರೆ ಮದ್ಯದಿಂದ ದೂರವಿದ್ದಾನೆಂದು ಸ್ಯಾಂಸನ್ನನ ಚಿತ್ರಣವನ್ನು ಕವಿ ತಿಳಿಸಿದ್ದಾನೆ. ಇದರಿಂದ ಕವಿಗೆ ಮದ್ಯದ ಬಗ್ಗೆ ಎಷ್ಟು ತಾತ್ಸಾರವಿತ್ತೆಂಬುದು ತಿಳಿಯುತ್ತದೆ.

ಕುಡಿದು ದೃಢವಾಗಿಹನ ಶೌರ್ಯದೊಳು ಅಸಮನನು
ಪೊರೆದಿಲ್ಲವೇ ದೇವ ತನ್ನೆರಕೆಯಿಂದ ?

ಸ್ಯಾಂಸನ್

ಈ ಗುಣದಿ ಫಲವೇನು ? ಮತ್ತೊಂದು ಬಲತರದ
ಸೆಳೆತದಿಂ ದೂರವಿಹ ಗುಣವಿರಲಪೂರ್ಣಂ.
ಬಂದು ಬಾಗಿಲಕಾಯ್ದು ಪೆರತೊಂದನರಿಗಳ್ಗೆ
ತೆರೆದಿತ್ತ ಪಾಂಗಾಯ್ತು ಪೆಣ್ಣಾಶೆಯುಪಜಯಂ !
ಎಂತೊದಗಿತೀಯಾಂಧ್ಯವಿಾಭಗ್ನವಿಾನಾಣು ?
ಉಪಯೋಗಿಯಹನೆ ಆಳ್ ? ನಾಡ ಸೇವಿಪುದೆಂತು ?
ದಿವವಿತ್ತ ಘನದೆಸಕವೆಂತು ಗೆಯ್ದಪುದಿನ್ನು ?
ಮನೆಯೊಲೆಯ ಮುಂಕುಳಿತು ಮಂಕನೋಲ್ ಬಾಳ್ದಪುದೆ ?
ಭುವಿಭಾರವಾಗುವುದೆ ? ಜನಗೊಂದು ನೋಟವೇನ್ ?
ಮರುಕವಂ ಕೊಳ್ವುದೇನ್ ?[1] ನೀಳದಿಂದಿಳಿದುಬಹ
ಕೇಶವೇತಕೆ ಎನಗೆ ? ಬೆಳೆದುಬರುತಿಹುದಿನ್ನು
ಗತವೈಭವದ ಚಿಹ್ನೆ ! ವತ್ಸರಗಳುರುಳುತಿರೆ
ಕೈಕಾಲು ಗಳಿತಗೊಂಡೆನ್ನನೊಯ್ವಪುದಾಹ
ಅಜ್ಞಾತ ಮೇಣಲಕ್ಷಿತದ ವಾರ್ಧಕ್ಯಕೆ !
ಇಲ್ಲಿರ್ದೆ ದುಡಿವೆನೈ ; ದುಡಿಯುತ್ತ ಪಡೆವೆನೈ
ಎನ್ನ ಆಹಾರಮನ್ ; ಹಂಗಿನನ್ನದ ಕೊಳಕೊ
ಅದರಲಿರ್ಪೊರ್ ಕ್ರಿಮಿಯೊ ಎನ್ನಕೊಳುವನ್ನೆಗಂ !
ಕಾತರಿಸಿ ಪಾಡುವೆಂ ಸ್ವಾಗತವ ಮರಣಕ್ಕೆ—
ಅಳಲಿವನು ಕಳೆದುಯ್ವ ಸಾವೆಂದು ಬಹುದೆಂದು.

ಮನೋವಂ

ಫಿಲಿಸ್ಟನರ ಸೇವಿಪೆಯ ನಿನ್ನ ಬಹುಮತಿಯಿಂದ ;
ದೈವವಿತ್ತಿರಲಿದನು, ಅವರ ಕಾಡಲ್ಕೆಂದು
ಮನೆ ಶಯ್ಯೆಯಲಿವುಲಗು, ಸೋಮಾರಿಯಂತೆವೋಲ್ :
ಮಹಿಮೆಗಳ ಕಳೆದೊಗೆದು, ಕೆಲಸಕಾರ್ಯವ ತೊರೆದು
ವೃದ್ಧಾಪ್ಯವನು ಕಳೆ ; ಎಂತಿರ್ದರದೆ ಮೇಲು.

---

[1] ಸ್ಯಾಂಸನ್ನನಿಗೆ ಮತ್ತೆ ಕೂದಲು ಬೆಳೆಯುತ್ತಿರುವುದನ್ನು ಕವಿ ಸೂಚಿಸುತ್ತಾನೆ. ಅಂದರೆ ಶಕ್ತಿಯು ಮತ್ತೆ ಮೈದುಂಬುವುದೆಂಬ ಸಂಕೇತ.

ಆದರುಂ ದೇವನಿಹ ; ನಿನ್ನ ಮೊರೆಯಾಲಿಸುತ
[1]ಕಳೆಯೆ ಸಮರಶ್ರಮುವ, ಚಿಲುಮೆಯಂ ಚಿಮ್ಮಿಸಿದ
ಬೆಂದ ನೆಲದಲಿ ಅಂದು ! ಅಂತೆಯೇ ಅವನಿಂದು
ಬೆಳಕ ಹೊಮ್ಮಿಸದಿಹನೆ, ನಿನ್ನ ಕಣ್ಣಲಿ ಮತ್ತೆ
ನೀಂ ಪಿಂದೆ ಗೈದಿರ್ಪ ಸೇವೆಗಿಂ ಮಿಗಿಲೆಸಗೆ.
ನನ್ನ ದೃಢನಂಬುಗೆಯು ; ಇಲ್ಲದಿರಲೀ ಬಗೆಯ
ಅತಿ ಶಕ್ತಿಯೇಕಿಹುದು ನಿನ್ನ ತಲೆಗೂದಲಲಿ ?
ಅವನೆರಕೆಯುಳಿದಿಹುದು ಬರಿದೆ ಸುಮ್ಮನೆಯಲ್ಲ ! ೫೬೦
ಅವನ ಮಹದುಡುಗೊರೆಯು ಬರಡೆಂದು ತಾನಲ್ಲ !

ಸ್ಯಾಂಸನ್

[2]ಎಲ್ಲಕಿಂ ಪ್ರತಿಯಾಗಿ ಕೊರುತಿದೆ ಎನ್ನ ಮನ ;
ಪಾಪೆಗಳ್ ಇವಕಿನ್ನು ಕಾಂತಿ ತಾಂ ಬಾರದಯ್ ;
ಮೇಣ್ ಜೀವಜ್ಯೋತಿಯುಂ ಬಹುಕಾಲ ಬೆಳಗದಯ್ ;
ಸನಿಹದಲೆ ಸಿಲುಕುವುದು ತಮವೆರಡಕೀ ಜೀವ ;
ಅರಿದಪೆನು ಸರ್ವಮಿಾ ಚೇತನಂ ಸೊರಗಿಹುದ ;
ಅಳಿದಿಹವು ಆಶೆಗಳು, ಎನ್ನೊಳಪ್ರಕೃತಿಯದು
ಸರ್ವಕಾರ್ಯಂಗಳಲು ಆಲಸ್ಯ ತಳೆದಿಹುದು.
ಮರೆಯೆ ಕುಲವೈಭವಂ, ಮೆರೆದುದು ಪರಾಭವಂ.
ಸರಿದಪೆನ್ ಶೀಘ್ರದಲಿ ಚಿರಶಾಂತಿಗೇರ್ದರಲಿ. ೫೭೦

ಮನೋವಂ

ಉಬ್ಬೆಗದ ಅಬ್ಬರದಿ ಅಳಿಯೆ ಹಾಸ್ಯಪ್ರವೃತ್ತಿ ;
ಮನದೇರಿನಿಂ ಬರ್ಪ ಭಾವವಿವುಗಳ ಮಾಣು,
ತೊರೆಯೆನೆಂತಾದರುಂ, ಪಿತನ ಕರ್ತವ್ಯಮುಂ
ಬಂಧವಿದ ಬಿಡಿಸಲ್ಕೆ ಯುಕ್ತವೊ ಅಯುಕ್ತವೊ

---

[1] ಲೇಹಿ ಪ್ರದೇಶದಲ್ಲಿ ಯುದ್ಧವಾಡಿ ಸೋತು ಕುಡಿಯಲು ನೀರನ್ನು ಬೇಡಲು ದೇವರು ಅಲ್ಲಿನ ತಗ್ಗುಪ್ರದೇಶವೊಂದರಲ್ಲಿ ನೀರು ಉಕ್ಕಿಬರುವಂತೆ ಮಾಡಿದನು. ಸ್ಯಾಂಸನ್ನನು ನೀರನ್ನು ಕುಡಿದಾಗ ಅವನಿಗೆ ಹೊಸ ಚೈತನ್ಯವು ಬಂದು ಯುದ್ಧಕ್ಕೆ ಸಿದ್ಧನಾಗುವಂತೆ ಮಾಡಿತು. ಈ ಎನ್‌ಹಾಕೋರ್ ಪ್ರದೇಶದಲ್ಲಿ ಇಂದಿಗೂ ಚಿಲುಮೆ ಹರಿಯುತ್ತಿದೆ.

[2] ಸ್ಯಾಂಸನ್ನನು ಮುಂಬರುವ ಘಟನೆಗಳನ್ನು ತನಗರಿಯದಂತೆಯೇ ತಿಳಿಸುತ್ತಿದ್ದಾನೆ, ಸೂಕ್ಷ್ಮವಾಗಿ.

ಒದಗಿಬಹ ಮಾರ್ಗವನು, ತಳೆದುಕೊಳ್ ಶಾಂತಿಯನು ;
ತೆಗೆದುಕೊಳ್ ಇನಿವಾತ ಗೆಳೆಯರ್ಕಳಿಂದೆ.

ಸ್ಯಾಂಸನ್

ಈ ದುಃಖನಿವಹಗಳು ಎನ್ನ ದೇಹದಲಿರ್ಪ
ಗಾಯದಲು, ನೋವಿನಲು, ನಾಳದಲು, ಹೃದಯದಲು
ಶಿರದಲ್ಲು ಎದೆಯಲ್ಲು, ಅಡಗಿ ಕೊರದೆ ಮತ್ತೆ
ಗೂಢಮಾರ್ಗವನರಸಿ, ಅಂತರಂಗವ ಮುತ್ತಿ, ೩೮೦
ಸರ್ವವಿಧದಪಘಾತಸಂಕುಲದಲದನೊತ್ತಿ,
ಶುದ್ಧ ಚೇತನಗಳನು ಕೈಸೆರೆಯ ಕೊಂಡು ತಾ—
ಕರುಳು ಖಂಡಂಗಳನು, ಕೈಗಳನು, ಕಾಲ್ಗಳನು
ಇರಿವಂತೆ–ಅಳಲಿಸುತ ಪಿರಿದಾಗಿ ಕಾಡುವುದು—
ದೇಹದೊಡನಿವಕೆ ತೃಣಸಂಬಂಧವಿರದೊಡಂ.
ಪಲದಿನದಿ ನರಳಿಸುವ ರೋಗವೆಂದೆನುವಂತೆ
ಬನ್ನಗಳು ಘಾಸಿಯಿಂ ಶಾಂತಗೊಳ್ಳದೆ ಮತ್ತೆ
ಗುಣವ ಕಾಣಿಸದಯ್ಯೋ, ಕೆರಳಿಪುದು, ಕಾಡಿಪುದು,
ವಾಸಿಯಾಗದೆ ಉಳಿದು ಕೊಳೆತು ಕೀವನ್ನಿಡಿದು
ಅಂಗವನು ಕೊಲ್ಲುವ ವ್ರಣಕಿಂತ ಕಿರಿದಿದೇಂ ? ೩೯೦
[1]ಯೋಚನಾನಿವಹಗಳು, ಪೀಡೆಯಿವು ಗರಳ ಮುಳ್
ಕೆಯ್ದುವಿಂ ಮೇಳವಿಸಿ ಕೋಮಲಾಂಗಗಳಿವನು
ತುರಿದು ಘಾತಿಸುತಿಹುದು ; ಉರಿಸಿ ವ್ರಣಗೆಯ್ಯುವುದು ;
ನೋವನ್ನು ಪೆರ್ಚಿಪುದು ; ತಂಪೀವ ಮದ್ದುಗಳು
ವೈರೇಯುದೌಷಧವು ಸಂತೃಪ್ತಿಗೊಳಿಸದಯ್ ;
ಐಕಿಲಾಚ್ಛಾದಿತದ[2] ಆಲ್ಪ್ಸಮಂದಾನಿಲಂ
ನೆರವಾಗಲಾರದಯ್ ! ನಿದ್ದೆ ತೊರೆದೋಡಿತಯ್ ;
ಮರಣಮತ್ತನೀವ ಅಫೀಮ ಮದ್ದೆಂದು
ನೈರಾಶ್ಯ ಬಳಸಿರಲು, ಸಗ್ಗತೊರೆದಿಹ ಭಾವ
ಭೀಕರದ ಮೂರ್ಛೆಯಲಿ ಬೀಳಿಸಿಹುದೆನ್ನ ! ೬೦೦

---

[1] ಯೋಚನಾನಿವಹಗಳು ಅಂಗಾಂಗಗಳಿಗೆ ಮಾತ್ರ ಘಾತವನ್ನುಂಟುಮಾಡದೆ ಅಂತರಂಗಕ್ಕೂ ಮುತ್ತಿಗೆಹಾಕಿ ಕಾಡುತ್ತವೆ.

[2] ಆಲ್ಪ್ಸ್ ಪರ್ವತದ ಆರೋಗ್ಯಮಯವಾದ ಮಂಪಾನಿಲ.

ದೇವನರುಮೆಯು ಕುವರನಾಗಿರ್ದೆ ನಾನೊರ್ವೆ !
ಆರಿಸಿರ್ದನ್ ಒಲಿದು ಗಬ್ಬದಿಂ ಕೃಪೆಯೊಗೆದು
ದಿವವಿದನ್ ಎರಡು ಸೂಳ್ ಮಾತನಿಂದರಿಪಿದುದು—
ಅವನ್ ಅತಿಕೃಪೆಯಾಂತು ಬೆಳೆದ ನಿಯಮಂಗಳಲಿ,
ತಳೆದೆನತಿ ಶೌರ‍್ಯಮುಂ, ಮರ‍್ತ್ಯಬಲವಂ ಮಾರಿ—
ಪೌನ್ನತ್ಯದೆಸಕಗಳ ಎಸಗೆ ಮುನ್ನಡೆಸಿದನು.
ತೊರೆದಿಹನ್ ಈಗೆನ್ನನಪರಿಚಿತನೆಂಬವೋಲ್—
ಅವನ ನಿಯಮುನದಿಂದ ಕನಲಿ ಮೇಲೆಬ್ಬಿಸಿದ
ಕ್ರೂರ ಶತ್ರುಗಳಲ್ಲಿ-ನಿಸ್ಸಹಾಯಕನಂತೆ,
ಸರಿಯಾಗದೀ ದೃಷ್ಟಿಹರಣ ತಾಂ ಕೂಡಿರಲು, ೬೧೦
ಜೀವದಿಂದುಳಿಸಿಹನ್, ಕ್ರೂರತೆಗೆ, ಹಾಸ್ಯಕ್ಕೆ
ಮತ್ತೆ ಸಾಧನವಾಗೆ ! ಶುಭವನಿಚ್ಛಿಸುವವರ
ಪಂಕ್ತಿಯೊಳು ನಿಂತಿಹೆನೆ ? ನಿಂದ್ಯಮಿವು ಬನ್ನಗಳು,
ಪರಿಹಾರವಿಲ್ಲದಿವು ! ಒಂದೆ ಕೋರಿಕೆಯಿಹುದು,
ಆಲಿಪನೆ ? ಪಿರಿದಲ್ಲ. ಎನ್ನ ದುಃಖಗಳಂತ್ಯ,
ಎಲ್ಲದಕು ಮಿಗಿಲೆನಿಪ ಜವದ ಮಿತ್ತುವು ಬರ್ಕೆ.

ಮೇಳ

ಧೀಮಂತರಾಡಿರ್ಪ ಪಲವಾರು ನುಡಿಯಿಹವು
ಪ್ರಾಚೀನ, ನವೀನ ಕಾವ್ಯ ಸಂಕುಲದಲ್ಲಿ.
ಸ್ಥೈರ‍್ಯದಿಂದಿರ್ಪುದನ್ ಧೈರ‍್ಯ ದಿಟಮೆಂದಿಹವು !
ತತ್ವಗಳು ಒರೆದಿಹವು ತರ್ಕ ಪ್ರಮಾಣದಲಿ ೬೨೦
ಮಾನವನ ದುರ್ಬಲದ ಜೀವನಕ್ಕೆರಗಿಬಹ
[1]ದುಃಖಕಟಕಂಗಳಂ ಸಂಯಮದಿ ತಾಳ್ವುದಂ.
ಬನ್ನದಲಿ ಬೇಯ್ವವಗೆ ಪರಿಣಾಮವೀ ನುಡಿಯ-
ದತಿಯಲ್ಪ ; ಕಟುವಾಗಿ ತೋರುವುದು, ಇದರ ದನಿ
ಅವನ ದೂರ್ಗಳಿಗೆಲ್ಲ ಪೆರ್ಚಿಪುದು ರೋಷಮಂ
ದಿವವಿತ್ತ ಶಾಂತಿಯುದು ಅವನೊಳಗ ಸೆಳೆಯದೊಡೆ ;
ಗೂಢಚೇತನಗಳಂ, ಮತ್ತೆ ಬಲವನುಗಳಿಸಿ
ಸೊರಗಿರ್ಪ ಕರಣಗಳ ಮೇಲೆತ್ತುವನ್ನೆಗಂ !

---

[1] ಈ ತತ್ವ ಕಷ್ಟವನ್ನು ಅನುಭವಿಸುತ್ತಿರುವವನಿಗೆ ಇನ್ನೂ ಬೇಸರವನ್ನು ಉಂಟುಮಾಡುತ್ತದೆ. ಇದು ಸಹಜವೇ.

[1]ಪಿತೃಗಳ್ಗೆ ವಂದ್ಯನೆ ! ಮನುಜನೆಂದೊಡೆ ಏನು—
ನೀನವಗೆ ಪಲವಿಧದಿ ಕೈವಾಡ ತೋರುತಿರೆ ? ೬೭೦
ನಿರ್ಧರಿಪುದೇ ನಿಯಮ ವೈರುದ್ಧವಿಹುದೆಂದು ?
ಪರಿಮಿತಿಯ ದಯೆ ಸಾಕೆ ಕಿರಿದು ಪಯಣದಲವಗೆ ?
[2]ದೇವತೆಯ ಕುಲಗಳನು, ತಿರ್ಯಕ್ ಸಮೂಹವನು
ಆಳ್ವ ವಿಧಿಯೇಕಿಲ್ಲ; ಗೊತ್ತುಗುರಿ ಯಾವುದಿದೆ ?
ಒಂದೆ ತೆರದೀ ಕೃಪೆಯೆ ? ಬೇಸಗೆಯ ಕೀಟದೊಲು
[3]ಬೆಳೆದೆಲ್ಲೊ ಅಲೆಯುತ್ತ ಬೆಳೆದು ದಂಡಕೆ ಕಡೆಗೆ
ನಿರ್ಗಮಿಪ ನರಪಿಂಡಗಳ ಕುರಿತು ಪೇಳುವೆನೆ!
ಪೆಸರಿಲ್ಲದೀ ನರರ ಆರು ತಾಂ ನೆನೆದಪರು.
ಕರುಣೆ ಕೃಪೆಯೆರೆಯುತ್ತ, ನಿನಗೆ ಪೆರ್ಮೆಯ ತರ್ಪ
ಕೃತಿಯನವರೆಸಗಲ್ಕೆ, ಜನರನವರ್ಕಾಯಲ್ಕೆ ೬೮೦
ನೀನೆಯೊಲಿದಾರಿಸಿರೆ, ಕೃತಿಯನರೆ ಮುಗಿಸಿರ್ಪ
ರವರ ನೆನೆದಾಡಿದೆನು. ಅಂಕ ಪೆಸರಾಂತವರ
ಮನ್ನೆಯರ ಪಲವುಸಲ ಅಭ್ಯುದಯ ಮಧ್ಯದಲಿ
ಪಲತೆರದ ಬಲುಕೃಪೆಯ ನೀನವರ್ಗಿತ್ತಿರ್ದು
ಮೇಣವರ ಸೇವೆಯಂ ಕೊಂಡಿರ್ದೊಡದ ಮರೆತು
ನಿನ್ನೆರಕೆ, ನಿನ್ನ ಕರವನು ತಿರುವಿಹುದದೇಕೆ ?
ಕೆಳಗೆಸೆಯಲೊಳ್ಳಿತದು ; ಅಜ್ಞಾತ ಬಾಳ್ವೆಯಲಿ
ನಡೆಸುವುದು ನೆರೆ ತೀರ್ಪು, ಮೇಲಕೇರಿಸಿಯವರ
ಕೆಳಗುರುಳಿಸಿಹೆಯಲ್ಲ ; ಮನುಜದೃಷ್ಟಿಗೆ ಸಲ್ಲ.
[4]ತಪ್ಪಿನಡೆದುದಕಿನ್ನು, ನಿಯಮದುಲ್ಲಂಘನೆಗೆ, ೬೯೦
ಕಟುತರದ ಶಿಕ್ಷೆಯಿದು. ಅಪವಿತ್ರಮೂಢರಹ

---

[1] ಸ್ಯಾಂಸನ್ನನ ಕುಲದೈವ ಸಿಲ್ಹೋ ಪರ್ವತಾಗ್ರದಲ್ಲಿ ನೆಲಸಿರುವ ಸರ್ವಶಕ್ತ.

[2] ಪಶುಪಕ್ಷಿಗಳನ್ನೂ ದೇವತೆಗಳನ್ನೂ ಸಲಹುವ ನ್ಯಾಯವನ್ನು ಮನುಷ್ಯನ ಪಾಲನೆಯಲ್ಲಿ ಏಕೆ ದೇವರು ತೋರುವುದಿಲ್ಲ ? ಮನುಷ್ಯನಿಗೆ ಏತಕ್ಕೆ ತನ್ನ ದಯೆಯನ್ನು ಪರಿಮಿತಿಗೊಳಿಸಿಕೊಂಡಿದ್ದಾನೆ ದೇವರು ?

[3] ಗೊತ್ತುಗುರಿ ಇಲ್ಲದ ಮಾನವನನ್ನು ಬೇಸಗೆಯ ಕೀಟದಂತೆ ವ್ಯರ್ಥವೆಂದಿದ್ದಾನೆ ಮಿಲ್ಟನ್. ಸ್ಯಾಂಸನ್ ಎಲ್ಲರಂತಲ್ಲ ; ದೇವನೇ ಅವನ ಬಗ್ಗೆ ವಿಶೇಷ ಕೃಪೆಮಾಡಿದ್ದಾನೆ, ಬೆಳೆಸಿದ್ದಾನೆ. ಈಗ ಅವನನ್ನು ಸಂಪೂರ್ಣವಾಗಿ ಮರೆತೇಬಿಟ್ಟನೆನ್ನುವಂತೆ ತೋರಿದಿದ್ದಾನೆ.

[4] ಅವನಿಗೆ ವಿಧೇಯನಾಗಿದ್ದವನನ್ನು ಅಲ್ಪ ಅಪರಾಧಕ್ಕಾಗಿ ಇಷ್ಟೊಂದು ಶಿಕ್ಷಿಸುವುದೇ—ಎಂದು ಪ್ರಶ್ನಿಸುತ್ತಾನೆ.

ಅರಿಯ ಖಡ್ಗಕ್ಕಿಡುವೆ ; ನಾಯಿನರಿಗಾಹಾರ
ವಾಗಿಸುವೆ ಅವರ್ದೇಹವಿಲ್ಲದೊಡೆ ನೆರೆನೇಹ ?
ಇಲ್ಲದಿರಲನ್ಯಾಯ ತೀರ್ಪಿಗರ ವಶಕಿಡುವೆ.
ಕಾಲವುರುಳುತ್ತಿರಲು ಕಡೆಗೆ ಸಲಿಸುವುದವಗೆ
ಕೃತಘ್ನ ಕೋಟಿಗಳ ಒಕ್ಕೊರಲ ಧಿಕ್ಕಾರ.
ಇವನು ತಪ್ಪಿದೊಡವರನೊಪ್ಪಿಸುವೆ ಬಡತನಕೆ
ಕೂಡಿಸುತ ರೋಗವನು, ನೋವುನರಳಿಕೆಯನ್ನು.
ಇಂತವರ ಬೀಳಿಸುತ ರೋಗದಲಿ ಬಾಗಿಸುವೆ.
ಆಕೃತಿಯ ಬದಲಿಸುವೆ ವೃದ್ಧಾಪ್ಯಕಿಂ ಮೊದಲೆ-
ಕುಂದಿಲ್ಲದಿರ್ದೊಡಂ. ಬರಿಬರಿದೆ ಘಾತವಿದು
ಚರಿತಹೀನಂಗೀವ ಶಿಕ್ಷೆಯಲ. ಅಂತ್ಯದಲಿ-
ನ್ಯಾಯ ಮೇಣ್ ಅನ್ಯಾಯ ಎರಡುವೊಂದೇ ರೀತಿ
ಭೀಷಣಂ ಒಂದೆ ತೆರ ನೀಡೆ ರುದ್ರಾಂತ್ಯಮಂ.
ಅದರಿಂದ ಕಾಡದಿರು ಒಮ್ಮೆ ನಿನಗತ್ಯಾಪ್ತ
ವೀರನಾಗಿರ್ದಿವನ, ತವಬಲಪ್ರತಿಬಿಂಬ
ಮಪ್ರತಿಮಸಚಿವನನ್. ಮತ್ತೇನ ಬೇಡುವೆನ್.
ಎನಿತು ಕಾಡಿಹೆಯಿವನ ; ತೊಳಲುವುದ ನೋಡವನ ;
ಕೊರೆಗೆಯ್ಯಿ ಬನ್ನವನು ; ನಿನಗಸಾಧ್ಯವೆ ದೇವ !
ಕೃಪೆಗೆಯ್ದು ನೀಡು ನೀನವಗೆ ಸೌಖ್ಯಾಂತ್ಯವಂ. ೬೭೦
ಆದರಾರೈದುವರ್ ಭೂಚರವೊ ಜಲಚರವೊ ?
ಪೆಣ್ಣಿನಾಕೃತಿಯಂತೆ ತೋರ್ದಪುದು ಶೀವಿಯಲಿ !
ಸಜ್ಜಾಗಿ ಸಿಂಗರದಿ ಸಂತಸದಿ ತೇಲುತ್ತ
ಬರುತಲಿಪೆ—ಹುರಿಯಾಳುಗಳ ಕೊಂಡು ಒಲೆಯುತ್ತ
ನಾವಿಕರ ದಳಗಳಿಂ, ಒಲಿಯೆ ಮಂದಾನಿಲನ
ಮಧುರಮಿಲನವನಾಂತು, ನಲಿವ ಬಾವುಟಗಳಿಂ,
[1]ಗಾಡ್ಯೈರಿನಂಚಿಗೊ,[2] ಜೇವನ್ನದಂಡೆಗೋ
ತೊನೆವ[3] ಟಾರ್ಟಸ್ ನಾವೆಯ್ಯೆದಿ ಬರುವಂತೆವೋಲ್.
ಆವುದೋ ಪರಿಮಳದ ಕಂಪು ಧಾವಿಪುದಿತ್ತ

---

1 ಗಾಡ್ಯೈರ್ ಪ್ರದೇಶಕ್ಕೊ.
2 ಗ್ರೀಸ್ ದ್ವೀಪ.
3 ಗ್ರೀಕ್ ಪುರಾಣದಲ್ಲಿ ಬರುವ ಟಾರ್ಟಿಷ್ ಹಡಗು.

ಅವಳ ಹರಿಕಾರನೆನೆ; ಹೆಣ್ಣುಗಳ ಪರಿವಾರ? ೧೮೦
[1]ಫಿಲಿಸ್ಟನ್ ಭಾಗ್ಯವತಿಯೆಂಬಂತೆ ತೋರ್ಪಳಹ.
ಸನಿಹಕ್ಕೆ ಸರಿದಪಳ್, ಇಲ್ಲಿಗೆ ಬರ್ಪವಳ್-
ಬೇರಾರುಮಲ್ಲವೈ-ನಿನ್ನಸತಿ ಡಲೈಲಳ್!

ಸ್ಯಾಂಸನ್

ನನ್ನ ಸತಿ ಕುಟಿಲಮತಿ ಸನಿಹಕ್ಕೆ ಬರದಿರಲಿ.

ಮೇಳ

ಆದರುಂ ಬಹಳಿಲ್ಲಿ. ಇದಿಗೊ ನಿಂತಿಹಳಲ್ಲಿ.
ನಿನ್ನನ್ನೆ ನೋಡುತ್ತ ನುಡಿಯೆ ಯತ್ನಿಸುತಿಹಳು.
ತಲೆಯ ಕುನಿಸಿದಳೇಕೊ? ಚೆಲುವಲರ ಮೇಲಿನಿಂ
ಮಂಜುವನಿಯುದುರ್ವಂತೆ ಮಿಡಿಯುತಿಹಳಶ್ರುವಂ.
ನುಡಿಯಲೆಳಸಿದ ಮಾತು ಕರಗಿ ಕಣ್ಣೀರಲ್ಲಿ
ಉಟ್ಟ ರೇಷ್ಮೆಯ ಸೆರಗ ತೊಯ್ಯಿಸುತ್ತಿಹುದೀಗ ೧೯೦
ಆದೊಡಂ ಅವಳೀಗ ಯತ್ನಿಪಳ್ ನುಡಿಯಲ್ಕೆ

ಡಲೈಲ

ನಡುಗುವಡಿಗಳ ಕೊಂಡು ನಡುಗೆ ಭಾವಗಳಿನ್ನು,
ಕುಡೆ ನಿನಗಸಂತುಷ್ಟಿ ಬಂದಿಹೆನ್ ಸ್ಯಾಂಸನ್
ಅಕ್ಷಮ್ಯದಪರಾಧ ಒಪ್ಪಿಕೊಳುವೆನು ಇವನು.
[2]ಎನಗೆ ಕ್ಷಮೆಯಿರದೊಡಂ, ಕರೆವ ಅಶ್ರುಗಳೆನ್ನ
ಕ್ಲೇಶವನ್ನರಿಪಿದೊಡೆ, ತಾಪಮೆನಗಳಿದಿಲ್ಲವೈ.
(ನೆನೆದುದಕೆ ಮಿಗಿಲಾಯ್ತು ಗತಿಯಿದತಿಭೀಕರಂ.)
ದಾಂಪತ್ಯದೊಲುಮೆ ತಾಂ, ಭಯವನೊತ್ತಿಸಿಯತ್ತ,
ಸಂದೆಗವ ಕಳೆಯುತ್ತ ಎನ್ನ ಬರಿಸಿಹುದಿಲ್ಲಿ!
ನಿನ್ನ ವದನವನೊಮ್ಮೆ, ನಿನ್ನ ಪರಿಯನ್ನೊಮ್ಮೆ ೨೦೦

---

[1] ಚೇಟಿಯರ ಪರಿವಾರದೊಡನೆ ಬರುವ ಡಲೈಲಳನ್ನು ಸಜ್ಜಾಗಿ ಸಿಂಗರಗೊಂಡ ಹುರಿಯಾಳುಗಳನ್ನು ಕೊಂಡ ನಾವೆ ಸಾಗರದ ಮೇಲೆ ತೇಲಿಬರುತ್ತಿರುವಂತೆ ಕಲ್ಪಿಸಿಕೊಳ್ಳುತ್ತಾನೆ ಕವಿ.

[2] ತನಗೆ ಇನ್ನೂ ಪರಿತಾಪ ಅಳಿದಿಲ್ಲವೆಂಬುದನ್ನು ತನ್ನ ಅಶ್ರುಗಳೇ ತಿಳಿಸುತ್ತಿವೆ ಎನ್ನುತ್ತಾಳೆ.

ನೋಡೆ ನಾ ತವಕಿಸಿಹೆ. ನಿನ್ನಳಲ ಕೊರೆಗೆಯ್ಯೆ
ಎನ್ನಿಂದ ಸಾಧ್ಯಮಿಹ ಸೇವೆಗಾಂ ಸಿದ್ಧಳಿಹೆ.
ನಿನ್ನ ಮನಶ್ಶಾಂತಿಯನು ಎನಗೆ ನಿಲುಕುವ ಬಲದಿ
ಮರಳಿಸಲು ಯತ್ನಿಪೆನು; ಸಮಯ ತಳುವಿರ್ದೊಡಂ,
ನನ್ನದಿದ ಮಿಗಿಲಾಗಿ ದುರದೃಷ್ಟ ಸಂಚಿತವ
ಇನಿತಾದರೂ ಸರಿಯೆ ಪರಿಹರಿಸಲೆತ್ನಿಪೆನು.

ಸ್ಯಾಂಸನ್

ದೂರ ಸರಿಯಿಲ್ಲಿಂದ! ಸಹಜಾಭಿನಯಗಳಿವು;
ನಿನ್ನ ತೆರ ಪೆಣ್ಗಳಿಗೆ ಕಪಟವಿದು ಅತಿಸಹಜ.
ನಂಬಿಕೆಯ ಮುರಿದಪುದು; ಭರವಸೆಯನೊರೆಸುವುದು;
ವಂಚಿಪುದು; ತೊರೆದಪುದು; ತರುವಾಯ ಪರಿತಾಪ; ೭೧೦
ತಪ್ಪೆಂದು, ಶರಣೆಂದು ಒಪ್ಪಂದಕೆತ್ನಿವುದು;—
ದೀನತೆಯ ಬಿಂಬಿಸುತ, ಬೇಡುವುದು; ತೋರುವುದು
ಗುಣದಿ ಪರಿವರ್ತನೆಯ! ಅಳಲಿಲ್ಲಮವಳಲ್ಲಿ,
ಛಲಮಿರ್ಪುದೆರೆಯನಂ ಕೀಳ್ದಿಸೆಗೆ ಸೆಳೆಯಲ್ಕೆ!
ಎನಿತಿಹುದು ಅವನಲ್ಲಿ ಶಾಂತಗುಣ ಪರಿಮಿತಿಯು;
ಮನವೊಲಿವ ದುರ್ಬಲವ, ಕೆಳಕುಯ್ವ ಸಾಧನವ
ಕಂಡುಕೊಳೆ ಬಂದಿಹಳ್; ಅರಿಯ ಬೆಂಬಲದಿಂದ
ಘಾತವನ್ನೆಸಗಲ್ಕೆ. ಮತ್ತೆ ಕಾಲ್ಗೆರಗುವಳು!
ಧೀಮಂತರುತ್ತಮರು ಕುಟಿಲಕ್ಕೆ ತೆತ್ತಿಹರು[1]—
ಪರಿತಾಪಿ ಶರಣನಂ ಬಿಡದೆ ಕರುಣಿಪ ಗುಣದಿ, ೭೨೦
ನರಳಿಹರ್, ನವೆದಿಹರ್, ಬನ್ನಗಳ ದಿನಗಳಿಂ
ವಕ್ಷಮಂ ಬಳಸಿರ್ಪ ವಿಷಸರ್ಪದಾಕ್ರಮಣ
ಅಳಿವನಾಗಳೆ ಕೊಡದೆ ಉರುಳಿಸುವ ತೆರದಲ್ಲಿ.
ಕೆಟ್ಟೆನಾನ್ ನಿನ್ನಿಂದೆ; ಕೊಟ್ಟೆ ಮೇಲ್ಪಂಕ್ತಿಯಂ
ಮುಂಬರ್ಪ ಯುಗ ಯುಗದ ಜಗದ ಜನಗಳ್ಗೆ.

ಡಲೈಲ

ನನ್ನ ತಪ್ಪಿಗೆ ಕ್ಷಮೆಯ ಯಾಚಿಸುವ ಮನವಿಲ್ಲ;

---

[1] ಉತ್ತಮರಾದವರೇ ಕ್ಷಮಾಪಾಲನದಿಂದ ಕಪಟಿಯನ್ನೂ ಕ್ಷಮಿಸಿ ಬಳಿಕ ಆತನಿಂದ ಕಷ್ಟಕ್ಕೀಡಾಗಿದ್ದಾರೆ.

ಕೊರೆಗೆಯ್ಯೆ ಯತ್ನಿಸೆನು, ಆಲಿಸೆನ್ನಂ ಸ್ಯಾಂಸನ್
([1]ಗೆಯ್ಮೆಯಿವ ವೈಮೆಯೊಡೆ ಸೇರಿಸದೆ ನ್ಯಾಯದೊಡೆ
ಸಮದಿ ತೂಗಲ್ಪಹುದು.) ಒರ್ವೇಳೆ ನಿನ್ನ ಕ್ಷಮೆ
ಕೊಳುವೆ ನಾ ಸಿದ್ಧದಲಿ ; ರೋಷಮಂ ತಗ್ಗಿಸೆನ್ ೭೩೦
  ಮೊದಲ ಕಾರಣವೊರೆವೆ–ಒಪ್ಪುವೆನು, ಇದುವೆಲ್ಲ
ದೌರ್ಬಲ್ಯವೆನ್ನದಲ ; ನಮ್ಮದೀ ವರ್ಗಕ್ಕೆ
ಸಹಜವಲ ಕಾತರತೆ, ತಿಳಿದುಕೊಳಲುತ್ಸುಕತೆ,
ಗುಟ್ಟನರಿಯುವ ಹಠಂ, ಬಹಿರಂಗಗೊಳಿಸಲಿದ
ಅನಿತಷ್ಟೆ ಮಶ್ಚಟಂ, ಸಹಜವಿಾ ಗುಣದ್ವಯಂ
ಸ್ತ್ರೀವರ್ಗವೆಲ್ಲಕ್ಕು, ನಿನ್ನ ಕ್ಷೇಮವನಿನ್ನು
ನಿನ್ನ ಶಕ್ತಿಯದೆಲ್ಲ ಅಡಕವೆಲ್ಲೆಂಬುದನು
ಒತ್ತಾಯಕಿತ್ತೆಯಲ (ಆವ ಪುಣ್ಯಕು ಅಲ್ಲ !)
ದೌರ್ಬಲ್ಯವಲ್ಲವೇನ್ ? ನಾನ್ ಗೆಯ್ವುದರ್ಕೆಲ್ಲ
ಮಾರ್ಗವಂ ತೋರ್ದೆ ನೀಂ, ಅರಿಗಿದನು ಕೂರ್ದೆನಾನ್ ೭೪೦
ತಡೆಹಿಡಿಯಬೇಕಿತ್ತು, ಸ್ತ್ರೀಯ ಅಬಲತೆಗಿದನು
ಕೊಡಬಾರದಾಗಿತ್ತು ; ನಿನಗೆ ನೀ ಮುಳಿವಾದೆ
ನನ್ನಬಾಳಿರಿವ ಮುನ್, ಅದರಿಂದ ದೌರ್ಬಲ್ಯ
ಕೊಳಲಿ ಕೆಳೆತನವನ್ನು ನಿನ್ನ ದೌರ್ಬಲ್ಯದೊಡೆ.
ಸಾಮ್ಯ ಸಂಬಂಧಮಿವು ; ಇಲ್ಲದಿರಲೊಂದೆ ತೆರ
ನೀ ತೋರ್ದ ಶೌರ್ಯಮಂ, ನನ್ನದೀ ಕಾರ್ಯದಲಿ
ಕಂಡ ಬಲಕೌನ್ನತ್ಯವೆಂದು ಮಂಡಿಸಲಾರೆ.
ಇದನರಿತು ತಪ್ಪಿದನು ಮನ್ನಿಸುತ ತಿಳಿವೆಯಲ,
ಜನರ್ ನಿನ್ನ ತಪ್ಪುಗಳ ಲಘುವಾಗಿ ಕಾಣ್ಬುದನ್.
ಮನುಜಹೃದಯದಲಿರ್ಪ ಸಹಜಮಾತ್ಸರ್ಯಮಿದು ; ೭೫೦
ನಿನ್ನಕುರಿತೆನ್ನಲ್ಲಿ ಈ ಭಾವಕಿಹುದೆ ಕೊರೆ.
ದ್ವೇಷಮೆಂದಪೆಯಲ ದಿಟದಿಂದಲದು ಪ್ರೇಮ
ಇವನೆಸಗೆ ಕಾರಣಂ ! ಮಾರ್ಪಡುವ ಭಾವಗಳ
ನಿನ್ನಲ್ಲಿ ಕಂಡೆನಾನ್, ಟಿಮ್ನದವಳಂತೆನ್ನ
ತೊರೆವೆಯೆಂದರಿಡೆ, ಸಾಧನವ ಕೈಕೊಂಡೆ.

---

[1] ತನ್ನ ಕೆಲಸಗಳನ್ನು ಇದ್ದದ್ದು ಇದ್ದಂತೆಯೇ ತೆಗೆದುಕೊಂಡು ನ್ಯಾಯದೊಡನೆ ತೋಲನ ಮಾಡಿದರೆ ಸಮನಾಗಿಯೇ ತೂಗುತ್ತದೆ. ಎಂದರೆ ತಾನು ಮಾಡಿದುದು ನ್ಯಾಯವೆಂದೇ ವಾದ ಮಾಡುತ್ತಾಳೆ.

ನಿನ್ನ ಕೈವಶ ಕೊಳ್ಳೆ, ಸನಿಹದಲಿ ನಿಲಿಸಿಕೊಳೆ ;
ಹಠದಿಂದ ಗುಟ್ಟರಿತು ತವಶೌರ್‍ಯರಕ್ಷಣೆಯ
ಕೀಲಿಕೈಯ್ಯನು ನನ್ನ ಕೈಹಿಡಿಯಲಿಟ್ಟುಕೊಳೆ
ಅನುವಾದೆ—ಉತ್ತಮದ ಮಾರ್ಗವದು ತೋರದಿರೆ.
“ ಏಕಿದಂ ಬಯಲ್‌ಗೆಯ್ದೆ ” ಎಂದು ಕೇಳ್ವೆಯ ನೀನು ? ೭೬೦
ಎನ್ನಮರುಳ್ಗೈದವರು ಕ್ಷೇಮದಿಂ ನೋಳ್ಪೆವೆಂ
ದೀನನೂ ಗೆಯ್ಯೆವೆಂದಾಡಿದರು ಭರವಸೆಯ.
ಸೂರೆಗೊಂಡಿತು ಮಾತು ; ಸ್ವಾತಂತ್ರ್ಯ ಎಳೆದಿರಲು
ಬನ್ನಸಾಸಕೆ ನಿನ್ನ, ಭೀತಿಯಾತುರದಿಂದ
ವಿರಹದಾ ಹಠಿಯಿಂದ ಒಂಟಿಶಯ್ಯೆಯೊಳೆಂತು
ಪೊಳ್ತುಕಳೆದಪುದೆಂದು ಅಲರಿದುದು ಎನ್ನಮನ.
ನೋಡೀಗ ಪಗಲಿರುಳ್ ಸೊಗವುಣ್ಬೆ ನಿನ್ನೊಡನೆ
ಪ್ರೇಮಕ್ಕೆ ಮೇಣೆನಗೆ ನೀನಿಂದು ಬಂದಿ ಕಣಾ !
ಫಿಲಿಸ್ಟನರದಲ್ಲ ಸೆರೆ, ಪೂರ್ಣ ನೀನೆನ್ನ ದೊರೆ
ಹೊರಗಲೆವ ಕತವಿಲ್ಲ ; ನನ್ನ ಪ್ರೀತಿಯಲಿತರ ೭೭೦
ಸ್ಪರ್ಧಿಗಳ ಬೆದರಿಲ್ಲದಿರಬಹುದು ಮನೆಯಲ್ಲಿ.
ಪ್ರೇಮಶಾಸ್ತ್ರದಲಿಹುದು ನಲವೆಮೆವಡೆದೀ ಸೂತ್ರ !—
ಕೆಲವರ್ಗೆ ನಿಸ್ಸತ್ವ ನಿರಾಧಾರವಾದೊಡಂ,
ಪಲವು ಸಲವೊಲವು ತಾನ್ ಕೆಡುಕನವಲಂಬಿಪುದು
ಶುಭಕೆಂದು ! ಆದೊಡಂ ಕ್ಷಮೆ, ದಯೆಯ ನಡೆದಿಹುದು,
ಎಲ್ಲರಾಚರಣೆಗಿಂ ಬೇರಾಗಿ ಬೀಗದಿರು ;
ಬಾಗದಿಹ ಕರ್ಬುನದ ಆದಟನಿತು ಬೀರದಲಿ
ಮಾನವರನೆಲ್ಲರಂ ಮೀರಿ ನೀನಿರ್ದೊಡಂ
ಮೀರದಿರು ಅವರನ್ನು ಉನ್ಮತ್ತರೋಷದಲಿ ;

## ಸ್ಯಾಂಸನ್

ಕಪಟನುಡಿಯೊಡನೆಂತು ನಟಿಪಳೀ ಕುಟಿಲೆಯಹ ! ೭೮೦
ತಾನ್ ಗೈದ ದುಷ್ಕೃತಿಯೊಳೆನ್ನ ಸಕಗಳನೆತ್ತಿ
ಎನ್ನನೇ ದೂರುತ್ತ ! ಇವುಗಳೇ ಕೂರುತಿವೆ—
ಆರ್ತತೆಯು ತಂದಿಲ್ಲ, ಧೂರ್ತತೆಯು ನಿನ್ನನ್ನು
ಇಲ್ಲಿಯ್ದಿಸಿಹುದನ್ನು ; ನೀನೆಂಬುವಂತೆವೊಲ್
ಮೇಲ್ಪಂಕ್ತಿಯಿತ್ತೆನೈ ; ನಾನೆ ಮಾರ್ಗವ ತೋರ್ದೆ.

ಕಟುನಿಂದೆ, ದಿಟವಮುದು, ನಿನ್ನ ಸಂಚಿಗೆ ಮೊದಲೆ
ನನ್ನನಾನ್ ವಂಚಿಸಿದೆ. ಎನ್ನ ತಪ್ಪಿಂಗಾನು
ಕೂರ್ವ ಕ್ಷಮೆಯನು ಕೊಳ್ಳು, ನೀ ಗೆಯ್ದ ಕುಟಿಲಕ್ಕೆ.
ಕಾಂಬೆಯಿಾ ನ್ಯಾಯದಲಿ ನಿಷ್ಪಕ್ಷಪಾತವನು,
ಎನಗೆ ಕೆಡುಕಿರ್ಪುದನು, ದಾಕ್ಷಿಣ್ಯಶೂನ್ಯವನು; ೭೯೦
ನೀಂ ಕೋರಿ ಬಂದಿಹುದು ನೀನೆ ತೊರೆದಪೆಯಾ;
ಮೇಣೊಪ್ಪಿಕೊಳುವೈ ಇವು ನಟನವೆಂಬುದನು.
ಕ್ಷಮಿಪೆಯೇನ್ ಅಬಲತೆಯ; ಫಿಲಿಸ್ಟನ್ ಸ್ವರ್ಣಮಂ
ತೊರೆಯದೀಯಬಲತೆಯನದೆ ತಾನೆ ಕೂರ್ದಪಯ್.
ಕ್ಷಮಿಸೆ ದೌರ್ಬಲ್ಯಮಂ, ಮುಂಬಂದು ವಾದಿಸರೆ
ಕೊಲೆಗಡುಕ ತಸ್ಕರರ್, ಪುಸಿವಂಥ ಕಪಟಿಗಳ್
ದ್ರೋಹಿಗಳ್, ಕಾಮಿಗಳ್, ಮಾತೃಪಿತೃಘಾತುಕರ್
ಕ್ಷಮೆಯ ತೋರಲ್ಕಿನ್ನು. ಸಕಲದೌಷ್ಟ್ಯಂಗಳನು
ದೌರ್ಬಲ್ಯವೆಂದೆನುವೆ; ಈ ನ್ಯಾಯ ಒಪ್ಪದೈ—
ದೇವರಲು, ಮನುಜರಲು ಕ್ಷಮೆಗರ್ಹ ನೀನೆಂದು. ೮೦೦
ಪ್ರೇಮವಿಂ ತಾಡಿಸಿತೆ; ದ್ವೇಷಮೆಂದೊರೆಯುದನು.
ಕಾಮವಂ ತಣಿಸಿಕೊಳೆ, ಒಲವೊಲವನರಸುವುದು;
ಎನ್ನೊಲವ ನೀನೆಂತು ಇಚ್ಛಿಸುವೆಯೆನ್ನಲ್ಲಿ
ಬಣ್ಣನೆಗೆ ಸಿಲುಕದಿಹ ದ್ವೇಷವನು ವರ್ಧಿಸುತ
ಹಂಚಿಕೆಯ ನಿಯಮದೋಲ್ ನೀಯೆನ್ನ ವಂಚಿಸಲು
ಅವಮಾನವನು ಮುಚ್ಚಲವಮಾನ ಯತ್ನವಿದು
ತಾರದೈ ಫಲವನ್ನು, ಕಪಟಕುಟಿಲಗಳೆಲ್ಲ.
ನಿನ್ನತಪ್ಪನ್ನಿನಿತು ಪಿರಿದಾಗೆ ತೆರೆದಪುದು.

ಡಲೈಲ

ಮಹಿಳೆ ಪುರುಷರ್ಗೆಲ್ಲ ಅಕ್ಷಮ್ಯ ದೌರ್ಬಲ್ಯ
ವೆಂಬೆಯಲ, ನೀ ಸಂದು ನಿನ್ನ ಖಂಡನೆಯೊಳಗೆ! ೮೧೦
ಅಂತಿರ್ದೊಡೆ ಕೇಳು, ಒಪ್ಪಿಗೆಯನೀವ ಮುನ್
ಎನಗೆ ಬಂದೊತ್ತರವ ಎನ್ನಬಳಸಿದ ಬಲೆಯ
ಎನ್ನ ಸುತ್ತಾವರಿಸಿಹ ನೇಣ್ಗುಣಿಕೆಯನ್ನು.
ಮನುಜರಲಿ ಸುದೃಢನುಂ, ಸಂಯಮಿ ಶ್ರೇಷ್ಠನುಂ
ಬೆರಗಾಗಿ ಬೀಳಲ್ಕೆ ಮುಕ್ತದೂಷಣದಿಂ

ನಿನ್ನ ವಾದದ ತೆರದಿ ಎನಗಳುಕನೂಡಿದುದು
ಸ್ವರ್ಣ ತಾನಲ್ಲವದು ; ನೀನೆ ತಿಳಿದಿಹೆಯಲ್ತೆ.
ಎಮ್ಮ ದೇಶವನಾಳ್ವ ನೃಪತಿ ನ್ಯಾಯಾಧಿಪರು
ತಮಗೆ ತಾವೇ ಬಂದು ಬೇಡಿದರು ; ಆಣತಿಯ
ನೀಡಿದರು, ಕಾಡಿದರು, ಗೆಯ್ದರಾಗ್ರಹವ. ೮೩೦
ತರ್ಕದಲಿ ಕೂರಿದರು ನಾಡಹಿತವಿದರಿಂದ,
ಧರ್ಮರಕ್ಷಣೆಯೆಂದು, ವಾದದಲಿ ಸಾರಿದರು
ಸರಿಯೆನ್ನುತೀ ಕೃತಿಯ. ಸಕಲಗುರ್ಗ ಅರಿಯುಪ್ಪ,
ಪಿರಿದು ಸಂಖ್ಯೆಯಲಂತು ನಾಡವರ ತರಿದವನ
ಬೀಳಿಪುದನವರು ಘನದೆಸಕವೆಂದರ್ಗೈ ;
ಗರಿಮೆಯೆಂದಾಡಿದರು. ಧರ್ಮಾಧಿಕಾರಿಗಳ್
ಹಿಂದಿರ್ದರೇನೆನ್ನ ? ಕಿವಿಯಲ್ಲಿ ಎಡೆಬಿಡದೆ
ತುಂಬಿದರು ಬೋಧನೆಯ—ಡೇಗನ್ನ ಗಣಿಸದೀ
ಧರ್ಮಬಾಹಿರನನ್ನು ಬಲಿಗೆ ಸಿಲುಕಿಪುದನ್ನು
ದೈವವೊಲಿದಪುದೆಂದು ಘನಮೆನಿಪ ತರ್ಕಮಿವ ೮೩೦
ನೆಂತು ನಾನೆದುರಿಪುದು. ನಿನ್ನಲಿಹ ಎನ್ನೊಲವು
ಸೆಣಸಿ ಪ್ರತಿವಾದದಿಂ ಸಕಲಕಾರಣಗಳಿವನು
ಮೌನದಿಂದೆದುರಿಸಿತು ಕಷ್ಟಸ್ಪರ್ಧೆಯಲಿ
" ಪ್ರಜೆಗಳೊಳ್ಳಿತಕೆ ನಿಜತುಷ್ಟಿಯಂ ತ್ಯಜಿಸೆಂಬ "
ಎಲ್ಲು ಪ್ರಚಲಿತಮಿರ್ಪ, ಧೀಮಂತ ಜಿಹ್ವೆಗಳು
ಆದರಿಪ ಸೂಕ್ತಿಯಿದು, ತುಂಬುಗಾಂಭೀರ್ಯದಿಂ
(ನೆನೆದಂತೆ) ಸುಗುಣಯುತ, ಕರ್ತವ್ಯವದರಲಿರೆ
ಎನ್ನ ಸಂಪೂರ್ಣದಿಂ ವಶಗೊಂಡು ಜೃಂಭಿಸಿತು.

ಸ್ಯಾಂಸನ್

ನಿನ್ನ ಕಪಟವ್ಯೂಹವಿಂತು ಕಾಂಬುದು ಅಂತ್ಯ
ವೆಂದಾಗಲೇ ನೆನೆದೆ ಧರ್ಮದೀ ಸೋಗಿನಲಿ, ೮೪೦
ನಯದ ವಂಚನೆಯಲ್ಲಿ ; ಒಲವಿನಭಿನಯದಲ್ಲಿ
ರೌದ್ರತೆಯುಮಿನ್ನುಮಿರಲದರ ನ್ಯಾಯದ ತೆರದಿ
ಸದಸದ್ವಿವೇಕಮಂ ನಿನಗೆ ಬೋಧಿಸುತಿತ್ತು—
ಬೇರೆ ತೆರ ವಾದವನು, ಬೇರೆ ತೆರ ಕಾರ್ಯವನು.
ನಾನಾಪಠೋ ನೋಡು! ಎನ್ನಕುಲ, ಮೇಣ್ನಾಡ

ಕನ್ನೆಯರ ಕಡೆಗಣಿಸಿ ಅರಿಗಳಲ್ಲಾರಿಸಿದೆ
ನಿನ್ನನ್ನು, ನಿನಗಿತ್ತೆ ಒಲವನ್ನು, ಬಹುಪಾಲು !
ನಿನಗದರಿದಿಹುದಲ್ತೆ, ಬಲುಹೆಚ್ಚು, ಬಲುಹೆಚ್ಚು.
ತೆರೆದಿತ್ತೆ ನಿನಗೆಲ್ಲ ಗೂಢಸರ್ವಸ್ವಗಳನ್ನು
ಅಟ್ಟಹಾಸಕ್ಕಲ್ಲ ; ಯಾಚನೆಗೆ ಮಣಿಯುತ್ತ ; ೮೫೦
ನಿನ್ನಲೆಲ್ಲವ ಮರೆಸಲಸಮರ್ಥನಾಗುತ್ತ ;
ತೀರ್ವಾನಗೆಯ್ದುಯಲ ಶತ್ರುವೆಂದೆನ್ನ ನೀಂ—
ಅಂದೇಕೆ ಮೊದಲೆನ್ನ ಪತಿಯೆಂದುಕೊಂಡೆ ನೀಂ.
ಆಗಳುಂ, ಆಗಿನಿಂದೀಗಳುಂ ನಾಡರಿಯ.
ಎನ್ನೆರೆಯಳಾಗುತ್ತ ಎನಗೆಂದು ತಂದೆತಾಯ್
ನಾಡ ಬಿಡಬೇಕಿತ್ತು ! ಅವರ್ಗೆ ನಾನ್ ಪ್ರಜೆಯೆ ?
ಅವರೆನಗೆ ಪೋಷಕರೆ ? ನಾನೆ ತಾನ್ ಎನಗೆ ದೊರೆ—
ನೀನಿರಲ್ ಎನ್ನವಳು ಎಂತು ನೀನವರವಳು ?
ಎನ್ನಬಾಳ್ ಕೊಳ್ಳಲ್ಕೆ ನಿನ್ನಜನ ನೇಮಿಸಲು ೮೬೦
ನಿನ್ನದದು ಅನ್ಯಾಯ, ನಿಯತಿನಿಯಮಕೆ ಹೊರತು,
ನಾಡನ್ಯಾಯಕೆ ಕುತ್ತು. ಅದು ನಿನ್ನ ನಾಡಲ್ಲ.
ಕರುಣೆಯಿಲ್ಲದ ಕೆಲರು, ದೇಶಾಭ್ಯುದಯಕೆಂದು
ಅರಿಕೃತಿಗು ಹೀನಮಹ ದುಷ್ಕೃತಿಯನೆಸಗಿಹರು.
ಧರ್ಮಕ್ಕೆ ಪೆಸರಾಂತ ದೇಶನೀತಿಯನೊತ್ತಿ
ಬಿಡಬೇಕು ಅವರ್ಗಳಂ ! ಅಡಿಸಿತೆ ಕರ್ತವ್ಯ
ದೇವತೃಪ್ತ್ಯರ್ಥಕ್ಕೆ ಗೆಯ್ದುಯೇನಿವುಗಳಂ ?
ತಮ್ಮ ನಿರ್ಮಲತೆಯಂ ಸ್ಥಾಪಿಸಲು ಅರಿಯರಹ;
ತಮ್ಮ ಮಹಿಮೆಯ ತೂರಿ ಅವರರಿಯ ಪಿಡಿವರಹ,—
ದೇವತ್ವದಿಂ ಜಾರಿ; ದೇವರೇನಿವರುಗಳು ? ೮೭೦
ಇಂತವರ್ಗೇಂ ಪುಗಳ್ ; ಬಾಗುವುದೆ ಇವರಿಗೆ ?
ಇಂಥ ಸೋಗಿನಮಾತು ಬೀಗುವೀ ವರ್ಣಗಳು
ತವಕೃತ್ಯಗಳ ತೆರೆದು ತವಸತ್ವ ಬೆಳಗುವುದು.

ಡಲೈಲ

ವಾದದಲಿ ಪುರುಷಂಗೆ ಮಹಿಳೆ ತಾನೇಗಳುಂ
ತರ್ಕಗಳನೇನಿಡಲು ಅಪಜಯದಿ ಸುರ್ಕುವಳ್.

ಸ್ಯಾಂಸನ್

ಸರಿನುಡಿಯು ತೋರದಿರೆ; ಸೊಕ್ಕು ತಾನಳಿದಿರಲು.
ಸಾಕ್ಷಿ ನಾನೇ ಇಹೆನ್ ನಿನ್ನ ಘಾತದಿ ನರಳಿ !

ಡಲೈಲ

ಆತುರದಿ ಮುಂಕಾದೆ; ಸಂಪೂರ್ಣ ತಪ್ಪಾಯ್ತು
ಸಿದ್ಧಜಯವೆಂದಾನು ನೆನೆದ ಸರ್ವಸ್ವಗಳು.
ಕೋರುವೆನ್ ಕ್ಷಮೆಯನಾ ಸ್ಯಾಂಸನ್ನೆ ನಿನ್ನಲ್ಲಿ. ೮೮೦
ಅನುಮತಿಯ ನೀಡುವೆಯ ದುರ್ಬೋಧದಿಂ ಗೆಯ್ದ
ಎನ್ನ ದುಷ್ಕೃತಿಗಳ್ಗೆ ನೀಡೆ ಪರಿಹಾರಗಳ.
ಫಾಸಿಯೊಳಗುಳಿದಿರ್ಪ ಇವುಗಳ್ಗೆ ಬಳಲದಿರು;
ಮೇಣ್ ಹಠದಿ ಕೊರಗದಿರು ಬರಿದೆ ವ್ಯರ್ಥದಲಿ.
ದೃಷ್ಟಿಯಿರದಿರೆ ಬೇಡ, ತುಷ್ಟಿಸಾಧನವೆಷ್ಟೊ
ಮಿಕ್ಕಿಹವು, ಕೊಳ್ಳುವನು ಇತರ ಕರಣಂಗಳ್ಗೆ—
ಸಂತುಷ್ಟಿಬೇಕಿರಲು ಕೊಳ್ಳುವಂ ಮನೆಯೊಳಗೆ,
ಗೃಹಸುಖದ ಬಳಸಿನೊಳು; ವಿಶ್ರಾಂತಿ ಸುಖದಲ್ಲು;
ದಿನದಿನವು ಕಣ್ದೃಷ್ಟಿ ಮನುಜರಂ ಚೋದಿಸುವ
ಸಾಸದುದ್ಯಮಗಳಿಂ ಮುಕ್ತ ನೀನಾಗಿರ್ಪೆ ೮೯೦
ಅರಿಕೆಯಾಲಿಪರೆಂಬ ಭರವಸೆಯ ಕೊಂಡಾನು
ಧಣಿಗಳೊಳು ಮೊರೆಯಿಡುವೆ; ಈ ಹೀನಸೆರೆಯಿಂದ
ಬಿಡಿಸಿ ಪಡೆದಪೆ ನಿನ್ನ, ಇರಲು ಎನ್ನೊಡನೆ.
ಕುಡುವೆನೀ ರೆರಡನಿತು ಅರುಮೆ ಆದರವನ್ನು
ಪಾಲನೆಯನೊಡಗೂಡಿ. ತುಷ್ಟಿಯೆನಗೂಡಲಿದು!
ಬಿಡುವೆನೇ ಮುಪ್ಪಿನೊಳು, ಎಡೆಬಿಡದೆ ಆದರಿಪೆ;
ಕೃತಜ್ಞತೆಯಿಂದೆಲ್ಲ ಮಾಡುವೆನು; ನೀಡುವೆನು.
ನಾನೊದಗಿಸಿಹ ಪಾಡನಿನಿತು ಚಿಂತಿಸೆ, ನೋಡ!

ಸ್ಯಾಂಸನ್

ಬೇಡವೆನ್ನಯ ಗೊಡವೆ; ನೀನದನು ಬಿಟ್ಟುಬಿಡು.
ಎರಡಾಗಿ ಒಡೆದಿಹೆವು ಬಹಳ ಕಾಲದ ಹಿಂದೆ. ೯೦೦
ಮೂರ್ಖನೋ, ಮರುಳೆಂದುಕೊಂಡೆಯೇನ್ ನೀಯೆನ್ನ
ಒಮ್ಮೆ ಸಿಲುಕಿದ ಬಲೆಗೆ ಮತ್ತೊಮ್ಮೆ ಬೀಳಲ್ಕೆ.
ನಿನ್ನ ಮೋಡಿಯುನರಿದೆ ಸರಿಯಾದ ಬೆಲೆತೆತ್ತು.
ಗೊತ್ತಿಲ್ಲ ತಂತ್ರಗಳು, ಸೂರೆಗೊಳಿಸುವ ನುತಿಯು!
ಸೆರೆಕೊಳ್ವ ಸೌಂದರ್ಯ ಸೊರ್ಕು ಗೆಯ್ವುದೆಯೆನಗೆ

ಶೌರ್ಯವಳಿದಿರಲು? ಆಡರಿನ[1] ಜಾಣ್ಮೆಯಂ
ಚೆನ್ನಾಗಿ ಅರಿತಿಹೆನ್-ನಿನ್ನ ಕಪಟಂಗಳ್ಗೆ
ಕಿವಿಗಿಡುವ ತಡೆಯಂ! ಏರಿರಲು ಜವ್ವನಂ
ಬೀರತನ ವುಕ್ಕಿರಲು, ಸಕಲರರುಮೆಯನುಂಡೆ,
ಭೀತಿ ಆತುರ ಕಂಡೆ; ನೀನೊರ್ವಳೇ ಕೊಂಡೆ ೯೧೦
ದ್ವೇಷವಮಂ ಭರ್ತನಲಿ; ತಿರಸ್ಕೃತಿಯನು ತಾಳ್ದೆ,
ಅರಿಗೆ ವಿಕ್ರಯಿಸುತ್ತ ಪೀಡೆ ಕಳೆಯಿತು ಎಂದೆ.
ಎಂತೆನ್ನ ನೀ ಕೊಳುವೆಯೀಗಲೀ ಅಂಧನನು.
ವಂಚನೆಗೆ ಸಿಲುಕುವೀ ಬಾಲನ್ ಅಸಹಾಯನನು?
ಕುತ್ಸಿತಕ್ಕೀಡಾಡಿ ನಿಂದನೆಗೆ ಗುರಿಮಾಡಿ
ಕಡೆಗೆ ಕೊರೆದಪೆಯೆನ್ನ; ಭರ್ತ್ಸನೆಗಳೆಂತಿಹವೊ
ನಿನ್ನಿಚ್ಛೆಗೊಲಿದಾಸು ಪೂರ್ಣದಾಸ್ಯವ ಕೊಂಡು
ಬಾಳನ್ನು ಕಳೆವಂದು; ಮತ್ತೆ ತೊರೆಯುತ್ತೆನ್ನ
ನುಡಿದುದಂ ನೋಡಿದುದ ಕೊಂಡೊಯ್ವೆಯಾಳ್ವರೆಡೆ
ಖಂಡಿಸವರಾಡಲ್ಕೆ, ಗರ್ವದಿಂ ತೆಗಳಲ್ಕೆ. ೯೨೦
ಸೆರೆಯಿದೇ ಸ್ವಾತಂತ್ರ್ಯಸೌಧವೆನಗದು ಸತ್ಯ;
ಕಾಲ್ಗಳಿವು ನಿನ್ನ ಮನೆ ಹೊಗುವುದಂತೆಯೆ ಮಿಥ್ಯ.

ಡಲೈಲ

ಸ್ಪರ್ಶಿಸಲ್ ತವ ಕರವನೊಮ್ಮೆ ಸನಿಹಕೆ ಬರ್ಪೆ.

ಸ್ಯಾಂಸನ್

ಜೀವದೊಂದಿಗಸಾಧ್ಯ! ಬೀಭತ್ಸ ನೆನಹುಗಳ್
ಭೋಂಕನೇಳುತ ಮೇಲೆ ಚೋದಿಪುವು ಸೀಳ್ದೆಸೆಯೆ
ತವಖಂಡ ಖಂಡಗಳ. ದೂರ ನಿಲ್! ಕ್ಷಮೆಯ ಕೊಳ್
ಸರಿ ಪೋಗು ಅದರೊಡನೆ. ವಿಖ್ಯಾತ ವನಿತೆಯರ,
ಹದಿಬದೆಯರಾಳಿಯಲಿ ಹೊಳೆಯಲೆಸಗಿಹೆಯಲ್ಲ!
ಘನವೆನಿಪ ಗೆಯ್ಮೆಗಳ ಹಾಡವನೆ ಮಿಥ್ಯೆಗಳ!

---

[1] ಆಡರ್—adder ಒಂದು ಸಣ್ಣ ವಿಷಸರ್ಪ. ಹಿಬ್ರು ಸಾಹಿತ್ಯದಲ್ಲಿ ಇದರ ಉಲ್ಲೇಖ ಬಹುವಾಗಿ ಕಂಡುಬರುತ್ತದೆ. ಇದರ ಬುದ್ಧಿವಂತಿಕೆಯನ್ನು ಮೆಚ್ಚಿಕೆಯೊಡನೆ ಉದಹರಿಸುತ್ತಾರೆ. ಈ ಆಡರ್ ಹಾವಾಡಿಗನ ಪುಂಗಿನಾದಕ್ಕೆ ಕಿವಿಯನ್ನು ಕೊಡದೆ, ಅವನಿಗೆ ವಶಗೊಳ್ಳುವುದಿಲ್ಲ.

ದಾಂಪತ್ಯಕಿತ್ತಂತ್ಯವಾಂತೆಯೆಲ ಚೆಂಬೊನ್ನ ೯೩೦
ಕೊಂಡುಸೊಗಬಾಳ್ ಬಾಳು, ಜವದಿಂದಲ್ಯೈದಿಬಹ
ವೈಧವ್ಯದೊಡನಿನ್ನು! ಕೊಳ್ಳು ವಂದನೆಯನ್ನು!

ಡಲೈಲ

ನಿನ್ನ ಪರಿವರ್ತಿಸಲು ಬಲವಿಲ್ಲವಿನ್ನೆನಗೆ.
[1]ವಾಯು ವಾರಾಶಿಗಿಂ ಬಧಿರನೆನ್ ಪ್ರಾರ್ಥನೆಗೆ.
[2]ಅಂತ್ಯಕಬುಧಿಯುಮೆಲರು, ವೇಲೆಯುಂ ವಾರಿಧಿಯು
ಒಪ್ಪಂದಕ್ಕೈತಹವು! ನಿನ್ನನಪ್ಪಿಹ ಕೋಪ
ಅಡಗಲಾರದೆಯಿನ್ನು ಗುಡುಗಿ ಸಿಡಿದಪುದಾಹ–
ವಿಲಯ ಮಾರುತನೆಂತು ನಿಲನು ಶಾಂತಿಯನಾಂತು!
ಆರ್ತಳಾಗಲೆ ನಾನು. ಶಾಂತಿ ಕ್ಷಮೆಯನು ಬೇಡಿ.
ಕೊಳ್ಳಲೆ ಪರಾಭವವ. ಬೆಳಗಲ್ಕೆ ಬರಿದ್ವೇಷ, ೯೪೦
ಕೆಡುನುಡಿಗಳಾಶಿಷಂ, ಪೆಸರ್ಗೊದಗೆ ದುರ್ಯಶಂ!
ಇಡೆನೆನ್ನ ಪದಗಳಂ ತವವಿಷಯಗಳಿಗಿನ್ನು;
ಮೇಣೆನ್ನ ಗೆಯ್ಮೆಗಳ ಒಪ್ಪಿಕೊಳೆ ತಪ್ಪೆಂದು!
ಖ್ಯಾತಿಯಿದಕೆರಡುಮುಖಮಿಲ್ಲದಿರಲಾಂತಿಹುದು
ಎರಡು ನಾಲಗೆಗಳಂ! ಘನವೆಸಕಗಳ ಪೊತ್ತ
[3]ಕರಿಬಿಳಿಯ ಪಕ್ಷಗಳ ಕೆದರಿ ಸಾರ್ವುದು ಮೇಲೆ
ಗಾಳಿ ಬಟ್ಟೆಯ ಮೀರಿ ಕೀರ್ತಿಪಕ್ಷಿಯು ಸಾರಿ!
[4]ಅತೊವಲಿ ಜನಗಳಲಿ[5]ಡಾನ ಜೂಡನ್ನರಲಿ
ಗಡಿಯ ಬುಡಕಟ್ಟನಲಿ, ಅವರ ಪೀಳಿಗೆಯಲ್ಲಿ
ಕುಖ್ಯಾತಿ ಕೊಳಬಹುದು ಶಾಪಕೆಡೆಗುಡಬಹುದು; ೯೫೦
ಪುಸಿತನವ ಮೇಣ್ ಪೆಣ್ಣ ಕುಟಿಲವಂ ಪಾಡ್ವಪರು
ಪ್ರಬಲವೆನ್ನಾಶೆಯೊಲು ಎನ್ನನಾಡಿನೊಳಿನ್ನು

---

1 ಎಷ್ಟು ಪ್ರಾರ್ಥಿಸಿದರೂ ಗಾಳಿಯೂ ಸಮುದ್ರವೂ ಮೊರೆತವನ್ನು ಕಮ್ಮಿ ಮಾಡುವುದಿಲ್ಲ.

2 ಒಂದು ವೇಳೆ ಅಪ್ಪಿತಪ್ಪಿ ಗಾಳಿಯೂ ಸಾಗರವೂ, ಮತ್ತು ಸಾಗರವೂ ದಡವೂ ಪರಸ್ಪರ ಸಮಾಧಾನಕ್ಕೆ ಬರಬಹುದು. ಆದರೆ ಡಲೈಲಳ ಪ್ರಾರ್ಥನೆಗೆ ಸ್ಯಾಂಸನ್ ಬಗ್ಗುವುದು ಅಸಾಧ್ಯದ ಕೆಲಸವೇ ಸರಿ!

3 ಕರಿಬಿಳಿ ಪಕ್ಷ—ಕೀರ್ತಿ ಮತ್ತು ಅಪಕೀರ್ತಿಗಳ ಎರಡು ರೆಕ್ಕೆಗಳು.

4 Unforeskins—Circumcised—ಇಸ್ರೇಲಿನವರು.

5 ಸ್ಯಾಂಸನ್ನನ ಊರಿನ ಪ್ರದೇಶ ಮತ್ತು ಸುತ್ತಮುತ್ತಲಿನಲ್ಲಿ (Dan ಮತ್ತು Judea ಪ್ರದೇಶಗಳವರು).

[1]ಎಕ್ರಾನು, ಗಾಜದಲಿ. ಆಸ್‌ಡಾಡು, ಗಾಥಿನಲಿ
ಪೆಸರಾಂತ ಪೆಣ್ಗಳಲಿ ಮೆರೆವುದೆನ್ನಯ ಪೆಸರು.
ಹಬ್ಬಹಬ್ಬಂಗಳಲಿ ಕಬ್ಬಗಳ ಪಾಡುವರು!
ಚಂಡಲಯಕರ್ತನಿಂ ನಾಡನ್ನು ಬಿಡಿಪುದನು
ದಾಂಪತ್ಯಬಂಧಕಿಂ ಮಿಗಿಲೆಂದ ನಾರಿಯೆಂ-
ದೀಗಣ ಪ್ರಾಚೀನ ಮಾನ್ಯರಲಿ ಗಣಿಸುವರು!
ವಾರ್ಷಿಕೋತ್ಸವಗಳಲಿ ಧೂಪಗಳನುರಿಸುತ್ತ
ಸುಮಗಳಿಂ ಪೂಜುವರು ಸಮಾಧಿಶಿಲೆಯನ್ನು! ೯೬೦
[2]ಫಾಲಮಂಡಲದಲ್ಲಿ ಆಣಿಯೊಂದನು ಜಡಿದು
ನಿರ್ದಯದ ನಿರ್ಣಯದಿ ನಿದ್ರಿಸಿದ ಸಿಸೇರನಂ
ಸಾಯಿಸಿದ ಈಫ್ರೇಂ ಗಿರಿಯುವಳ್ ಜಾಯಲ್ಗೆ
ಕಿರಿಯಳೇಂ ಕೀರ್ತಿಯಲಿ! ನಾಡಿಂಗೆ ನಲುಮೆಯಂ
ನೀಡಿದವಳಿವಳೆಂದು ನಿರ್ಧರಿಸಿ ನೀಡುವೀ
ನನ್ನವರ ಮನ್ನಣೆಯ ತಗದೆಂದು ತೊರೆವೆನೇಂ?
ಆರಿದಕೆ ಕರುಬುವರ್, ದ್ವೇಷದಿಂದೀಕ್ಷಿಪರ್
ಅವರ ಪಾಡವರಿಂಗೆ, ಎನ್ನ ಪಾಡೆನಗಿರ್ಕೆ.

ಮೇಳ

ಪೊರಮಟ್ಟಳಿಲ್ಲಿಂದ ಸಂಪೂರ್ಣಸರ್ಪಿಣಿಯು
ಮೊದಲಿಂದಲಡಗಿಸಿದ ನಂಜುಪಲ್ಬೆಳಗಿಸುತ! ೯೭೦

ಸ್ಯಾಂಸನ್

ಲೇಸಾಯ್ತು; ಪೋಗಲ್ಕೆ! ದೈವ ಕಳುಪಿತು ಅವಳ—
ಎನಗೆ ಕೇಡೆಸಗಲ್ಕೆ, ತಪ್ಪನೀಡಾಡಲ್ಕೆ!
ಸರ್ಪಿಣಿಗೆ ಅರ್ಪಿಸಿದೆ ಅವನಿತ್ತ ಗೂಢಮಂ
ಜೀವನವಿದೆನ್ನುವೀ ಜೀವ ರಕ್ಷಾಮಣಿಯ!

---

[1] ಫಿಲಿಸ್ಟನರ ಐದು ಪ್ರಮುಖ ಪಟ್ಟಣಗಳಲ್ಲಿ ನಾಲ್ಕು; ಐದನೆಯದು ಅಸ್ಕಲನ್.

[2] ಜಾಯೆಲ್ (jael) ಕೆನೈಟ್ (Kenite) ಎಂಬುವನ ಹೆಂಡತಿ. ಇವರಿಬ್ಬರೂ ಸೋತು ಶರಣಾಗತನಾದ ಶತ್ರುಸೈನ್ಯದ ಅಧಿಪತಿ ಸಿಸೇರ(Sisera)ನಿಗೆ ವಂಚಿಸುವುದಿಲ್ಲವೆಂಬ ವಚನವನ್ನಿತ್ತು ಆಶ್ರಯವನ್ನು ಕೊಟ್ಟರು. ಆದರೆ ಇಷಕ್ಕೆ ಪ್ರತಿಯಾಗಿ ಸಿಸೇರನು ನಿದ್ರಿಸಿರಲು ಅವನ ಹಣೆಗೆ ಮೊಳೆಯೊಂದನ್ನು ಜಡಿದು ಜಾಯೆಲ್ ಆವನನ್ನು ಸಾಯಿಸಿದಳು. ಡಿಬೋರ (Deborah) ಎನ್ನುವ ಹಿಬ್ರು ಮಹಾತ್ಮಳು—ಈಫ್ರೇಂ ನಿವಾಸಿ, ಈ ರಮ್ಯಕಥನವನ್ನು ಹೃದಯಂಗಮವಾದ ಗೀತೆಯಲ್ಲಿ ನಿರೂಪಿಸಿದ್ದಾಳೆ. ಈ ಗೀತೆ ಪ್ರಖ್ಯಾತಿಯನ್ನು ಹೊಂದಿದೆ.

ಮೇಳ

ಕೆಡುಕೀವ ಚೆಲುವಿಂಗೆ ಅದ್ಭುತದ ಶಕ್ತಿಯಿದೆ !
ಅಳಲಿತ್ತು ಮತ್ತೊಲವ ಗಳಿಪ ಪ್ರಯತ್ನವಿದೆ.
ಸುಲಭದಲಿ ತಗ್ಗದದು, ಒಳಗುದಿಯ ಹಬ್ಬಿಸದೆ !
ಕನಿಕರದ ಕೆಯ್ದುವಿನ ಕೊಂಡಿಗೀಡಾಗದೆಯೆ.

ಸ್ಯಾಂಸನ್

ಪ್ರೇಮಸಮರಕ್ಕಂತ್ಯ ಸರಸಸಂಧಾನವದು—
ದಾಂಪತ್ಯವಿದ್ರೋಹ, ಜೀವಹರಣಗಳಲ್ಲ. ೯೮೦

ಮೇಳ

ಸ್ತ್ರೀಯೊಲವ ಗಳಿಸದನು ಪಲಕಾಲ ಬಾಳಿಪುದು
ಗುಣವಲ್ಲ, ಮತಿಯಲ್ಲ, ವಿಕಟಸಾಸಗಳಲ್ಲ.
ಶೌರ್ಯ, ಚೆಲುವುಗಳಲ್ಲ ; ಕಾರ್ಯಘನತೆಗಳಲ್ಲ
ಆದರಾವುದಕೆಂದು ಪೇಳಲ್ಕೆ ಬಹುಕಠಿಣ.
ಒಂದಲ್ಲ, ಎರಡಲ್ಲ, ಆರೇಳು ದಿನ ಕುಳಿತು
ಆವ ವಿಧದಿಂದದಂ ಎಡೆಬಿಡದೆ ಮಥಿಸಿದರು.
(ನಿನ್ನೀ ಸಮಸ್ಯೆಯೋಲ್) ಬಿಡಿಸಲಾರದ ಒಗಟು.
ಪೂರ್ಣವಿಾ ಗುಣಗಳನೊ, ಮೇಣಿದರಲೊಂದನೋ
ಗಣಿಸಿರ್ದರಾ ಟಿಮ್ನ ವಧು ವರಿಸುತಿರ್ದಳೇನ್,
ಸರ್ವವಿಧದಿಂ ನಿನಗೆ ಕೀಳೆನಿಪ ಗೆಳೆಯನಂ ೯೯೦
ನೀಂ ತೊರೆದ ಶಯ್ಯೆಗಿನ್ ? ಕನ್ನೆಯಿರ್ವರ್ಕಳುಂ
ಮುರಿದಪರೆ ಮದುವೆಯಂ, ತರಿಯುತಿರ್ದಳೆಯಿಾಕೆ
ಜೀವಸಾದೃಶಮಪ್ಪ ತವಶಿರದ ಬೆಳೆಯನ್ನು—
ವಂಚನಾವ್ಯೂಹದಲಿ ? ಇದಕೆಂದೆ ಹೇರಿಹುದೆ
ಬಾಹ್ಯದೀ ತೊಡವುಗಳ್ ಸ್ತ್ರೀಜಾತಿ ಸಕಲರ್ಗೆ.
ಆಂತರ್ಯಸಾಧನಗಳ್, ಅರೆಬರೆಯಲೀಡಾಡೆ,
ನಲ್ಲದಂ ಪೊಲ್ಲದಂ ನ್ಯಾಯಮನ್ಯಾಯಮುಂ.
ಮುಂದಿರ್ಪ ವಸ್ತುವಲಿ ಮೌಲ್ಯವಾವುದದೆಂದು
ನಿರ್ಧರಿಸಲೇಗಳುಂ ಪೊಲ್ಲದುದೆ ಚೆಲ್ಲಿರಲು
ಬೇರ್ಬಿಡದ ದೃಢತೆಯಲಿ ಸ್ವಾಭಿಮಾನಂ ಕಲೆತು ೧೦೦೦
ಒಲವೇನ ಕಾಣದಯ್, ಪಲಕಾಲ ಬಾಳದಯ್.

ಇದೆಂತಾದರುಮಿರ್ಕೆ ; ಮತಿವಂತರದ್ಭುತರ್
ಜವ್ವನದ ಜವನಿಕೆಯ ಜಾಣೆಯೊಳ್ ಸಗ್ಗಮಂ,
ಮೃದುಲಮಂ, ವಿನಯಮಂ, ದಯೆಯ ಮೇಣರ್ತಿಯಂ
ಕಾಣ್ಬರಹ ಮೊಮ್ಮೆದಲ್, ಒಮ್ಮೆಯುವಳೊಡಗೂಡೆ
ಪ್ರತಿಗುಣವತೋರುವಳ್, ಕರುಳಿರಿವ ಮುಳ್ಳವಳ್ ;
ಕಾಪ ಗೆಯ್ವೊಳ್ ಅಡಗಿ ಕುಳಿತಿರ್ಪ ಪಿಡುಗವಳ್ !
ಅವನ ಋಜುಮಾರ್ಗದೊಳು ಎಡರವಳ್, ಕೆಡುಕವಳ್ !
ಬೆಡಗಿನಿಂ ಕೊಂಡವನ ಮಾಡಿ ಮತಿವಿಕಳನಂ
ಭೃತ್ಯನೋಲ್ ಆಡಿಪಳ್, ಕೆಡುಕಿಂಗೆ ದೂಡುವಳ್ ; ೧೦೧೦
ದುಷ್ಕೃತ್ಯಕೆಳೆದಪಳ್ ಅಂತ್ಯಮದು ನೀಡುವೋಲ್ !
ಚುಕ್ಕಾಣಿಪಿಡಿದಿರ್ಪ ಚಾಲಕಂ ಮುಕ್ಕನಿರೆ
ಅಧಿಪಗೆನಿತಿರೆ ಬುದ್ಧಿ ನಾವೆಯೊಡೆಯದೆ ಗುದ್ದಿ !
ದೈವಕೃಪೆಗೊಂಡವನ್ ಪಡೆದಪಂ ಸುಗುಣಿಯಂ !
ವಿರಳವಿದು ದೃಷ್ಟಾಂತ ; ಗೃಹಶಾಂತಿಯಡೆವನವ
ಮಂಗಳದ ಬಾಳ್ಕೆಯುದು ; ಸಾಮ್ಯ ಮೇಣ್ ಸುಪಥವದು,
ಸುಗುಣವುದು, ಒಡೆದಪುದು ಎಡರುತೊಡರುಗಳನ್ನು
ಆಶೆಪಾಶಗಳನ್ನು ಹರಿದೊಗೆದು ಮುನ್ನುಗ್ಗಿ
ಪೊಳೆದಪುದು ಕಳೆಯಿಂದ ದಿನದ ಹರಕೆಯ ತಳೆದು.
ದೈವನಿಯಮನವಾದ ವಿಶ್ವಪ್ರಚಲಿತವಾದ ೧೦೨೦
ಮನುಜಂಗೆ ನೀಡುವುದು ವಿಶಿಷ್ಟಾಡಳಿತಮಂ
ಸರಿಯಾದ ರೀತಿಯಿಂ ತನ್ನವಳ ಮೇಲ್ನಡಿಸೆ,
ಮೇಣಶ್ರುಗಳಿಗೋತು, ಸುಸ್ಮಿತಕೆ ತಾಂ ಸೋತು
ಅಧಿಕಾರಸೂತ್ರಮಂ ಬಿಡದೆ ಚಣಮಾತ್ರಮಂ
ಇಂತವಂ ಬಾಳ್ವೊರ ವಿಕಳತೆಗೆ ಸಿಗಲಾರ
ಮಾನಿನಿಗೆ ಸೆರೆ ಬೀಳನಿನ್ ಪಾಳ್ ಬಾಳ್ ಬಾಳ !
ಬೀಳ್ಕೊಡುವೆವಾವಿನ್ನು ; ಬಿರುಗಾಳಿಯಿದು ಏನು ?

ಸ್ಯಾಂಸನ್

ಚೆಲುವುದಿನಗಳಿಗಂತ್ಯ ಪಲವೊಮ್ಮೆ ಗಾಳಿಮಳೆ.

ಮೇಳ

ಆದರೀಗೆಯ್ದಿಬಹ ಬಿರುಗಾಳಿ ಬೇರೆ ತೆರ !

ಸ್ಯಾಂಸನ್

ಪಿರಿದಲ್ಲವೀ ಪಿಡುಗು! [1]ಕೆಡುಗಾಲವುರುಳಿಹುದು. ೧೦೩೦

ಮೇಳ

ಬಯಸದಿರು ನೀನೀಗ ಸೆರೆಗೊಳ್ಳುವಿನಿಸೊಲ್ಲ!
ಬೆದರದಿರು ಜೇನ್ಸುರಿವ ಜಾಣ್ನುಡಿಯ ಜಂಜಡಕೆ.
ಒರಟುನಾಲಗೆಯಿತ್ತ ಬರುತಲಿದೆ.[2] ಗಾಥ
ರಕ್ಕಸ ಹರಪ್ಪನಂ ಬರ್ಪ ಸೊರ್ಕಿಂದರಿವೆ!
ಗರ್ವತುಂಬಿ ದೃಷ್ಟಿ. ಗರ್ವದುನ್ನತಹರ್ಮ್ಯ
ಶಾಂತಿಯಿಂದೈತಹನೆ? ಆವ ಮಾರುತವವನ
ತಳ್ಳುತಿದೆಯಿಲ್ಲಿಗೆ? ನಿಲುಕದೆನ್ನಊಹನೆಗೆ.
ವೈಭವದಿ ತೇಲಿಬಹ ಡಲೈಲಳ್ ತೋರ್ದವೋಲ್
ಚರ್ಯೆಯಿದೆ ಶಾಂತಿಯಲಿ; ಧೂರ್ತತೆಯ ದೃಷ್ಟಿಯಿದೆ!

ಸ್ಯಾಂಸನ್

ಶಾಂತಿ ಮೇಣಶಾಂತಿ ಸಮಮೆನಗೆ ಬರಲವಂ! ೧೦೪೦

ಮೇಳ

ಅವನ ಕಜ್ಜವನರಿವೆ ಶೀಘ್ರದಲಿ, ಬಂದನಿಗೋ.

ಹರಪ್ಪ

ಇವರವೋಲ್ ಬಂದಿಲ್ಲ. ನಿನ್ನವಸ್ಥೆಯ ಕಂಡು
ಮರುಗಲ್ಕೆ ಬರಲಿಲ್ಲ. ಕೆಳೆನಂಟು ಇಲ್ಲದೊಡೆ
ಎನುವೆ ನಾನೀ ಗತಿಯು ಒದಗದಿರಬಹುದಿತ್ತು.
ಗಾಥೆನಗೆ ತಾಯ್ನಾಡು, ಪೆರ್ಮೆಗೀಡಾಗಿರ್ಪ
[1]ಓಗು, ಆನಕ್ ಗಳೊಲ್, [2]ಕಿರಿಯಥಮ್ಮನ್ ಗೆಲ್ದ
ಪಳೆಯಮಿಮ್ ವಂಶದೊಲ್ ಖ್ಯಾತವೆನ್ನನ್ವಯಂ;
ಹರಪ್ಪಾಭಿಧಾನದಿಂ ಕರೆದಪರ್ ಜನರೆನ್ನ.
ನಿನ್ನ ಖ್ಯಾತಿಯು ಪರ್ಬೆ ನಿನ್ನನೀಗಳೆ ಅರಿತೆ.

---

[1] ಸ್ಯಾಂಸನ್ನನ ಕೇಡುಗಾಲ ಟಿಮ್ನ ಮತ್ತು ಸೋರೆಕ್ ವಧುಗಳನ್ನು ವರಿಸಿದಂದೇ ಪ್ರಾರಂಭಗೊಂಡು ಸ್ಯಾಂಸನ್ನನ ಅಂಧ್ಯ ಮತ್ತು ಸೆರೆವಾಸಗಳೊಡನೆ ಮುಗಿದುಹೋಗಿದೆ.

[2] ಗಾಥಿನ ಜಗಜಟ್ಟಿ. ಬೈಬಲ್ಲಿನಲ್ಲಿ ರಾಫಾ ಎಂದು ಉಲ್ಲೇಖವಾಗಿರುವ ರಾಕ್ಷಸನೇ ಹರಪ್ಪನಾಗಿ ಚಿತ್ರಿತನಾಗಿದ್ದಾನೆ ಇಲ್ಲಿ.

ಕೇಳಿಹೆನ್ ವ್ಯರ್ಥದೀ ಶೌರ್ಯದುನ್ನತಿಯುಂ
ಮೇಣ್ ಗೈದ ಕೃತಿಗಳಂ. ಕೊಳಲಿಲ್ಲ ನಂಬುಗೆಯ ೧೦೫೦
ಬರಲಿಲ್ಲ ತೃಪ್ತಿಯುಂ. ನಿನ್ನ ಮುತ್ತಿದ ಸ್ಥಳದಿ
ನಾನಿಲ್ಲದಿರ್ದುದೇ ಇದಕೆ ಪೆರ್ಕಾರಣಂ.
ಸಮರಭೂಮಿಯಲಾಗ ಮೇಣ್ ಮಲ್ಲರಂಗದಲಿ
ತೂಗಬಹುದಿತ್ತೆಮ್ಮ ಉತ್ತುಂಗ ವಿಕ್ರಮವ.
ಬಂದಿರ್ಪೆನಿಲ್ಲಿಗಾನವನ ಕಾಣ್ಕೆಯ ಕೊಳ್ಳೆ
ಆವನಂ ಕುರಿತ ಸೊಲ್ ಎಲ್ಲೆಡೆಯು ಬಳಸಿರಲ್.
ಬಾಹುಗಳನೀಕ್ಷಿಸುತ, ಬಿತ್ತರಿಸೆ ತವಯಶವ
ಉತ್ತರವೊ, ತವಮೂರ್ತಿಯಿಂದಳೆಯೆ ಬಂದಿಹೆನ್!

ಸ್ಯಾಂಸನ್

ತಿಳಿವುದದ ಕಂಡಲ್ಲ; ಅದರ ಸವಿಯನ್ನುಂಡು ೧೦೬೦

ಹರಪ್ಪ

ಆಗಳೇ ಕರೆದಪೆಯ ನಿನ್ನೊಡನೆ ಕಾಳೆಗಕೆ.
ಆಳ ಬಾಳ್, ಕೋಳಗಳ್ ಪಳಗಿಸಿವೆಯೆಂದಿರ್ದೆ.
ವಿಧಿಯೆನ್ನ ನಿಲ್ಲಿಸಿತೆ ಗಾರ್ದಭದ ಗಡ್ಡದಲಿ
ಎಸಗಿದೀ ಚೋದ್ಯಗಳ ಪೆಸರ್ಗೊಂಡ ತಾಣದಲಿ.
ಬೇರೆಯಾಯುಧಗಳಂ ನೀ ಕೊಂಡು ಬರ್ಪವೊಲು
ಮಾಡಿರ್ದೆನಿಲ್ಲದಿರೆ ಕತ್ತೆಯುರುಳಿದ ತೆರದಿ
ಸತ್ತೊರಗುತಿರ್ದೆ ನೀಂ. ಬೀರದೀ ಪೆರ್ಮೆಯಂ
ಫಿಲಿಸ್ಟನ್ ದೇಶಕ್ಕೆ ಮರಳಿ ತಂದಿಡುತಿರ್ದೆನ್
[3]ಅತೊವಲಿ ಕುಲದಲ್ಲಿ ಕಜ್ಜಕುರುಖ್ಯಾತಿಯಲಿ
ಮೊದಲೆನಿಪ ನಿನ್ನಂ ಗೆಲ್ಲುತೀ ಫಿಲಿಸ್ಟನ್ ೧೦೭೦
ಜೀವಪಣ ಕಾಳಗದಿ ಜಯುವಗಳಿಸುತಲಿರ್ದ
ನಿನ್ನಿಂದ, ಸತ್ಯವಿದು. ಕಳೆದೆ ಸಂದರ್ಭವದ
ಆಳಿದಿರಲ್ ತವದೃಷ್ಟಿ, ಅದೃಷ್ಟ ತಳುವಿದುದು.

[1] ಓಗು, ಆನಕ್ ಮತ್ತು ಎಮಿಮ್ ವಂಶಗಳು ಪ್ರಖ್ಯಾತವಾದವು.

[2] ಕಿರಿಯಥವ್ (Kiriathaim) ಜೋರ್ಡನ್ ಪ್ರದೇಶದ ಪಟ್ಟಣ.

[3] ಇಸ್ರೇಲಿವನರು.

ಸ್ಯಾಂಸನ್

ನೀ ಗೆಯ್ಯದಿರ್ದುದನ್ ಗಳಹದಿರು. ಗೆಯ್ಯದಂ.
ನಿನ್ನ ಕೈಯೇ ನಿನಗೆ ಕೊಡುವ ಫಲ ಕಾಣ್ಬೆಯಲ.

ಹರಪ್ಪ

ಅಂಥನೊಡೆ ಕಾಳಗವೆ? ಚೆನ್ನಿಲ್ಲ, ಚೆನ್ನಿಲ್ಲ,
ನಿನ್ನ ಮುಟ್ಟುವ ಮುನ್ನ ನೀಮಿಂದು ಬರಬೇಕು.

ಸ್ಯಾಂಸನ್

ನಿನಗೆ ವಂದ್ಯರೆನಿಪ್ಪ ನಾಡೆರೆಯರೆನಗಿತ್ತ
ಕೊಡುಗೆ ಕಪಟವಿವು; ಸಿಲುಕಿಸಿದ ಕೇಡುಗಳು.
ಸಕಲಬಲಗಳ ಕೊಂಡು ಕೈದಿಲ್ಲದೊರ್ವನನ್ ೧೦೫೦
ಮಲೆತು ನಿಂದರೆಯುವರು? ಸೋಲುತಡಗಿದರು.
ಮನೆಯಲ್ಲಿ, ಕೋಣೆಯಲಿ, ತಲ್ಪದೊಳು ಮಲಗಿರಲು,
ನಿದ್ರೆಗೀಡಾಗಿರಲು ಹೊಂಚಿ.ಪಿಡಿದರೆ? ಇಲ್ಲ!
ಪೊನ್ಗೆಕೊಂಡೀ ಪೆಣ್ಣು ಬೇಕಾಯ್ತು ಕಡೆಗವರ್ಗೆ
ವೈವಾಹ ಬಂಧಮಂ ಕಡಿಯುತ್ತ ಕೊಡಲೆನ್ನ!
ಉಸುರದಿರು ಪುಸಿನೆವವ; ತಾಣವೊಂದನ್ನರಸು.
ಕಿರಿದಿರಲಿ, ಕಟ್ಟಿರಲಿ; ದಿಟ್ಟಿಯೊ, ಪಟ್ಟುಗಳೊ
ಫಲವೃಷ್ಟಿ ನಿನಗೂಡೆ ಎಡೆಯಾಗಕೂಡದುದು!
ತಳೆ ಮಹತ್ಕೈದುಗಳ; ಹೊಳೆ ಶಿರಸ್ತ್ರಾಣದಿಂ;
ಕೊಳ್ಳುಕಂಚಿನ ಕವಚ, ಮೆರೆ ಭುಜದ ಕೀರ್ತಿಯೊಳು; ೧೦೬೦
ಕರರಕ್ಷೆ, ಪದರಕ್ಷೆ, ಉರರಕ್ಷೆಗಳ.ಕೊಳ್ಳು;
ಪಿಡಿ ಭಲ್ಲೆ, ತುಡುಕು, ಹಿರಿ, ಕೂರು ಕರವಾಳಮಂ;
ಸಪ್ತಪದರದ ಭಿಂಡಿವಾಳದೊಳು ಸಜ್ಜಾಗು.
ನಾನಿನ್ನ ಸ್ವಾಗತಿಪೆ ಓಕ್‌ಮರದ ರೆಂಬೆಯಲಿ!
ಬೊಬ್ಬೆಯನು ಪರ್ಬಿಪೆಂ, ಬಡಿದು ತವ ಕರ್ಬುನವ!
ತಡೆಯವಿವು ಪಲಕಾಲ. ನಾನ್ ಕೊಳ್ಳೆ ತವಶಿರವ!
ಕೆಲವೆ ಕಾಲದಿ ನೀನು, ಬದುಕಿರ್ಪ ಸಮಯದೊಳೆ
ಗಾಥಲಿರೆ ಲೇಸೆಂದು ಪಲಬಾರಿ ಚಿಂತಿಸುವೆ!
ಸ್ಯಾಂಸನ್ನನಿಂತೆಸಗುತಿರ್ದನೆಂದೆನುತಿರ್ದೆ
ಸುಕ್ಷೇಮದಿಂದಲ್ಲಿ! ನೋಡೆ ಗಾಥನ್ನೀಗ! ೧೧೦೦

ಹರಪ್ಪ

ಲಘುವಾಗಿ ಪೇಳದಿರು. ಕಳೆಯಿಡಿದ ಕೈದುಗಳ.
ವಿಖ್ಯಾತ ವಿಕ್ರಮರ್ ಕೊಳುಗುಳಕ್ಕೊಯ್ಯುವೀ
ತೊಡವುಗಳ, ಕಾಪುಗಳ, ಮಂತ್ರತಂತ್ರಂಗಳಲಿ,
ಆಭಿಚಾರಂಗಳಲಿ, ಮಾಂತ್ರಿಕನ ಗೆಯ್ಮೆಯಲಿ
ಪಡೆದಿರಲ್ ಶಸ್ತ್ರಗಳ, ಕೊಂಡಿರಲ್ ಬೀರವಂ.
ಪುಟ್ಟಿನಲೆ ಸಗ್ಗದಿಂ ಪಡೆದಿರ್ಪೆಯೆಂಬೆಯಲ!
ಬೀರಕ್ಕೆ ಸಲ್ಲದೀ ರೋಮಗಳಲಡಗಿಹುದೆ?

ಸ್ಯಾಂಸನ್

ಮಾಟವನ್ನರಿಯೆನಾನ್; ತ್ಯಕ್ತಮೆನಗಾ
ಸರ್ವವ್ಯಾಪಕನಲ್ಲೆ ಎನಗಿಹುದು ದೃಢಭಕ್ತಿ.
ಅವನಿತ್ತುದೀ ಶೌರ್ಯಮೆನ್ನ ಪುಟ್ಟಿಂದಿಹುದು ೧೧೧೦
ವ್ಯಾಪಿಸುತ ಸರ್ವತ್ರವೆನ್ನ ಬಂಧಂಗಳಲಿ;
ಸ್ನಾಯುವಲಿ, ಎಲುಬಿನಲಿ, ನಿನ್ನದಕೆ ಮಿಗಿಲಾಗಿ.
ಕಳೆದಿಲ್ಲದುಳಿಸಿರಲು ಕಾಪಿಟ್ಟ ಕೂದಲನು
ತೊಡೆಯೆನೆಂದಡವಿದಂ ತಳೆದಿರ್ಪ ವಚನದಿಂ!
ಸತ್ವವನು ಪರಿಕಿಪೆಯ? ಡೇಗನಾದರೆ ಒಡೆಯ,
ಪೋಗವನ ದೇಗುಲಕೆ, ಬಾಗು ಬೆಂಬಲವೀಯೆ.
ಸಾಗುತ್ತ ನತನಾಗಿ; ತಾಗವನ ಚರಣಗಳ;
ಆವಂಗೆ ಬಿನ್ನವಿಸು ನಿಜಯಶವ ಕಾಯ್ದುಕೊಳ
ಲಿಸ್ರೇಲ ದೈವಮೆನಗಿತ್ತುದೀ ಶೌರ್ಯವೆಂ ೧೧೨೦
ದಾನು ಸಾರುವ ನಿನಗೆ ಮಂತ್ರವೆಂದೆನಿಸುವಿದ
ಮುರಿವಂಶ ಗಣನೀಯವೆಂದು ಮೇಣ್ ಡೇಗನ್ಗೆ
ನಿಜಸಾಸವೀರನಂ, ದೈವಾಂಶಗಳನಿತ್ತು
ಕಳಕಳಿಸಬೇಕೆಂದು ಹೇಳೆನ್ನ ಜೃಂಭಣೆಯ.
ನೀನೆ ಕಂಡಪೆಯಾಗ; ಇಲ್ಲಮಳಲೊಡನರಿವೆ
ಆವ ದೇವನ್ ಧೀರ, ನಿನ್ನವನೊ, ಎನ್ನವನೊ?

ಹರಪ್ಪ

ನಿನ್ನ ದೈವದಮೇಲೆ ಇನ್ನು ಭರವಸೆಯೇಕೆ?
ಎಂತಿರ್ದರೇನವನ್ ನಿನ್ನ ಪರಿಗಣಿಸನಿನ್,

ಕೊಳ್ಳನಿನ್ ; ತಳ್ಳಿಹನ್ ನಿನ್ನಜನರಿಂ ದೂರ.
ಕಳೆದಿಹನ್ ನಿನ್ನನ್ನು ಶತ್ರುಜನ ಕರದಲ್ಲಿ ;
ಕಳೆಯೆ ಕಣ್ಗಳನವರ್ಗೆ ಅನುಮತಿಯನಿತ್ತಿಹನ್ ; ೧೧೩೦
ತೊತ್ತುಗಳ, ಕತ್ತೆಗಳ, ಕೆಳೆತನದ, ಗುಂಪಿನಲಿ
ಒಂದೆ ಸೆರೆ ಬಯಲಲ್ಲಿ, ಎತ್ತಿನೊಲು ದುಡಿಯಲ್ಕೆ
ಕಳುಹಿಹನ್ ಕೋಳದಲಿ—ಉತ್ತಮದ ಕೆಲಸಕ್ಕೆ
ವ್ಯರ್ಥವಾಗಿಹೆಯೆಂದು. ಉಪಯೋಗವಿಲ್ಲದೀ
ಜಗುಲ್ದಿಳಿವರೋಮುದಲಿ. ಬೀರಕಾಳಗಕಿನ್ನು
ನೀಂ ತಗದ ಆಳಾದೆ ! ಹಿರಿದು ಕೂರಸಿಯನ್ನು
ರಣಚಂಡನೆದುರಿಸಯ್ ಒರೆಸವನ ಮನ್ನಣೆಯ !
ನೀನೊಂದಕ್ಕೆ ಶರಣು ನಾಪಿತಾಯುಧಕೆ !

(ಸಶೇಷ)

ಪಿ. ಎಸ್. ಲೀಲಾವತಿ

# ಹರಿದಾಸರ ಕೀರ್ತನೆಗಳಲ್ಲಿ ಮಹಾಭಾರತ

ರಾಮಾಯಣ ಮಹಾಭಾರತಗಳು ಭಾರತದ ಜನರ ನರನಾಡಿಗಳಲ್ಲಿ ಸತತವಾಗಿ ಹರಿಯುತ್ತಿರುವ ಕಾವ್ಯಧಾರೆಗಳು. ಎಷ್ಟು ಮೊಗೆದರೂ ಬತ್ತದ ಈ ಅಕ್ಷಯ ಅಂಬುಧಿಯಿಂದ ತಮ್ಮ ಕಾವ್ಯಕೊಡವನ್ನು ತುಂಬಿಕೊಳ್ಳದ ಕವಿಗಳಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಅಂದಮೇಲೆ ಹರಿದಾಸರು ಅತ್ತ ದೃಷ್ಟಿ ಹರಿಸದೆ ಇರುತ್ತಾರೆಯೇ? ರಾಮಾಯಣ, ಮಹಾಭಾರತ, ಭಾಗವತಗಳ ಕಥೆಯೆಂದರೆ ಹರಿಯ ಹತ್ತವತಾರಗಳಲ್ಲಿ ಮುಖ್ಯವೂ, ಮನಸ್ಸನ್ನು ಅಪಹರಿಸುವಂಥವೂ ಆದ ರಾಮ ಮತ್ತು ಕೃಷ್ಣರ ಕಥೆ. ಹರಿದಾಸರಿಗೆ ವಿಷ್ಣು ಮಹಿಮೆಯನ್ನು ಹಾಡಲು ಇವುಗಳಿಗಿಂತ ಉತ್ತಮ ಭಂಡಾರ ಮತ್ತೆಲ್ಲಿ ದೊರೆಯುತ್ತದೆ? ಆದ್ದರಿಂದಲೇ ದಾಸರಿಗೆ ಈ ಉದ್ಗ್ರಂಥಗಳ ಮೇಲೆ ಅತಿಶಯವಾದ ಮಮತೆ. ತಮ್ಮ ಕೀರ್ತನೆಗಳಲ್ಲಿ ಈ ಗ್ರಂಥಗಳಿಂದ ವಸ್ತು, ಉಪಮೆ, ಉದಾಹರಣೆಗಳನ್ನು ವಿಪುಲವಾಗಿ ಬಳಸಿಕೊಂಡಿದ್ದಾರೆ.

ರಾಮಾಯಣ, ಮಹಾಭಾರತಗಳಿಗೆ ದಾಸರು ಮನಸೋಲಲು ಮತ್ತೂ ಒಂದು ಪ್ರಮುಖ ಕಾರಣವಿದೆ. ದಾಸಪಂಥದವರು ಮಧ್ವಾಚಾರ್ಯರ ಅನುಯಾಯಿಗಳು. ಮಧ್ವಾಚಾರ್ಯರು ಅವತಾರಪುರುಷರೆಂಬ ನಂಬಿಕೆಯಿದೆ. ವಾಯುವಿನ ಅಂಶಸಂಭೂತರಾದ ಇವರು ತ್ರೇತೆಯಲ್ಲಿ ಹನುಮನಾಗಿಯೂ, ದ್ವಾಪರದಲ್ಲಿ ಭೀಮನಾಗಿಯೂ, ಕಲಿಯುಗದಲ್ಲಿ ಮಧ್ವರಾಗಿಯೂ ಜನ್ಮವೆತ್ತಿದರೆಂದು ಹೇಳುತ್ತಾರೆ. ದಾಸರು ತಮ್ಮ ಗುರುಗಳ ಮಹಿಮೆಯನ್ನು ಕೊಂಡಾಡುವಾಗ ಅವರ ಹಿಂದಿನ ಎರಡು ಜನ್ಮಗಳನ್ನು ಸ್ಮರಿಸುವುದು ಅತ್ಯಂತ ಸಹಜವಾಗಿದೆ. ಆ ಎರಡು ಜನ್ಮಗಳ ವೃತ್ತಾಂತವೂ ರಾಮಾಯಣ, ಮಹಾಭಾರತದೊಂದಿಗೆ ಹಾಸುಹೊಕ್ಕಾಗಿ ಬೆರೆತುಹೋಗಿದೆ. ಆದ್ದರಿಂದ ಈ ಎರಡು ಕಾವ್ಯಗಳು ದಾಸರಿಗೆ ಹೆಚ್ಚು ಪ್ರಿಯವಾಗಿವೆ. ಪ್ರಸ್ತುತ, ಹರಿದಾಸರು ಮಹಾಭಾರತವನ್ನು ಹೇಗೆ ಹೇಳಿದ್ದಾರೆ ಎಂದು ನೋಡಬಹುದು.

ದಾಸರು ಮಹಾಭಾರತದಿಂದ ವಿಷಯವನ್ನು ಆರಿಸಿಕೊಳ್ಳುವಾಗ ಬಹು

ಪಟ್ಟಿಗೆ ಕುಮಾರವ್ಯಾಸನನ್ನು ಅನುಸರಿಸಿದ್ದಾರೆ. ಅಂದರೆ ಅವನಂತೆ ಮೊದಲ ಹತ್ತು ಪರ್ವಗಳ ಕಥೆಯನ್ನು ಆಯ್ದುಕೊಂಡು, ಹೆಚ್ಚುಕಡಿಮೆ ನೀರಸವಾದ ಉಳಿದ ಎಂಟು ಪರ್ವಗಳನ್ನು ಬಿಟ್ಟಿದ್ದಾರೆ. ಕುಮಾರವ್ಯಾಸನ ಭಾರತದ ನಾಯಕ ಶ್ರೀಕೃಷ್ಣ. ದಾಸರಿಗೂ ಆತನೇ ನಾಯಕ! ಹರಿದಾಸರಿಗೆ ಬೇಕಾಗಿರುವುದು ಕಥೆಯಲ್ಲ; ಮಹಿಮೆ. ಎಲ್ಲಿ ಶ್ರೀಕೃಷ್ಣನ ಮಹಿಮೆಯಿದೆ, ಎಲ್ಲಿ ಭೀಮನ ಪರಾಕ್ರಮವಿದೆ, ಅಲ್ಲಿ ದಾಸರ ಮನ ನಿಲ್ಲುತ್ತದೆ.

ದಾಸ ಮಹಾಭಾರತದ ಆದಿಪರ್ವದ ಕಥೆ ಭೀಮನ ಬಾಲ್ಯದಿಂದ ಪ್ರಾರಂಭ ವಾಗುತ್ತದೆ. ತ್ರೇತೆಯಲ್ಲಿ ಹನುಮನಾಗಿದ್ದವನು, ದ್ವಾಪರದಲ್ಲಿ "ಕೃಷ್ಣನ ಸೇವೆ ಗೋಸುಗ ಕುಂತಿಜನಾಗಿ ಹುಟ್ಟಿದಾಕ್ಷಣ ಬೆಟ್ಟ ಕುಟ್ಟಿ ಹಿಟ್ಟನೆ ಮಾಡಿದ" ಎಂದು ಗೋಪಾಲದಾಸರು ಹೇಳಿದರೆ, ಪ್ರಾಣೇಶದಾಸರು "ಘನಗಿರಿಯೊಳಗೆ ಕುಂತಿ ನಿನ್ನೆತ್ತಿಕೊಂಡಿರಲು | ಧ್ವನಿ ಮಾಡೆ ಹುಲಿ ತಾಯಿ ನಡುಗಿ ಬಿಸುಡೇ ತನುವು ನಿನ್ನದು ಸೋಂಕಿ ನಗ ವಡದು ಶತಶೃಂಗ | ವೆನಿಸಿಕೊಂಡಿತೊ ದ್ವಾಪರದಿ" ಎನ್ನು ತ್ತಾರೆ. ಭೀಮ ಬಿದ್ದ ರಭಸಕ್ಕೆ ಅವನಿಗೆ ಪೆಟ್ಟಾಗುವುದಿರಲಿ, ಬೆಟ್ಟವೇ ಒಡೆದು ಹೋಯಿತಂತೆ! ಇದೇ ವಿಷಯವನ್ನು ಶ್ರೀಪಾದರಾಯರು "ಕರದಿಂದ ಶಿಶುಭಾವ ನಾದ ಭೀಮನ ಬಿಡಲು ಗಿರಿಯೊಡೆದು ಶತಶೃಂಗವೆಂದೆನಿಸಿತು" ಎಂಬುದಾಗಿ ಹೇಳು ತ್ತಾರೆ. ವಿಜಯದಾಸರು ಮಾತ್ರ ಸ್ವಲ್ಪ ಭಿನ್ನವಾಗಿ ಹೇಳಿದ್ದಾರೆ: "ಗಿರಿಯ ಮಧ್ಯದಿ ದಿವಿಜಗೂಳಿ (?) ವದ್ಧ ಚರಣ, ಮರದ ಮೇಲೆ ಇದ್ದವರ ಕೆಡಹಿದ ಚರಣ." ಮಗುವಾಗಿದ್ದಾಗಲೇ ಬೆಟ್ಟವನ್ನು ಹುಡಿಮಾಡಿದ ಭೀಮ "ಲೋಕದೊಳು ಮನುಜರಾ ಶಿಶುಗಳಂದದಿ ಬೆಳದು | ಪಾಕಶಾಸನಿ ಯಮಜಯಮರ ಜನನೀ | ಯಾ ಕೂಡಿಕೊಂಡು ಇಭಪುರಿಗೈದಿ ಮೋದದಲೀ | ಸಾಕಿಸಿಕೊಂಡಿ ಅಂಬಿಕೆಯ ಮಗನಿಂದ | ಚಿಕ್ಕವರೊಡನೆ ಚಂಡು ಬೊಗರಿ ಈಸಿಕೆ ವೋಟ | ತೆಕ್ಕೆ ಮುಷ್ಟಿ ಮರಗಳ ಏರುವಲ್ಲೀ | ಸೊಕ್ಕಿದವನಿವನೆಂದು ಆವಾಗಲೆಲ್ಲರಿಗೆ | ಬಿಕ್ಕಿ ಬಾಯ್ದೆರವಂತೆ ಮಾಡಿ ತೋರಿಸಿದೀ" (ಪ್ರಾಣೇಶದಾಸರು). ಹೀಗೆ ಬಾಲ್ಯವನ್ನು ತುಂಟಾಟದಲ್ಲಿ ಕಳೆಯುತ್ತಾನೆ.

ಕೌರವರು, ಪಾಂಡವರು ಮಕ್ಕಳಾಟಿಕೆಯಲ್ಲಿ ಕಾಲಕಳೆಯುತ್ತಿರುವಾಗಲೇ ಭೀಮ ಮತ್ತು ದುರ್ಯೋಧನರಲ್ಲಿ ವೈರ ನೊಳಕೆಯೊಡೆದು ಬೆಳೆಯತೊಡಗುತ್ತದೆ. ಕೌರವ ಭೀಮನನ್ನು ಕೊಲ್ಲಲು ವಿಧವಿಧವಾದ ಸಂಚನ್ನು ಹೂಡುತ್ತಾನೆ. "ಆ ಕೌರವ ಕಪಟದಲ್ಲಿ ಕೊಟ್ಟ | ವಿಷದ ಕಜ್ಜಾಯವ ತಿಂದು ಜೀರ್ಣಿಸಿಕೊಂಡ ವಿಷಮ ಬಲಾಢ್ಯ ಮೂರುತಿ" ಎಂದು 'ಮಧ್ವೇಶ ಕೃಷ್ಣ' ಎಂಬ ಅಂಕಿತದ ದಾಸರು ಹೇಳಿದರೆ, ಪ್ರಾಣೇಶದಾಸರು "ಅಹಿತರಾದವರು ನೀರೊಳಗೆ ಕೆಡಹಲು ಎದ್ದಿ | ಅಹಿಗಳಂ ಕಚ್ಚಿಸಲು ನೋಯದಿದ್ದೀ | ಸಹಿಸದಲೆ ವಿಷಹಾಕೆ ಬದುಕಲಿಕೆ ಹೊರ ಗ್ಹಾಕೆ | ಮಹಾಮೋಸ ಮಾಡೆ ಗೆದ್ದು ಧರೆಯೊಳು ಮೆರಡೇ" ಎಂದು ಕೌರವನು

ಮಾಡಿದ ಕೆಡಕನ್ನೆಲ್ಲಾ ಒಟ್ಟಿಗೆ ಹೇಳುತ್ತಾರೆ. ಗೋಪಾಲದಾಸರು "ಕೊಟ್ಟ ವಿಷವನುಂಡು ಅಹಿಗಳನೊರಸಿ ಕೈಕಟ್ಟಿ ಜಲದೊಳಿಡೆ ಬಂದೆ" ಎಂದರೆ, ಶ್ರೀಪಾದ ರಾಯರು "ಕುರುಪ ಗರಳವನಿಕ್ಕೆ ನೆರೆವುಂಡು ·ತೇಗಿ ಹಸಿದುರಗಗಳ ಮೇಲೆ ಬಿಡಲವನೊರಸಿದೆ" ಎಂದು ಹೇಳುತ್ತಾರೆ. ಪುರಂದರದಾಸರು "ಮರೆಸಿ ಕೌರವ ನಿತ್ತ ವಿಷವುಂಡು ತೇಗಿ ಹಸಿದುರಗಗಳ ಮೇಲೆ ಬಿಡಲವನೊರಸಿದೆ| ಸುರನದಿ ಯೊಳಗೆ ನೂಕೆ ಭರದಲೆದ್ದು ಖಳನ| ಪರಿಪರಿಯ ಭಂಗಪಡಿಸಿದೆಲ ಭಾಪುರೆ" ಎಂಬುದಾಗಿ ಉದ್ಗಾರವೆತ್ತುತ್ತಾರೆ.

ಭೀಮನನ್ನು ಕೊಲ್ಲಲು ತಾನು ಮಾಡಿದ ಉಪಾಯಗಳೆಲ್ಲಾ ವಿಫಲವಾದಾಗ ದುರಳ ದುರ್ಯೋಧನ ಪಾಂಡವರನ್ನೆಲ್ಲಾ ನಾಶಮಾಡಲು ಅರಗಿನ ಮನೆಯನ್ನು ನಿರ್ಮಿಸುತ್ತಾನೆ. ಈ ಸಂದರ್ಭವನ್ನು ಮಧ್ವಪತಿ ದಾಸರು "ದುರುಳ ದುರ್ಯೋಧನನು ನಿಮ್ಮನು ಅರಗಿನ ಮನೆಯಲ್ಲಿ ಪೊಗಿಸಲು| ಹಿರಿಯ ಧರ್ಮಾದಿ ಗಳ ಕೈಕೊಂಡ್ಹರುಷದಿಂದಲಿ ತೆರಳಿ ಬಂದು ...." ಎಂದರೆ, ಶ್ರೀಪಾದರಾಯರು "ಅರಗಿನ ಮನೆಯಲ್ಲಿ ಉರಿಯನಿಕ್ಕಲು ವೀರ ಧರಿಸಿ ಜಾನ್ಹವಿಗೊಯ್ದ ತನ್ನನುಜರ" ಎಂಬುದಾಗಿ ಭೀಮ ತನ್ನ ಸೋದರರನ್ನು ರಕ್ಷಿಸಿದ್ದನ್ನು ನೆನೆಯುತ್ತಾರೆ.

ಅರಗಿನರಮನೆಯಿಂದ ಪಾರಾದ ಮೇಲೆ ಅಸುರನ ಕಾಟ ಒದಗುತ್ತದೆ. "ಒಡಹುಟ್ಟಿದವರು ರಾತ್ರಿಯಲಿ ಮಹಾ ಅಡವಿಯೊಳಂದು ನಿದ್ರೆಯಲಿ ಇರೆ ಹಿಡಂಬಕಾಸುರನು ರೋಷದಲಿ ಬರೆ ಕಡುವೇಗದಿಂದ ನೋಡುತಲಿ ಆಹಾ ಬಿಡದೆ ಅವನ ಸಂಗಡ ಕಾದಿ ಮಡುಹಿದೆ ತಡೆಯದೆ ಜನನಿ ಸಂಗಡಿಗರ ಪೊರೆದೈಯ" ಎಂದು ಗೋಪಾಲದಾಸರು ಶೂರ ಭೀಮನನ್ನು ಹಾಡಿ ಹೊಗಳುತ್ತಾರೆ. ಮತ್ತೊಂದು ಕಡೆ "ಹಿಡಿಂಬನನು ಕೊಂದು ಧಿಟ್ಟ ಘಟೋತ್ಕಚನ ಪಡೆದು ದನುಜೆ ಯಲ್ಲಿ" ಎಂದರೆ, ಪ್ರಾಣೇಶದಾಸರು "ಸೋಕಿಯಸುರಿಯ ಮಗನ ಪಡೆದು ಖಳನಂ ತರಿದು" ಎಂದು· ಹೈಡಿಂಬನ ಜನನವನ್ನು ಸೂಚಿಸಿದ್ದಾರೆ. ವೆಂಕಟ ದಾಸರು "ನುತಿಸಿ ದಿನ ಅತಿಶಯ ಕಳದರು ರತಿಗೊದಗಲಿಲ್ಲೆಂದು ಪವಮಾನ.... ....ನೆಟ್ಟನೆ ಇರುಳೊಳು ನೆರದು ಹಿಡಿಂಬಿಯೊಳ್ ಪುಟ್ಟಸಿದ್ಯೋ ಮಗನ ಪವಮಾನ" ಎಂಬುದಾಗಿ ಮಿಕ್ಕ ದಾಸರಿಗಿಂತ ಹೆಚ್ಚು ಸ್ವಾರಸ್ಯವಾಗಿ ಹೇಳಿದ್ದಾರೆ. ತ್ರೇತೆಯಲ್ಲಿ ಹನುಮ ಬ್ರಹ್ಮಚಾರಿಯಾಗಿದ್ದು ಒಂಟಿಬಾಳಿನಿಂದ ಬೇಸರಗೊಂಡು ದ್ವಾಪರದಲ್ಲಿ ಭೀಮನಾಗಿ ಅವತರಿಸಿದಾಗ ದ್ರೌಪದಿಯಿದ್ದರೂ ಸಹ ಹಿಡಿಂಬೆಯನ್ನು ವರಿಸಿ ಮಗನನ್ನು ಪಡೆದನಂತೆ!

ಬಕವಧೆ ದಾಸರನ್ನು ಹೆಚ್ಚು ಆಕರ್ಷಿಸಿದೆ. ಭೀಮನ ಸಾಹಸ, ಬಂಡಿ ಅನ್ನವನುಂಡ ಭೀಮಾಕಾರ, ಆ ಭೀಮಾಕಾರದ ಒಳಗಿರುವ ಮೃದುಹೃದಯ ಇವು ದಾಸರ ಮನವನ್ನು ವಿಶೇಷವಾಗಿ ಸೆಳೆದಿವೆ. ಗೋಪಾಲದಾಸರು "ನಿರುತ ಏಕಚಕ್ರಪುರದಿ ಮಹಾದುರುಳ ಬಕನು ದಿನದಿನದಿ ಒಬ್ಬ ನರನ ಗ್ರಾಸವಕೊಂಡು

ಮದದಿ ಇರುತಿರಲು ನೀ ಕೇಳುತ್ತ ಮುದದಿ ಆಹಾ ಕರುಣಿಸಿ ವಿಪ್ರನ ತರಳಗೊಲಿದು ಬಕಾಸುರನ ಸಂಹರಿಸಿ ನೀ ಮೆರೆದ್ಯೊ ವೃಕೋದರ" ಎಂದು ಇಡೀ ವೃತ್ತಾಂತ ವನ್ನು ಸಂಕ್ಷಿಪ್ತವಾಗಿ ಹೇಳುತ್ತಾರೆ. 'ಶ್ರೀನಿಧಿ ವಿಠಲ' ಎಂಬ ಅಂಕಿತದ ದಾಸರು "ಏಕಚಕ್ರದಲ್ಲಿ ಬಕಗೆಂದ್ಹಾಕಿದ ಗ್ರಾಸದಲಿ | ಶಾಖದೆಸಲ ಬಿಡದೇಕ ತುತ್ತು ಮಾಡಿ ಭೀಕರ ದೈತ್ಯನವಲೋಕಿಸದ್ಹೊಡದೆಲೊ" ಎಂದು ಆಶ್ಚರ್ಯಪಡುತ್ತಾರೆ. "ಏಕಚಕ್ರಾನಗರದಲ್ಲಿ ಇದ್ದೂ | ಬೇಕೆಂದು ನೀನಾಗಿ ಪೋಗಿ ಬಕನನು ಕೊಂದಿ ಈ ಕುಂಭಿನಿಯೊಳು ನಿನಗಿದಿರಾರು ದೇವಾ" ಎಂದು ಪ್ರಾಣೇಶದಾಸರು, "ಪುರದೊಳು ಭಿಕ್ಷಾನ್ನ ಬೇಡುತ ತಿರುಗಿದ ಚರಣ, ದುರುಳ ಬಕನ ಒದ್ದ ದುಸ್ತರದ ಚರಣ" ಎಂದು ವಿಜಯದಾಸರು, "ಭಂಡಿ ಅನ್ನವನುಂಡಿತು ಕೂಸು ಬಕನ ಪ್ರಾಣವ ಕೊಂಡಿತು ಕೂಸು" ಎಂದು ಪುರಂದರ ದಾಸರು ವಿಧವಿಧವಾಗಿ ಬಕವಧೆಯನ್ನು ಹೇಳಿದ್ದಾರೆ.

ಆದಿಪರ್ವದಲ್ಲಿ ಬಕವಧೆಯಾದ ಮೇಲೆ ಭೀಮನ ಸಾಹಸ ಕಥನಕ್ಕೆ ಅವಕಾಶ ಕಡಿಮೆಯಾಗುತ್ತದೆ. ಆದ್ದರಿಂದ ದಾಸರು ಸಹ ಮೌನ ವಹಿಸುತ್ತಾರೆ. ಕಮಲೇಶದಾಸರು ಮಾತ್ರ ಒಂದು ಇಡೀ ಕೀರ್ತನೆಯಲ್ಲಿ, ದ್ರೌಪದಿ ಸ್ವಯಂವರ ಮಂಟಪಕ್ಕೆ ಬಂದದ್ದನ್ನು ವರ್ಣಿಸಿದ್ದಾರೆ. "ಬಂದಳಾ ದ್ರುಪದನಂದನೆ ಸಖಿಯರ ಸಂದಣಿಯೊಳು ಸಭೆಗೆ ವಲ್ಯದಲಿ" ಎಂದು ಕೀರ್ತನೆ ಪ್ರಾರಂಭವಾಗುತ್ತದೆ. "ಎಡಬಲ ಝುಡಿವ ಮಡದಿಯರ ಗಡಣೆಯಲಿ ಜವ್ವನೆಯರು ಪಿಡಿದಿಹ ಕಡುಬೆಡಗಿನ ಬಿಳಿಗೊಡೆಗಳ ನೆಳಲಿನಲಿ ಕೈವಾರದವರ ಗಡಿಬಿಡಿಯ | ಕೈವುಡಿಯ | ಬಿಡು ಮುಡಿಯ ಭಟರುಗಳ ಕಡೆಯ ನಡಿಸುತಾ | ನುಡಿಸುತಾ | ಸಂದಣಿ ಬಿಡಿಸುತಾ | ತಡಿಸುತಾ ದ್ರೌಪದಿ ಕಡೆಗಣ್ಣಿನ ಕುಡಿನೋಟದ ಮಿಂಚಿನ ಪೊಡವಿಪತಿಗಳಿಗೆ ಬಡೆವವೊಲು ಸಭೆಯೊಳು ದ್ರೌಪದಿ ಬರುತ್ತಾಳೆ. "ಅತಿರಥ ಮಹಾರಥರುಗಳ ಮನಮೋಹದ ನೋಟದ ಸತಿ"ಯಾಗಿರುವ ದ್ರುಪದ ನಂದನೆ "ಸಿರಿವರಗೆ ಸನ್ನುತಿಸುತಾ ಯಾದವರಿಗೆ ಅತಿಹಿತನಿಗೆ ತಾ ನಿಜ ಮೋಹಿನಿ ಮೂರುತಿಯಂತೆ" ತೋರುತ್ತಿದ್ದಾಳೆ. ಇಂತಹ ದ್ರೌಪದಿ "ಕಮಲೇಶ ವಿಠಲಗೆ ಶಿರಬಾಗುತ ತಾ ನಮಿಸುತಲೀ" ಬಂದಳು ಎಂಬುದಾಗಿ ದಾಸರು ಕೀರ್ತನೆಯನ್ನು ಮುಗಿಸಿದ್ದಾರೆ. ಮುಂದಿನ ಸ್ವಯಂವರದ ಕಥೆ ದಾಸರ ಕೀರ್ತನೆಗಳಲ್ಲಿ ಕಂಡುಬರುವುದಿಲ್ಲ. ಶ್ರೀಪಾದರಾಯರು ಮಾತ್ರ ಒಂದು ಕಡೆ "ಬಲ್ಲಿದ ಸುರರ ಗೆಲಿದು ದ್ರೌಪದಿಯ ಕೈ ಪಿಡಿದು ಎಲ್ಲ ಸುಜನರಿಗೆ ಹರುಷವ ಬೀರಿದ" ಎಂದು ನ್ಯಾಯವಾಗಿ ಅರ್ಜುನನಿಗೆ ಸಲ್ಲಬೇಕಾಗಿದ್ದ ಗೌರವ ವನ್ನು ಭೀಮನಿಗೆ ಕೊಟ್ಟಿದ್ದಾರೆ.

ಸಭಾಪರ್ವದ ಕಥೆ ರಾಜಸೂಯಯಾಗದಿಂದ ಪ್ರಾರಂಭವಾಗುತ್ತದೆ. ಇಲ್ಲಿಯ ಮುಖ್ಯ ಪ್ರಸಂಗಗಳಲ್ಲೊಂದಾದ ಜರಾಸಂಧನ ವಧೆ ಭೀಮನಿಂದ ಆಗು ವುದರಿಂದ ದಾಸರು ಅದನ್ನು ಹೆಚ್ಚಾಗಿ ಉಲ್ಲೇಖಿಸಿದ್ದಾರೆ. ಗೋಪಾಲದಾಸರು

"ವೀರ ರಾಯರನೆಲ್ಲ ಸೆರೆಯನಾಳುವಂಥ ಕ್ರೂರ ಜರೆಯಸುತನೊಡನೆ ಯುದ್ಧವ ಮಾಡಿ ಚೀರಿ ಬೊಬ್ಬಿಡುತಲಿ ಅವನ ಸೀಳಿದ ಶಬ್ದ ವಾರಿಜಜಾಂಡ ವಡೆದುದ ಕಿವ್ಮಡಿಯಾಗೆ ಮೂರೇಳು ದಿಕ್ಕು ಜಯಿಸಿ ರಾಜಸೂಯಯಾಗ ಪೂರೈಸಿ ಕೃಷ್ಣಗೆ ಅಗ್ರಪೂಜೆಯ ಮಾಡಿದೆ" ಎಂಬುದಾಗಿ ವಿವರವನ್ನು ನೀಡುತ್ತಾರೆ. "ವಜ್ರ ಪ್ರಸ್ಥದಲಿ ಬಂದೂ ಪಾಪಿ ಜರಜನ ಕೊಂದು ರಾಜಸೂಯವ ಮಾಡಿ ನೀ ಪಾಲಿಸಿದೆಯವನಿ ಸದ್ಧರ್ಮದಿಂದಾ" ಎಂದು ಪ್ರಾಣೇಶದಾಸರು ರಾಜಸೂಯ ಯಾಗ ಮಾಡಿದ ಕೀರ್ತಿಯನ್ನು ಭೀಮಸಿಗೆ ಸಲ್ಲಿಸಿದ್ದಾರೆ. ಅಚಲಾನಂದರು "ರುದ್ರಬ್ರಹ್ಮರ ವರದಲಾವಧ್ಯನಾದ ಜರಾಸಂಧನ | ಅಧ್ವರ್ಯದಲಿ ಪಸುವಂದದಿ | ಮರ್ದಿಸಿ ದುಷ್ಟ ಖಳರ ಸೀಳಿದ್ಯೊ | ಖೇದರಾದ ನೃಪರ ಬಿಡಿಸಿದೆ" ಎಂದು ಭೀಮನ ಪ್ರತಾಪವನ್ನು ಬಣ್ಣಿಸಿದ್ದಾರೆ. ವಿಜಯದಾಸರು "ನರನಾಥ ರಾಜ ಸೂಯಯಾಗ ಮಾಡಲು ಪೋಗಿ ಧರೆಯೆಲ್ಲ ತಿರುಗಿ ವಂದಿಸಿಕೊಂಡ ಚರಣ, ಪುರುಷಾಮೃಗನ ಕೈಲಿ ಪಿಡಿಸಿಕೊಂಡ ಚರಣ" ಎಂದರೆ, ಶ್ರೀಪಾದರಾಯರು "ರಾಜಕುಲ ವಜ್ರನೆನಿಸಿದ ಮಾಗಧನ ಸೀಳಿ ರಾಜಸೂಯ್ಯಾಗವನು ಮಾಡಿ ಸಿದನು" ಎಂದು ಯಾಗ ಮಾಡಿಸಿದ ಪುಣ್ಯವನ್ನು ಭೀಮನಿಗೆ ಕೊಡುತ್ತಾರೆ. ಪುರಂದರದಾಸರು "ಚಕ್ರಧರನೆ ಜರೆತನಯನೊಳು ಕಾದಿ | ಸಿಕ್ಕದೆ ಓಡಿದ ನೆಂದೆನಿಸಿ | ಭಕ್ತ ಭೀಮನಿಂದ ಸೀಳಿಸಿದೆಯೊ ಇಂಥ ಠಕ್ಕು ಆಟಗಳ ಎಲ್ಲಿ ಕಲಿತೆಯ್ಯ" ಎಂದು ಜರಾಸಂಧನ ವಧೆಗೆ ಕೃಷ್ಣನೇ ಕಾರಣವೆನ್ನುತ್ತಾರೆ. ಇನ್ನೊಂದು ಕಡೆ "ನರನ ಮಗಧೇಶ ನಿರಾಕರಿಸಿ ನಿನ್ನನು ರಣಕೆ | ವರಿಸೆ ಹರಿಗಿದಿರಲಾ ಖಳನ ಮುರಿದೆ" ಎಂದು ಭೀಮ ಪರಾಕ್ರಮವನ್ನು ಮೆಚ್ಚಿ, ಮತ್ತೊಂದು ಕಡೆ "ಹರಿಯೊಲಿದು ಭೀಮನಿಗೆ ಪರಿಪೂರ್ಣವರವಿತ್ತ | ಹರನೊಲಿದು ಜರಾಸಂಧ ಹತನಾದುದರಿಯ" ಎಂದು ಹರಿಯ ಮೇಲ್ಮೆಯನ್ನು ಹಾಡಿದ್ದಾರೆ.

ಶ್ರೀಪಾದರಾಯರು "ರಾಜಸೂಯವ ಧರ್ಮರಾಜ ಮಾಡುತ ಅಗ್ರಪೂಜೆ ಗರ್ಹರು ಯಾರು ಹೇಳೆನ್ನಲು ಭಾಜನನು ಸದ್ಗುಣನು ಕೃಷ್ಣನೊಬ್ಬನೆ ಎಂದು ರಾಜಿತ ಸುರವ್ರತ ನುಡಿದ ನಿಜವರಿಯ" ಎಂದೂ, ವಾದಿರಾಜರು "ರಾಜಸೂಯ ಯಾಗದಲ್ಲಿ ರಾಜರಾಜರಿರಲು ಧರ್ಮರಾಜಸುತನು ಈತನೆ ಸಭಾಪೂಜೆಗರ್ಹನೆನಿಸಿ ದಾತ" ಎಂಬುದಾಗಿಯೂ ಶ್ರೀ ಕೃಷ್ಣನ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದಾರೆ. ಪುರಂದರದಾಸರು "ಕಟಿಯಲಿ ಕರವಿಟ್ಟನು ಜಗದೀಶನು" ಎಂದು ಪ್ರಾರಂಭ ವಾಗುವ ಕೀರ್ತನೆಯಲ್ಲಿ "ರಾಜಸೂಯಯಾಗದಲ್ಲಿ ರಾಜೇಶ್ವರ | ರಾಜರು ಮೊದಲಾದ ಸುರರೆಲ್ಲರು ಭೋಜನವನೆ ಮಾಡಿದೆಂಜಲು ವೊದಲಾದ್ದು ರಾಜೀ ವಾಕ್ಷನು ಎತ್ತಿದಾಯಾಸದಿಂದಲೋ" ಎಂದು ಕೇಳಿದರೆ, ಪ್ರಸನ್ನ ವೆಂಕಟದಾಸರು ಒಂದು ಕಡೆ "ನೀ ಧರ್ಮನ ಮುಖದೊಳೆಂಜಲ ಪಾತ್ರೆ ತೆಗೆದೆ" ಎನ್ನುತ್ತಾರೆ. ಹೀಗೆ ಹರಿಯು ಎಂಜಲು ಎತ್ತಿದ ಎಂಬುದರ ವಾಚ್ಯಾರ್ಥ ಸತ್ಯವಿರಲಾರದು! ತನ್ನ

ಭಕ್ತರಿಗಾಗಿ ಭಗವಂತ ಏನು ಬೇಕಾದರೂ ಮಾಡುತ್ತಾನೆ ಎಂಬುದರ ಸೂಚನೆ ಇದಾಗಿರಬಹುದು.

ಕಪಟ ದ್ಯೂತವನ್ನು ಕುರಿತು ಶ್ರೀಪಾದರಾಜರು "ಸತ್ಯಕ್ಕೆ ಧರ್ಮನು ಲೆತ್ತವನಾಡಲು ಅರ್ಥಭಂಡಾರವೆಲ್ಲವನು ಸೋತು" ಎಂದೂ, ಮತ್ತೊಂದು ಕಡೆ "ಕೌರವರು ಪಾಂಡವರು ಲೆತ್ತವಾಡಿ ಸೋತರಂತೆ ರಾಜ್ಯವನ್ನು ಬಿಟ್ಟರಂತೆ ರಂಗ ವಿಠಲ ಬರಬೇಕಂತೆ" ಎಂದೂ ಹೇಳಿದ್ದಾರೆ. ಕನಕದಾಸರು "ಮುನ್ನಿನ ವೈರದಿ ಕಡು ಸ್ನೇಹವ ಮಾಡಿ ಉನ್ನಂತ ಲೆತ್ತ ಪಗಡೆಯಾಡಿಸಿ ತನ್ನ ಕುಹಕದಿಂದ ಕುರು ಬಲವನು ಕೊಂದ ಗನ್ನಗತಕ ಶಕುನಿಯೊ" ಎಂದು ಹೇಳಿ, ಈ ದ್ಯೂತಪ್ರಸಂಗಕ್ಕೆ ಶಕುನಿಯ ಕಪಟವೇ ಮೂಲವೆಂದು ಸ್ಪಷ್ಟಪಡಿಸಿದ್ದಾರೆ.

ಪಗಡೆಯಲ್ಲಿ ಪಾಂಡವರು ಸೋತಮೇಲೆ ದ್ರೌಪದಿಯನ್ನು ತುಂಬಿದ ಸಭೆಯಲ್ಲಿ ಅವಮಾನಗೊಳಿಸಿದ ದಾರುಣಪ್ರಸಂಗ ಜರುಗುತ್ತದೆ. ರಾಜಕುವರಿಯಾಗಿ ಮಹಾರಾಣಿಯಾಗಿ ಬಾಳಿ, ಮಹಾಶೂರರಾದ ಐವರು ಪತಿಗಳನ್ನು ಪಡೆದಿದ್ದ ಅವಳನ್ನು ಯಾರೂ ಕಾಯಲಾಗದಿದ್ದ ಆ ದುಃಸ್ಥಿತಿಯಲ್ಲಿ ಕೃಷ್ಣನ ಕರುಣೆ ಕಾಯುತ್ತದೆ. ಹರಿಯ ಕೃಪೆಗೆ ಇದಕ್ಕಿಂತ ಮಿಗಿಲಾದ ಉದಾಹರಣೆ ಬೇಕೆ? ಹರಿದಾಸರು ವೈವಿಧ್ಯಮಯರೀತಿ ಈ ಪ್ರಸಂಗವನ್ನು ಮತ್ತೆ ಮತ್ತೆ ಹಾಡಿದ್ದಾರೆ. ಅವುಗಳಲ್ಲಿ ಕೆಲವನ್ನು ಮಾತ್ರ ನೋಡಬಹುದು: ಪ್ರಾಣೇಶದಾಸರು "ದ್ಯೂತನಾಡಿದ ಸಮಯದಲ್ಲಿ ದ್ರೌಪದಿಯುಳನು ಪಾತಕಿ ವಸನವೆಳೆಯೇ ಕೋಪದಿಂದ| ಘಾತಿಸುವೆ ನೆಂದಬ್ಬರಿಸಿ ಪಲ್ಗಡಿದು ಲಕ್ಷ್ಮೀನಾಥನಿಚ್ಛೆಗೆ" ಸುಮ್ಮನಾದ ಎಂದು ಭೀಮನಿಗೆ ಬಂದ ಕೋಪವನ್ನು, ಅವನ ಅಸಹಾಯಕ ಸ್ಥಿತಿಯನ್ನು, ಹೇಳಿದ್ದಾರೆ. ಪ್ರಸನ್ನ ವೆಂಕಟದಾಸರು "ನಿನ್ನನುಜೆಯುಳ ಮಾನವ ಕೊಂಡೆನೆಂದು| ಕುನ್ನಿ ಕೌರವನೆಳೆಯೇ ಕೃಷ್ಣನಾ ಪ್ರಾಸನ್ನ ವೆಂಕಟೇಶ ನಿನ್ನ ಕೂಗಿ ಕರೆಯೆ| ಮನ್ನಿಸಿ ಬಣ್ಣ ಬಣ್ಣದ ವಸ್ತ್ರ ನೀಡಿಸಿದೆ" ಎಂದಿದ್ದಾರೆ. ಗೋಪಾಲದಾಸರು "ಮುಡಿ ಹಿಡಿದೆಳತಂದು ನಡು ಸಭೆಯಲಿ ಉಟ್ಟ ಉಡುಗೆ ಸೆಳೆಯೆ ಬಾಲೆ ನಡುಗೆ ಒಡೆಯರೈವರ ದೃಢ ತಿಳಿದು ನಿನ್ನಡಿಗಳಿಗೆ ಮೊರೆಯಿಡಲು ಪಾರ್ಥರ ಮಡದಿಗಕ್ಷಯ ಉಡುಗೆ ತೊಡಿಸಿದ" ಎಂದು ಪ್ರಾಸಬದ್ಧವಾದ ಪದಗಳಲ್ಲಿ ಚಿತ್ರಿಸಿದ್ದಾರೆ. ವಾದಿರಾಜರು "ತರಳೆ ದ್ರೌಪದಿ ಸೀರೆಯ ಸೆಳೆಯುತಿರೆ ಹರಿ ನೀನೆ ಗತಿಯೆನಲು ಪರಮಪುರುಷ ಭವಭಂಜನ ಕೇಶವ ದುರುಳರ ಮರ್ದಿಸಿ ತರುಣಿಗೆ ವರವಿತ್ತ" ಎಂದು ಹೇಳಿದರೆ, ವ್ಯಾಸರಾಯರು "ತರುಣಿ ದ್ರೌಪದಿ ಸೀರೆಯ ದುಶ್ಶಾಸನ ಸರಸರ ಸೆಳೆಯುತಿರೆ ಕರುಣಿ ತನ್ನೊಡತಿ ಯೊಡನೆ ಆಡುವುದ ಬಿಟ್ಟು ತ್ವರದಿ ಅಕ್ಷಯವಿಟ್ಟ ಸಿರಿ ಕೃಷ್ಣರಾಯ" ಎಂದು ಕೃಷ್ಣನಿಗೆ ಕೃಷ್ಣೆಯ ಮೇಲಿದ್ದ ಪ್ರೀತಿಯನ್ನು ವ್ಯಕ್ತಪಡಿಸಿದ್ದಾರೆ. ಪುರಂದರ ದಾಸರು "ಕುರುಪತಿಯು ದ್ರೌಪದಿಯ ಸೀರೆಯನು ಸೆಳೆಯುತಿರೆ| ಕರುಣಿ ಹಾ ಕೃಷ್ಣ ಎಂದೊದರೆ ಕೇಳಿ| ಭರದಿಂದ ಅಕ್ಷಯಾಂಬರವಿತ್ತ ಹಸ್ತಿನಾಪುರಿಗು

ದ್ವಾರಾವತಿಗು ಕೂಗಳತೆಯೆ" ಎಂದು ಹೇಳಿ, ಭಕ್ತ ಭಗವಂತರ ನಡುವೆ ದೂರವಿಲ್ಲ ಎನ್ನುತ್ತಾರೆ. ಈ ಪ್ರಸಂಗವು ಹರಿನಾಮದ ಮಹಿಮೆಯನ್ನೂ, ಹರಿಯ ಕಾರುಣ್ಯ ವನ್ನೂ ಎತ್ತಿ ತೋರುವುದರಿಂದ ದಾಸರಿಗೆ ಬಹು ಪ್ರಿಯವಾಗಿದೆ. ಅವರು ನೂರಾರು ಕಡೆ ಇದೇ ಪ್ರಸಂಗವನ್ನು ಮತ್ತೆ ಮತ್ತೆ ಹೇಳಿದ್ದಾರೆ. ಅವುಗಳಲ್ಲಿ ಹೆಚ್ಚು ವ್ಯತ್ಯಾಸ ವಿಲ್ಲದಿರುವುದರಿಂದ ಅವುಗಳನ್ನೆಲ್ಲಾ ಬಿಟ್ಟು, ಪುರಂದರದಾಸರು ಇಡೀ ಈ ಕಥೆ ಯನ್ನು ಮನಕಲಕುವಂತೆ ನಾಟಕೀಯವಾಗಿ ಚಿತ್ರಿಸಿರುವ ಒಂದು ದೊಡ್ಡ ಕೀರ್ತನೆ ಯನ್ನು ಮಾತ್ರ ಗಮನಿಸಬಹುದು. "ರಂಗನೊಲಿದ ನಮ್ಮ ಕೃಷ್ಣನೊಲಿದ ಅಂಗನೆ ದ್ರೌಪದಿಗೆ ವಸ್ತ್ರ ಅಕ್ಷಯವೆಂದನು"–ಹೀಗೆ ಕೀರ್ತನೆ ಪ್ರಾರಂಭವಾಗುತ್ತದೆ. "ಕರಿಯಪುರದ ನಗರದಲ್ಲಿ ಕೌರವರು ಪಾಂಡವರು| ಧರೆಯ ಒಡ್ಡಿ ಜೂಜನಿಟ್ಟು ಲೆತ್ತವಾಡಲು| ಪರಮ ಪಾಪಿ ಶಕುನಿ ತಾನು ಪಾಶದೊಳ್ ಪೊಕ್ಕಿರಲು| ಧರ್ಮ ರಾಯ ಧಾರಿಣಿ ದ್ರೌಪದಿಯ ಸೋತನು| ಸೋತನೆಂದು ದುರ್ಯೋಧನ ಸಂತೋಷ ದಿಂದಲಿ ತನ್ನ| ದೂತರಟ್ಟಿ ಪಾಂಡವರ ಬದುಕು ತರಿಸಿದ| ಜಾತಿ ಮುತ್ತು ಚಿನ್ನ ಬೆಳ್ಳಿ ಆನೆ ಕುದುರೆಗಳ ಸಹಿತ ಭೀತಿಯಿಲ್ಲದಲೆ ಭಂಡಾರಕಿಟ್ಟನು". ಇಷ್ಟಾದಮೇಲೆ ದ್ರೌಪದಿಯತ್ತ ಅವನ ಕಣ್ಣು ತಿರುಗಿತು. "ತನ್ನ ಮಾನವರಿಗೆ ತಿಳಿಯಹೇಳಿದ ಮುದ್ದು ಮುಖದ ದ್ರೌಪದಿಯ ಮುಂದೆ ಮಾಡಿ ತನ್ನಿರೆಂದು.... ಮುದ್ರೆ ಮಾನವರು ಬಂದು ದ್ರೌಪದಿಯ ಮುಂದೆ ನಿಂತು, ಅಮ್ಮ ಕೇಳೆ ಅರಸುಗಳು ಅಚ್ಚೆ ಪಗಡೆ ಪಂಥವಾಡಿ ಹಮ್ಮಿಲಿಂದ ಜೂಜನಿಟ್ಟು ಲೆತ್ತವಾಡಲು| ಧರ್ಮರಾಯ ಸೋತನೆಂದು ಸತ್ಯವಚನ ಕೌರವಂಗೆ| ನಿಮ್ಮ ಇಂಬು ನಿಲವು ಕರಿಯ ಕೊಟ್ಟ ರೆಂದರು". ಇದನ್ನು ಕೇಳಿದ ದ್ರೌಪದಿ "ಪಟ್ಟಪದವಿ ಆವರಿಗಾಗಿ ಬಡವರಾಗಿ ಇದ್ದೇವೆಂದರೆ| ಕೆಟ್ಟಪಗಡೆ ಪಂಥ ಜೂಜಿನ್ನೆಲ್ಲಿ ಒದಗಿತು| ದುಷ್ಟ ಕೌರವನು ಎನ್ನ ಲಜ್ಜೆ ನಾಚಿಕೆಯ ಕಂಡು| ಭ್ರಷ್ಟ ಮಾಡುವನು ಎಂದು ಬಳಲಿ..... ಬಾಗಿ ಬಳುಕಿ ಬಿಕ್ಕಿ ತನ್ನ ಕಣ್ಣನೀರು ಸುರಿವುತಲಿ| ಮಾಗಿಯ ಕೋಗಿಲೆಯಂತೆ ಕಾಯ ನೊಲವುತ| ಆಗ ಕೃಷ್ಣಸಂಘ್ರಿಗಳ ಅಂತರಂಗದಲ್ಲಿ ನೆನದು| ಸಾಗಿ ಸಾಗಿ ಹೆಜ್ಜೆ ಯಿಡುತ ಸಭೆಗೆ ಬಂದಳು" ಕ್ರೂರ ಕೌರವನ ಈ ಕೃತ್ಯವನ್ನು ನೋಡಿ ಸಭೆ ಯಲ್ಲಿದ್ದವರೆಲ್ಲಾ ನಾಚಿ ತಲೆ ಬಾಗಿದರು. ಆದರೆ "ಚಂದದಿಂದ ದುರ್ಯೋಧನ ಚದುರೆ ದ್ರೌಪದಿಯ ಕೂಡೆ| ಮುಂದನರಿಯದೆ ಮುಗುಳುನಗೆಯ ಮಾತನಾಡಿದ| ಹಿಂದೆ ಸ್ವಯಂವರದಲ್ಲಿ ಐವರಿಗೆ ಆದ ಬಾಲೆ| ಇಂದು ಎನ್ನ ಪಟ್ಟದರಸಿಗೊಪ್ಪಿ ತೆಂದನು| ಮಲ್ಲಿಗೆಯ ಮುಡಿಯ ನಾರಿ ಮುದ್ದು ಮುಖದ ವೈಯಾರಿ| ಚಲ್ಲೆಗಂಗಳ ದ್ರೌಪದಿ ಬಾರೆಯೆಂದನು" ಆಗ ದ್ರೌಪದಿ ಅವನನ್ನು ಹಂಗಿಸುತ್ತಾಳೆ: "ಬಿಲ್ಲು ಎತ್ತಲಾರದವನೆ ಭಂಡಾರವ ಕಾದಿದ್ದವನೆ| ಹಲ್ಲು ಕೀಳುವರೈವರು ಬೇಡವೆಂದಳು" ಹೀಗೆಯೆ ಮಾತು ಮುಂದೆ ಸಾಗುತ್ತದೆ. ಕೊನೆಗೆ ಕೌರವ "ಅಡವಿ ತಿರುಕರೈವರಿಗೆ ಮಡದಿಯಾಗುವುದು ಸಲ್ಲ| ತೊಡೆಯ ಮೇಲೆ ಒಪ್ಪುವಂತೆ ಬಾರೆಯೆಂದನು"

ಇದನ್ನು ಕೇಳಿದ ದ್ರೌಪದಿ ಕೋಪದಿಂದ "ಬೆಡಗು ಮಾತನಾಡದಿರೋ ಭೀಮ ಸೇನನ ಗಡೆಯು ನಿನ್ನ| ತೊಡೆಯ ಮೇಲೆ ಒಪ್ಪುವುದು ಬೇಡವೆಂದಳು." ಆಗ ದುರುಳ ದುರ್ಯೋಧನ ದೃಷ್ಟಿಯಿಂದಲೇ ಉಟ್ಟ ಸೀರೆಯ ಸೆಳೆಯುವಂತೆ ದುಶ್ಯಾಸ ನನಿಗೆ ಸನ್ನೆಮಾಡಿದ. "ದುರುಳ ದುಶ್ಯಾಸನನು ಬಂದು ದ್ರೌಪದಿಯ ಮುಂದೆ ನಿಂದು| ಕರವ ಪಿಡಿದು ಸೆರಗ ಹಿಡಿದು ನಿರಿಯ ಸೆಳೆಯಲು| ಮರುಳು ಆಗದಿರೊ ನಿನ್ನ| ರಕ್ತದೊಳು ಮುಡಿಯ ಅದ್ದಿ| ಕರುಳು ದಂಡೆಯನೆ ಮಾಡಿ ಮುಡಿವೆ ನೆಂದಳು." ಆದರೂ ಆ ದುಷ್ಟ ಕೇಳದೆ ನಿರಿಯ ಸೆಳೆಯಲು "ನಿಲ್ಲೊ ನಿಲ್ಲೊ ಪಾಪಿ ನಿನ್ನ ನಾಲಿಗೆಯ ಕಿತ್ತು ಎರಡು ಪಲ್ಲಿನಲ್ಲಿ ಕೇಶನ್ನಿಕ್ಕಿಕೊಂಬೆನೆಂದಳು" ಅವಳ ವೀರ ಪ್ರತಿಜ್ಞೆಗೂ ಬೆದರಿಕೆಗೂ ಕಿವಿಗೊಡದೆ ಇರಲು "ಪನ್ನಗಶಯನ ಕೃಷ್ಣ ಕಾಯೊ" ಎಂದಳು. ಕೂಡಲೆ "ಸಾರಿದವರ ಪೊರೆವ ಕರುಣಿ ಸಾಗರಶಯನ ಕೃಷ್ಣ| ನಾರಿ ದ್ರೌಪದಿಗೆ ವಸ್ತ್ರ ಅಕ್ಷಯವೆಂದನು", ಮೇರುಪರ್ವತದಂತೆ ಬಣ್ಣದ ಸೀರೆಯ ರಾಶಿ ಬೆಳೆಯಿತು. "ಒಂದು ಎರಡು ಮೂರು ನಾಲ್ಕು ಕೋಟಿ ಸಂಖ್ಯೆ ಸೀರೆ ಸುಲಿದು| ನೊಂದು ಬೆಂದು ದುಶ್ಯಾಸನನು ನಾಚಿ ಕುಳಿತನು." ಭಗವಂತನ ಅಪಾರ ಮಹಿಮೆಯನ್ನು ಕಂಡು ಎಲ್ಲರೂ ಸ್ತುತಿಗೈದರು. ಅನಂತರ "ಮೂಢ ಕೌರವನ ಕೂಡ ಮಾನಿನಿ ದ್ರೌಪದಿಯು ಲೆತ್ತ| ವಾಡಿ ತನ್ನ ಪತಿಗಳೈವರ ಗೆದ್ದಳು." ಮಹಾಭಾರತದಲ್ಲಿ ದ್ರೌಪದಿಯು ಧೃತರಾಷ್ಟ್ರನಿಂದ ವರವನ್ನು ಪಡೆದು ಪತಿಗಳನ್ನು ದಾಸ್ಯದಿಂದ ಬಿಡಿಸಿಕೊಂಡಳು ಎಂದು ಹೇಳಿದೆಯೇ ಹೊರತು ಪಾಂಚಾಲಿ ಕೌರವ ನೊಡನೆ ಪಗಡೆಯಾಡಿದ ವಿಷಯವಿಲ್ಲ. ಪುರಂದರದಾಸರು ಮಾಡಿರುವ ಈ ವ್ಯತ್ಯಾಸ ಉಚಿತವಾಗಿದೆ ಎನಿಸುತ್ತದೆ. ಮಗನಿಂದ ಆಟದಲ್ಲಿ ಸೋತು ತಂದೆಯ ವರವನ್ನು ಪಡೆದು ಗೆಲ್ಲುವುದು ನ್ಯಾಯವಾಗಲಾರದು. ಮತ್ತೆ ಆಟವಾಡಿ ಗೆದ್ದ ದ್ರೌಪದಿಯ ಸಾಹಸವನ್ನು ಮೆಚ್ಚಲೇ ಬೇಕು! ಹೀಗೆ ಪತಿಗಳನ್ನು ಮರಳಿ ಪಡೆದು "ಕೇಸು ಮುಡಿಯ ಕಟ್ಟಿದಳು ಕೈಯಕಾಲ ಮಣ್ಣನೊರೆಸಿ| ಸಾಸಿರ ನಾಮದ ಒಡೆಯ ಸುರರ ಪಾಲಕ.... ಕೃಷ್ಣ ಎನ್ನ ವಹಿಸಿ ಕಾಯಿದಿ ಎಂದು ಸಂತೋಷ ದಿಂದ ದ್ರೌಪದಿಯು ಮನೆಗೆ ಬಂದಳು."

ಈ ವಸ್ತ್ರಾಪಹರಣದ ಕಥೆಯನ್ನು ಪುರಂದರದಾಸರಂತೆ ಕನಕದಾಸರು ಸಹ ಒಂದು ಸುದೀರ್ಘ ಕೀರ್ತನೆಯಲ್ಲಿ ಸೊಗಸಾಗಿ ಹಿಡಿದಿಟ್ಟಿದ್ದಾರೆ. "ಶುಂಡಾಲ ಪುರದೊಳಗೆ ಲ್ಯಂಡ ದುರುಯೋಧನನು ಪಾಂಡುನಂದನರೊಡನೆ ಕಪಟ ಜೂದವ ನಾಡಿ ಗಂಡರೈವರ ಮುಂದೆ ದೃಪದನಂದನೆಯಳ ಶರಗು ಲೆಂಡ ದುಶ್ಯಾಸನ ಪಿಡಿದು ........ಶೀರಿಯನು ಶಳಿವುತಿರೆ" ನೊಂದ ದ್ರೌಪದಿಯು "ಪಾವಕನ ಜ್ವಾಲಿಯ ಹೊಕ್ಕು ಹೊರಡಲಿಬಹುದು, ಹಾವುಗಳ ಹೆಡೆ ಹಿಡಿದು ಯಳದೆಳದು ತರಬಹುದು ........ಗರಳವನು ಶೇವಿಸಲಿಬಹುದು........ಜೀವವಿದ್ದಂತೆ ಲಜ್ಜೆಯ ಕಳಶಿಕೊಳ ಲಾರೆ" ಎಂದು ದುಃಖಿಸುತ್ತಾಳೆ. ಅವಳನ್ನು ರಕ್ಷಿಸುವವರು ಯಾರಿದ್ದಾರೆ?

"ಪತಿಗಳೈವರು ಸತ್ಯವ್ರತದಿ ಸುಮ್ಮನಿಹರು, ಅತಿ ಕ್ಲೇಶಬಡುತಿಹರು ವಿದುರ ಭೀಷ್ಮಾದಿಗಳು, ಸುತನ ಮ್ಯಾಲಿನ ಮೋಹದಲಿ ಅಂಜಿ ಹೇಳದಲಿಹ ಗತವಿಲೋಚನ ಮಾವಾ". ಇಂತಹ ಪರಿಸ್ಥಿತಿಯಲ್ಲಿ ದ್ರೌಪದಿಗೆ ಗತಿಯಾರು ? ಗಂಡಸರ ಮಾತಿರಲಿ, ಹೆಂಗಸರಾದರೂ ಅವಳ ಸಹಾಯಕ್ಕೆ ಬಂದರೆ ? ಗಾಂಧಾರಿ, ಭಾನುಮತಿಯರನ್ನು ಬಿಡಿಸುವಂತೆ ಕೇಳಿಕೊಂಡಳು. ಅವರಿಂದ ಉತ್ತರ ಬಾರದಿರಲು, ನೆರೆದಿದ್ದ ಸಭೆಯನ್ನು ಕುರಿತು "ನೀವೆಲ್ಲ ಪೆತ್ತುದಿಲ್ಲವೆ ಯನ್ನಪೋಲ್ವ ಹೆಂಮ್ಮಕ್ಕಳನು ?" ಎಂದು ಪ್ರಶ್ನಿಸುತ್ತಾಳೆ. ಎಂಥವರ ಮನವಾದರೂ ಕರಗಿಹೋಗುವ ಸನ್ನಿವೇಶವಿದು. ಆದರೇನು, ಅಲ್ಲಿ ಯಾರೂ ಅವಳ ದೂರನ್ನು ಕೇಳುವವರಿಲ್ಲ. ಅಸಹಾಯಕಳಾದ ದ್ರೌಪದಿ "ಮಾರಿದರು ಧರ್ಮದೇವತೆಗೆನ್ನ ವಲ್ಲಭರು" ಎನ್ನುತ್ತಾಳೆ. ಇಲ್ಲಿ ಕುಮಾರವ್ಯಾಸನ "ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು" ಎಂಬ ಮಾತನ್ನು ನೆನೆಯಬಹುದು. ಸಭೆಯಲ್ಲಿದ್ದವರಿಂದ ತನ್ನ ಮಾನರಕ್ಷಣೆ ಸಾಧ್ಯವಿಲ್ಲ ಎಂಬ ಅರಿವುಂಟಾದೊಡನೆ ಆ ಕೃಷ್ಣೆ "ಕ್ಷೀರದೊಳಗದ್ದು ನೀರೊಳಗದ್ದು ನೀನೆ ಗತಿ ನಾರಾಯಣನೆ ರಕ್ಷಿಸೊ" ಎಂದು ಕೃಷ್ಣನ ಮೊರೆಹೊಗುತ್ತಾಳೆ. ದ್ವಾರಕಾ ಪುರದಲ್ಲಿ ರುಕ್ಮಿಣಿ ಸತ್ಯಭಾಮೆಯರೊಡನೆ ಏಕಾಂತಭವನದೊಳಿದ್ದ ಹರಿಯ ಕಿವಿಗೆ ಭಕ್ತಳ ಕೂಗು ಕೇಳಿಸಿದ್ದೇ ತಡ, "ಕೊಂತಿನಂದನರ ಸತಿ ವುಟ್ಟುದಕ್ಷಯವಾಗಿ ಸಂತೋಷಗೊಳಲೆಂದು ವರವಿತ್ತ." ಅವನ ಕರುಣೆಗೆ ಸಮವುಂಟೆ? "ಶಳವುತಿದ್ದನು ಖಳನು ಬೆಳವುತಿದ್ದುವು ಶೀರೆ........ಯಳದೆಳದು ಪಾಪಾತ್ಮ ಬಳಲಿಯಿಳೆಯೊಳು ಬಿದ್ದನು". ಇದನ್ನು ಕಂಡು ಶಕುನಿ ದುರ್ಯೋಧನರ ಮೋರೆ ಕಪ್ಪಾಯಿತು. ಆಗಲೂ ಕೌರವ ಕೇಡುಬುದ್ಧಿಯನ್ನು ಬಿಡಲಿಲ್ಲ! ಹತ್ತಿರವಿದ್ದ ದೂತನನ್ನು ಕರೆದು ರಾಶಿಯಾಗಿ ಬಿದ್ದಿದ್ದ ವಸ್ತ್ರವನ್ನು ಬೊಕ್ಕಸಕ್ಕೆ ಸಾಗಿಸು ಎಂದ! ಆಗ "ಶಿಟ್ಟಿನಲಿ ದ್ರೌಪದಿಯು ಕಂಣ್ದೆರದು ನೋಡಿದಳು ಬೆಟ್ಟದಂತ್ರಟ್ಟರ್ದ ವಸ್ತ್ರ ರಾಶಿಗಳೆಲ್ಲ ಸುಟ್ಟಗ್ನಿ ಹೊಗೆ ಸೂಶಿ ರಾಜಸಭೆ"ಯನ್ನು ಮುಸುಕಿತು. ರೌದ್ರಳಾದ ಮಾನಿನಿ "ಕಟ್ಟಾಳು ಭೀಮಶೇನನ ರಣಗದೆಯಿಂದ ಕುಟ್ಟಿ ಬಿಸಾಡಲಿ ನಿನ್ನ ತೊಡಿಗಳೆರಡನು" ಎಂಬುದಾಗಿ ಶಾಪ ಕೊಟ್ಟಳು. ಅವಳಿಟ್ಟ ನುಡಿ ತಪ್ಪಲುಂಟೆ? ಇದನ್ನೆಲ್ಲಾ ಕಂಡು "ಹರುಷಬಟ್ಟರು ಮನದಿ ವಿದುರ ಭೀಷ್ಮಾದಿಗಳು ಸುರರು.... ....ಜಯ ಜಯವೆಂದು ದ್ರೌಪದಿಯ ಶಿರಿಮುಡಿಗೆ ಸುರಶಿದರು ಪೂಮಳೆಗಳಾ." ಮತ್ತೊಂದು ಕಡೆ ದುರ್ಯೋಧನನಿಗೆ ಬರಲಿರುವ ಕೇಡನ್ನು ಸೂಚಿಸುವಂತೆ "ಮೂಡಿದವು ಪ್ರತಿಸೂರ್ಯ ಧೂಮಕೇತುಗಳು ವೋಡ್ಯಾಡಿದವು ಹದ್ದು ಕಾಗೆಗಳು ಗಗನದಲೀ". ಈ ಅಪಶಕುನಗಳನ್ನು ಕಂಡ ಜನರು "ಕೇಡು ಕೌರವಗಾಗದಿರದೆಂದು ನಿಶ್ಚೈಸಿ ವೋಡಿ ಮನೆಗಳು ಪೊಕ್ಕರು". ದ್ವಾರಕೆಯಲ್ಲಿ ಕೃಷ್ಣನು ಮುಂದಿನ ಭವಿಷ್ಯವನ್ನು ರುಕ್ಮಿಣಿ ಸತ್ಯಭಾಮೆಯರಿಗೆ ಹೇಳುತ್ತಾನೆ. "ಕೇಳೆನ್ನ ಭಾಷೆಯ ಮುಂದೆ ಅರ್ಜುನಗೆ ನಾವೆ ಸಾರಥಿಯಾಗಿ ಸಲಹುವೆವು ಅವರೆನ್ನ ಪ್ರಾಣ". ಮಂಗಳ

ದೊಂದಿಗೆ ಕನಕದಾಸರು ಕೀರ್ತನೆಯನ್ನು ಮುಗಿಸಿದ್ದಾರೆ. ಕನಕದಾಸರು ಹಾಗೂ ಪುರಂದರದಾಸರು ಚಿತ್ರಿಸಿರುವ ದ್ರೌಪದಿಯ ವಸ್ತ್ರಾಪಹರಣದ ಈ ಪ್ರಸಂಗವು ಅತ್ಯಂತ ಸ್ವೈಜವಾಗಿ ಮೂಡಿಬಂದಿದೆ. ಈ ಭಾಗದಲ್ಲಿ ಕರುಣರಸ ಮಡುಗಟ್ಟಿ ನಿಂತಿರುವುದನ್ನು ಕಾಣಬಹುದು. ಇಲ್ಲಿ ವ್ಯಕ್ತವಾಗಿರುವ ದಾಸರ ಪ್ರತಿಭೆ, ಕಾವ್ಯಶಕ್ತಿಗಳನ್ನು ಮೆಚ್ಚದಿರಲು ಸಾಧ್ಯವಿಲ್ಲ. ಕೌರವನ ಕೇಡಿಗತನ, ದುಶ್ಯಾಸನನ ನೀಚತನ, ಭೀಷ್ಮಾದಿಗಳ ದುವ್ಮ್ಯಾನ, ಪಾಂಡವರ ಅಸಹಾಯಕ ಸ್ಥಿತಿ, ದ್ರೌಪದಿಯ ದಾರುಣ ಪರಿಸ್ಥಿತಿ, ಭಕ್ತಕುಟುಂಬಿಯಾದ ಕೃಷ್ಣನ ಕೃಪಾ ದೃಷ್ಟಿ, ಪರ್ವತೋಪಮವಾಗಿ ಬಿದ್ದ ಸೀರೆಗಳ ಅದ್ಭುತ ದೃಶ್ಯ, ಮಾನಿನಿಯ ಮಾನ ಕಾಯ್ದ ಹರಿನಾಮದ ಮಹಿಮೆ—ಇವುಗಳು ಓದುಗರ ಮನವನ್ನು ಸೂರೆಗೊಳ್ಳು ತ್ತವೆ.

ಪಗಡೆಯಾಟದಲ್ಲಿ ಪರಾಭವ ಹೊಂದಿದ ಪಾಂಡವರು ವನವಾಸ ಅನುಭವಿಸಲು ಅರಣ್ಯಕ್ಕೆ ನಡೆಯುತ್ತಾರೆ. ಹನ್ನೆರಡು ವರ್ಷಗಳ ದೀರ್ಘ ಕಥೆಯನ್ನು ದಾಸರು ಬಹಳ ಸಂಕ್ಷಿಪ್ತವಾಗಿ ಹೇಳಿ ಮುಗಿಸಿದ್ದಾರೆ. "ಸಮರಾಂಗದಲಿ ಇವರ ಹೀಗೆ ಸವರುವೆನೆಂದು। ಸುಮನಸಾರಾಧ್ಯ ಬಾಹುಗಳೆತ್ತಿ" ಭೀಮ ವನವಾಸಕ್ಕೆ ನಡೆದ ನಂತೆ. ಪ್ರಾಣೇಶದಾಸರು "ಕಾನನದಿ ಕಿರ್ಮೀರನ ಕೊಂದು ಋಷಿಯಿಂದ। ಮಾನನ ಕೈಕೊಂಡು ಮತ್ತು ಮುಂದೆ ಆ ನಗದಿ ಬಹುಕಾಲ ಸೇರಿಕೊಂಡಿದ್ದಂಥ ದಾನವರ ಮಡುಹಿದ" ಎಂದು ಭೀಮನ ಪ್ರತಾಪವನ್ನು ಕೊಂಡಾಡುತ್ತಾರೆ. ಗೋಪಾಲದಾಸರು "ಅರಣ್ಯದಲಿ ಪೋಗಿ ಮಣಿವಂತ ಕಿಮ್ಮೀರ ಕ್ರೂರ ಜಟಾಸುರಾದಿ ದೈತ್ಯರ" ಕೊಂದ ಎಂತಲೂ, ಶ್ರೀಪಾದರಾಯರು "ಮಾನನಿಧಿ ದ್ರೌಪದಿಯ ಮನದಿಂಗಿತವರಿತು ದಾನವರ ಸವರಬೇಕೆಂದು ಬೇಗ ಕಾನನವ ಪೊಕ್ಕು ಕಿಮ್ಮೀರಾದಿಗಳ ತರಿದು ಮಾನಿನಿಗೆ ಸೌಗಂಧಿಕ ಕುಸುಮ ತಂದ" ಎಂದೂ, ಪುರಂದರದಾಸರು "ದ್ರೌಪದಿಗೆ ಸೌಗಂಧಿಕ ಕುಸುಮವನು ತರಪೋಗ। ಲಾ ಪಥ ದೊಳಸುರ ಮಣಿಮಂತ ಕದನವ ಮಾಡೆ। ಕೋಪದಿಂದವನ ಮರ್ದಿಸಿದನತಿ ಬಲವಂತನಾ ಪುರುಷ" ಎಂದೂ, ಪ್ರಾಣೇಶದಾಸರು "ಒಂದು ಪುಷ್ಪ ಬೀಳೆ। ನಿನ್ನರಸಿ ಇದು ಯೆನಗೆ ಇಷ್ಟವೆನಲವಳ ನುಡಿ ಮನ್ನಿಸುತ ಪೋಗಿ ಮಣಿಮಂತ ನೊಂಚಿಸಿದೇ" ಎಂದೂ ಭೀಮನ ಶೌರ್ಯವನ್ನು ಹೊಗಳುತ್ತಾರೆ. ಪುರಂದರ ದಾಸರು ಒಂದು ದೀರ್ಘ ಕೀರ್ತನೆಯಲ್ಲಿ ಭೀಮ ಮತ್ತು ಹನುಮಂತನಿಗೆ ನಡೆದ ಸಂಭಾಷಣೆಯನ್ನು ಹೇಳಿದ್ದಾರೆ. "ನರವರ್ಯ ಭೀಮಸೇನ ನಾರಿಗೆ ಕುಸುಮ। ತರುವೆನೆನುತ ಬೇಗ ತೆರಳಿದನು। ಕರಿರಾಜನಂತೆ ದೊಡ್ಡ ಕಾನನ ಮಧ್ಯ। ಗಿರಿವರವನೇರಿದನೆ ಕುರುಪುಂಗವ" ಎಂದು ಕೀರ್ತನೆ ಪ್ರಾರಂಭವಾಗುತ್ತದೆ. ಗದೆಯನ್ನು ಹಿಡಿಯದೆ "ಧನುಸು ಬಾಣಂಗಳ ಧರಿಸಿಕೊಂಡು ಮನೋವೇಗದಿಂದ ಬಂದು ಮಹಾಬಲಸಿಂಧು। ಹನುಮನೆಂಬುವನ ಕಂಡ ಹರುಷದಿಂದ." ಕದಳಿಯ

ಬನದಲ್ಲಿ ಸಿದ್ರೆ ಮಾಡುತ್ತಿದ್ದ ಅವನನ್ನು "ಕಪಿಯೇಳೆಂದ ಭೀಮ." "ಭೀಮನ ಮಾತ ಕೇಳಿ ಭೀತಿಯಿಲ್ಲದೆ ಹನುಮ....ಯಾರ ಕಂದನೋ ನೀನು| ಪ್ರೇಮ ದಿಂದಲಿ ಎನಗೆ ಪೇಳೆಂದನಾಗ". ಅವನು ಕೇಳಿದ್ದೆ ಸಾಕು ಎಂದು ಇವನು ಪ್ರತಾಪ ಕೊಚ್ಚಿದ! "ಕುರುರಾಯವಂಶದಿ ಕುಂತಿಯ ಜಠರದಿ| ಮರುತರಾಯರಿಂದ ಜನಿಸಿದ ಭೀಮನು| ದುರುಳ ಹಿಡಿಂಬಕ ದುಷ್ಟ ಕಿರ್ಮೀರನ| ಕರುಳುಗಳ ಬಗಿದು ಬಂದವ ನಾನು|." "ಭೀಮನ ಈ ಬಡಾಯಿ ಕೇಳಿ ಹನುಮ ಸುಮ್ಮನಿರು ತ್ತಾನೆಯೇ?" ಹನುಮ ಕಾಣೆಲೊ ನಾನು ಹರಿರೂಪ ರಾಘವನ| ಮನವರಿತು ಸೇವೆಮಾಡಿದ ದೂತನು| ವನಧಿಯ ದಾಟಿ ಬಂದೆ ವನಜಾಕ್ಷಿಗುಂಗುರವಿತ್ತೆ| ವನವ ಕಿತ್ತೆ ಲಂಕೆ ಉರಿ ಮಾಡಿದೆ" ಎಂದು ತನ್ನ ಶೌರ್ಯವನ್ನು ಹೇಳಿಕೊಂಡ. ಇದನ್ನು ಕೇಳಿದ ಭೀಮ ದಂಡಪ್ರಣಾಮ ಮಾಡಿ "ಶೀತಳ ಸರೋವರ ಶೀಘ್ರದಿಂದಲಿ ದಾಟಿ| ನೂತನ ಕುಸುಮಂಗಳ ನೂರಾರು ತಂದು| ಪ್ರೀತಿಯಿಂದಲಿ ತನ್ನ ಪ್ರೀಯಳಿಗಿತ್ತನು| ಭ್ರಾತೃಗಳ ಪಡೆದ ಭಾಗ್ಯವೇನೆಂದ." ಹೀಗೆ ಪುರಂದರದಾಸರು ಸೋದರರ ಶೌರ್ಯ ಮತ್ತು ಪ್ರೇಮವನ್ನು ಸುಂದರವಾಗಿ ಚಿತ್ರಿಸಿದ್ದಾರೆ.

'ಅರಣ್ಯಪರ್ವ'ದಲ್ಲಿ ಭೀಮನ ಪರಾಕ್ರಮವನ್ನು ಬಿಟ್ಟರೆ ಹರಿಲೀಲೆಯನ್ನು ಪ್ರಕಟಗೊಳಿಸುವ ದುರ್ವಾಸ ಪ್ರಸಂಗವನ್ನು ಒಂದೆರಡು ಕಡೆ ದಾಸರು ಉಲ್ಲೇಖಿ ಸಿದ್ದಾರೆ. ಜಗನ್ನಾಥದಾಸರು "ಗ್ರಾಸವನು ಬೇಡೆ ದುರ್ವಾಸ ಮುನಿಗನ್ನಾನಾ ಯಾಸದಿಂ ತತ್ಕಾಲದಲಿ ಕಲ್ಪಿಸಿ ಆ ಸಂಯಮಿಗೆ ಉಣಿಸಿ ದಣಿಸಿದ ಮಹಾದಾತ" ಎಂದು ಶ್ರೀಕೃಷ್ಣನ ಅಪಾರ ಮಹಿಮೆಯನ್ನು ಕೊಂಡಾಡಿದರೆ, ಪುರಂದರದಾಸರು "ಯುವತಿ ದ್ರೌಪದಿಯಂತೆ ಶಾಕಪಾತ್ರೆಯೊಳೊಮ್ಮೆ ಮೆಲಿಸಲಿಲ್ಲ" ಎಂದು ಕೊರಗು ತ್ತಾರೆ. ವನವಾಸದಲ್ಲಿದ್ದಾಗ ಭೀಮನ ಮೈಗೆ ಸರ್ಪ ಸುತ್ತಲು ಅದನ್ನು ಧರ್ಮರಾಯ ಬಿಡಿಸಿದ್ದನ್ನು ಪ್ರಾಣೇಶದಾಸರು "ದ್ವೈತವನದಲಿ ಬಂದು ಮೃಗ ಬೇಟೆಯಾಡೆ ಪುರು| ಹೂತ ಪದವಾಳ್ದವನು ಮೈಗೆ ಸುತ್ತೇ ನೀ ತವಕ ಬೀಳದಲೆ ಅವನ ಪುನೀತನ ಮಾಡಿ| ಖ್ಯಾತಿ ತಂದಿತ್ತಿ ಅಂತಕ ಸುತನಿಗೆ" ಎಂದು ಹೇಳಿದ್ದಾರೆ.

ಭೀಮನ ಭೀಮಬಲವನ್ನು ಎತ್ತಿ ತೋರಿಸುವ ಕೀಚಕವಧೆಯ ಪ್ರಸಂಗ ವಿರಾಟಪರ್ವದ ಮುಖ್ಯ ಘಟನೆ. ಶ್ರೀಪಾದರಾಯರು "ದುರುಳ ಕೀಚಕ ತಾನು ದ್ರೌಪದಿಯ ಚೆಲುವಿಕೆಗೆ ಮರುಳಾಗಿ ಕರೆಕರೆಯ ಮಾಡಲವನ ಗರುಡಿಯಾ ಮನೆಯೊಳಗೆ ಪರೆಸಿ ಅವನಸನ್ವಯವ ಕುರುಪನಟ್ಟಿದ ಮಲ್ಲಕುಲವ ಸದೆದ" ಎಂತಲೂ, ಪುರಂದರದಾಸರು "ಉಚ್ಚಸ್ಥಾನ ವಿರಾಟನ ಮನೆಯಲಿ ಯಾಚಕ ರೂಪದೊಳ್ಳಿವರು ತಾವು| ಪಾಚಕ ವೇಷವ ಧರಿಸಿ ಪಾಕವ ಆಚರಿಸುತಲಿರಲು ನೀಚನ ಕೃತ್ಯವ ದ್ರೌಪದಿ ಬಂದು| ಸೂಚಿಸಲು ನೀ ಕೋಪದಿ ಸರ್ವ| ಕೀಚಕ ಮೊದಲವನನುಜರನೆಲ್ಲ| ಹೀಚಿ ಬಿಸಾಡಿದ ಮಹಿಮನೆ" ಎಂಬುದಾಗಿಯೂ

ಭೀಮನನ್ನು ಮೆಚ್ಚಿದ್ದಾರೆ. ಗೋಪಾಲದಾಸರು ಇನ್ನೂ ಹೆಚ್ಚಿನ ವಿವರವನ್ನು ನೀಡುತ್ತಾರೆ. "ಖ್ಯಾತ ಮತ್ಸ್ಯನ ಮನೆಯಲ್ಲಿ ಅಜ್ಞಾತ ವಾಸದಲಿರುತಿರಲು ಮನಸೋತು ಕೀಚಕ ದುರ್ಬುದ್ಧಿಯಲಿ ಜಗನ್ಮಾತೆ ದ್ರೌಪದಿಯ ಕಾಮಿಸಲು, ಆಹಾ ನೀ ತವಕದಲಿ ರೋಷಾತುರದಲಿ ಬಂದು ಪಾತಕಿಯನು ಪಿಡಿದ್ಯಾತನೆ ಪಡಿಸಿದ್ಯೊ, ಕಡೆಗಣ್ಣಿನಿಂದಲಿ ನೋಡಿ ಮುಷ್ಟಿ ಹಿಡಿದು ಹೊಡೆದು ಈಡ್ಯಾಡಿ ಅವನೊಡಲೊಳು ತಲೆ ಕಾಲು ನೀಡಿ, ಎತ್ತಿ ಹೊಡೆದು ಮಾಂಸದ ಮುದ್ದೆ ಮಾಡಿ, ಆಹಾ ಮಡದಿಗೆ ತೋರಿಸಿ ಬಿಡದವನನುಜರ ಮಡುಹಿ ಬೇಗದಿ ನಿನ್ನ ಮಡದಿಯ ಕಾಯ್ದುಯ್ಯ" ಎಂದು ಕೀಚಕನ ಕಾಮುಕತೆಯನ್ನೂ, ಭೀಮನ ರೋಷಾವೇಶ ಗಳನ್ನೂ ಚೆನ್ನಾಗಿ ಹೇಳಿದ್ದಾರೆ.

ವಿಜಯದಾಸರು ಹದಿನೈದು ನುಡಿಗಳ ಒಂದು ಕೀರ್ತನೆಯಲ್ಲಿ ವಿಸ್ತಾರವಾಗಿ ಕೀಚಕನವಧೆಯ ಕಥೆಯನ್ನು ಹೇಳಿದ್ದಾರೆ. 'ಭೀಮ ಶಾಮ ಕಾಮಿನಿಯಾದನು' ಎಂದು ಕೃತಿ ಪ್ರಾರಂಭವಾಗುತ್ತದೆ. ಭೀಮ ಕಾಮಿನಿಯಾಗಲು ಕಾಮನ ಸತಿ, ಪುಲೋಮ ಜಿತುವಿನ ಕಾಮಿನಿ ಮುಂತಾದವರೆಲ್ಲಾ ತಲೆ ತೂಗಿದರಂತೆ! ದಾಯವಾಡಿ ಸೋತು ರಾಯ ಪಾಂಡವರು ವನವಾಸ ಮುಗಿಸಿ "ರಾಯ ಮತ್ಸ್ಯ ನಾಲಯದೊಳು ತಮ್ಮ ಕಾಯವಡಗಿಸಿ ಅಯೋನಿಜೆ ದ್ರೌಪದೀಯ ಪಡಗೂಡಿ" ಇದ್ದರು. "ಬಾಚಿ ಹಿಕ್ಕುವ ಪರಿಚಾರಕತನದಲಾ ಪಾಂಚಾಲಿಗೆ ಮತ್ಸ್ಯನಾ ಚದುರೆಯಲ್ಲಿ ಆಚರಣೆಯಿಂದ ಯಾಚಕರಂದದಿ ಪಾಚವಾಡಿ ಕಾಲೋಚಿತಕೆ" ತಕ್ಕಹಾಗೆ ಇರುತಿರಲು ಕೀಚಕನ ಕಾಕದೃಷ್ಟಿ ದ್ರುಪದನಂದನೆಯ ಮೇಲೆ ಬಿತ್ತು. ಅವಳನ್ನು ಕುರಿತು ಕೀಚಕ "ಎಲೆಗೆ ಹೆಣ್ಣೆ ನಿನ್ನೊಲುಮೆಗೆ ಕಾಮನು ಕಳವಳಿ ಸಿದ ನಾ ಗೆಲಲಾರೆ ನಿಂದು ಪಲಿಸಿಕೋ ಎನ್ನ....ನೀ ಸಲಹಿದಡೇ ವೆಗ್ಗಳೆಯಳ ಮಾಡಿಪೆನಿಳೆಯೊಳು" ಎಂದು ಮುಂತಾಗಿ ಹೇಳಲು, ದ್ರೌಪದಿ "ದೀನ ವತ್ಸಲನ ಕರುಣವು ಮೀರಿತು ಕಾನನದೊಳ್ಕಣ್ಣು ಕಾಣದಂತಾಯಿತು ಏನು ಮಾಡಲೆಂದು ಜಾಣೆಯು ಚಿಂತಿಸಿ ಅನಿಲಗೆ ಬಂದು ಮಣಿದಳು". ದ್ರೌಪದಿಯ ಅಸಹಾಯಕ ಸ್ಥಿತಿಯನ್ನು ಕಂಡ ಭೀಮ "ಚೆಲ್ವೆ ಕಂಗಳೇ ನಿಲ್ಲೆ ನೀ ಘಳಿಗೆ ಸಲ್ಲದೆ ಆತನ ಹಲ್ಲನು ಮುರಿದು ಹಲ್ಲಣವ ಹಾಕಿ ಕೊಲ್ಲುವೆ ನಾನೀಗ ತಲ್ಲಣಿಸದಿರೇ ಗೆಲ್ಲುವೆನೆ" ಎಂಬುದಾಗಿ ಭರವಸೆ ನೀಡಿದ. ಪಾಂಚಾಲಿ "ಎಂದ ಮಾತಿಗಾನಂದಮಯಳಾಗಿ ಬಂದಳಾ ಖಳನ ಮಂದಿರದೊಳು ನೀನೆಂದ ಮಾತಿಗೆ ನಾನೊಂದನು ಮೀರೆನು" ಎನ್ನುತ್ತಾಳೆ. ಇತ್ತ ಕಡೆ ಭೀಮ ಸ್ತ್ರೀವೇಷ ಧರಿಸಿಕೊಳ್ಳಲು ತೊಡಗುತ್ತಾನೆ. "ಉಟ್ಟ ಪೀತಾಂಬರ ತೊಟ್ಟ ಕುಪ್ಪಸವು ಇಟ್ಟತಿ ಸಾದಿನ ಬಟ್ಟು ಫಣೆಯಲ್ಲಿ.... ತೋರ ಮೌಕ್ತಿಕದ ಹಾರ ಸರಿಗೆ ಕೇಯೂರ ಪದಕ ಭಂಗಾರ ತಾಳಿ ಸರ" ಇತ್ಯಾದಿ ಧರಿಸಿದ ಎಂಬುದನ್ನು ದಾಸರು ಏಳು ನುಡಿಗಳಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾರೆ. ಇವುಗಳಿಂದ ಅಲಂಕೃತನಾದ ಭೀಮ "ಸಂಧ್ಯಾ ದೇವಿಯೊ, ಇಂದ್ರನ ರಾಣಿಯೊ,

ಚಂದ್ರನ ಸತಿಯೋ, ಕಂದರ್ಪನಾ ಕರದಿಂದ ಬಂದ ಅರವಿಂದದ ಮೊಗ್ಗೆಯೋ" ಎನ್ನುವ ಹಾಗೆ ಇದ್ದನಂತೆ! ಅವನ ಅಂದವನ್ನು ವರ್ಣಿಪರಾರು ಎಂದು ದಾಸರು ಪ್ರಶ್ನಿಸುತ್ತಾರೆ. ಇಷ್ಟೆಲ್ಲಾ ಶೃಂಗಾರಗೊಂಡು "ಇಂದುಮುಖಿಯೊಡನೆಂದು ತಾ ನಾಟ್ಯದ ಮಂದಿರಕೆ ನಗೆಯಿಂದ ಬಂದ ಕುಂತಿನಂದನನು". ಅಲ್ಲಿ ಆಗಲೇ ಬಂದು ಕಾಯುತ್ತಿದ್ದ ಕೀಚಕನನ್ನು ಕುರಿತು "ಭಂಡ ಉಡಿಯಲ್ಲಿ ಕೆಂಡವ್ಯೊ ಪರರ ಹೆಂಡರ ಸಂಗ ಭೂಮಂಡಲದೊಳೆನ್ನ ಗಂಡರು ಬಲು ಉದ್ದಂಡರು ನಿನ್ನನ್ನು ಕಂಡರೆ ಬಿಡರೋ ದಂಡಿಪರೋ" ಎಂದು ಹೇಳುತ್ತಾನೆ. ಕಾಮಿ ಕೀಚಕ ಇವನ ಮಾತಿಗೆ ಕಿವಿಗೊಡದೆ ಕೈ ದುಡುಕಿ ಮೊಗ ಗಲ್ಲ ಮುಟ್ಟಿ ಬೆಂಡಾಗುತ್ತಾನೆ! ತಕ್ಷಣವೇ "ನಾರಿಯಲ್ಲ ಮಕಮಾರಿಯಿದೆನುತ ಶರೀರವತಿ ಕಠೋರವ ಕಂಡು ಜರ್ಝರಿತ ನಾಗಿ ನೀನಾರು ಪೇಳೆಂದು ವಿಕಾರದ್ಯಬ್ಬರಿಸಿ" ಎದ್ದು ನಿಲ್ಲುತ್ತಾನೆ. ಆಗ ಭೀಮ ಸೇನ "ವಿಚಾರಿಸಿಕೋ ಎನ್ನ ನಾರಿತನವೆಂದು ವೀರಮುಷ್ಟಿಯಿಂದ್ವಾರಿ ಹೊಡೆಯಲು ಕ್ರೂರನು ರಕ್ತವ ಕಾರಿದನು". ಹೀಗೆ ಕೀಚಕನನ್ನು ಕೊಂದು "ಧೀರ ಭೀಮರಾಯ ಭೋರಿಡುತ ಹಾರಿ ಕೋರೆಮೀಸೆಯನೇರಿಸಿ ಹುರಿಮಾಡಿ ನಾರಿಮಣಿಯಿತ್ತ ಬಾರೆಂದು ಕರೆದು ಸಾರಿದನು ನಿಜಾಗಾರವನು".

ವಿಜಯದಾಸರಂತೆಯೇ ವಾದಿರಾಜರು ಸಹ ಇಪ್ಪತ್ತುಮೂರು ನುಡಿಗಳ ಒಂದು ಸುದೀರ್ಘ ಕೀರ್ತನೆಯಲ್ಲಿ ಕೀಚಕವಧೆಯನ್ನು ಹಾಡಿದ್ದಾರೆ. "ರಾಜಾಧಿ ರಾಜನು ಗಜಪುರದಲ್ಲಿ ಜೂಜನಾಡಿ ತಮ್ಮ ರಾಜ್ಯವನು ಸೋತು" ರೂಪ ಮಾಜಿ ಕೊಂಡು ಮತ್ಸ್ಯರಾಜನ ಆಶ್ರಯ ಪಡೆಯುತ್ತಾರೆ. ದ್ರೌಪದಿಯನ್ನು ಕಂಡು ವಿರಾಟನ ರಾಣಿ "ನೀ ಎನಗೆ ವೇಣಿ ಹಾಕೆನ್ನುತ ಪಾಣಿ ಹಿಡಿದು ಕರೆತರುತ್ತಾಳೆ." ಅಕ್ಕನ ಬಳಿಯಿದ್ದ ದ್ರೌಪದಿಯನ್ನು ನೋಡಿದ ಕೀಚಕ ಅವಳ ರೂಪಕ್ಕೆ ಬೆರಗಾಗಿ "ವಾರೆಗಣ್ಣಿಲೊಂದು ಸಾರಿ ನೋಡಲೆಂದು ಬಾರಿಬಾರಿಯಾಕೆ ಮೋರೆ ನೋಡುತಿರೆ, ನೀರೆ ಆ ಕ್ರೂರನ ಘೋರರೂಪಕ್ಕಂಜಿ ಮೋರೆ ತೋರದೆ ಗಂಭೀರ"ವಾಗಿ ಇದ್ದಳಂತೆ. ಸಮಯ ನೋಡಿ ಕೀಚಕ ದ್ರೌಪದಿಗೆ ಪ್ರಲೋಭನೆ ತೋರಿಸುತ್ತಾನೆ. "ಅಕ್ಕನಿಗೆ ಬಾಚಿ ಹಿಕ್ಕುವ ಸೇವೆಗೆ ಪುಕ್ಕಟೆ ಅನ್ನಕ್ಕೆ ಸಿಕ್ಕುವರೇ ನೀನು ಚಿಕ್ಕಪ್ರಾಯಕ್ಕೆನ್ನ ಪಕ್ಕಕ್ಕೆ ಬಂದರೆ ಸಕ್ಕರೆ ತುಟಿ ಸವಿ ದಕ್ಕಿಸುವೆ" ಎನ್ನುತ್ತಾನೆ. ಅವನ ಪುಂಡುತನದ ಭಂಡ ಮಾತುಗಳನ್ನು ಕೇಳಿದ ಸೈರಂಧ್ರಿ "ರಕ್ಕಸ ನಿನಗೇ ದಕ್ಕುವಳೇ ನಾನು ಮುಕ್ಕಣ್ಣನಾದರು ಲೆಕ್ಕಿಸದ ಪತಿ ಫಕ್ಕನೆ ಬಂದರೆ ತಿಕ್ಕಿ ನಿನ್ನ ಕಾಯ ದಿಕ್ಕು ದಿಕ್ಕಿಗೆ ಬಲಿಯಿಕ್ಕುವರೊ" ಎನ್ನುತ್ತಾಳೆ. ಇವರಿಬ್ಬರ ಸಂಭಾಷಣೆ ಹೀಗೆಯೆ ಸ್ವಾರಸ್ಯವಾಗಿ ಮುಂದುವರಿಯುತ್ತದೆ. ಕಡೆಗೆ ತಮ್ಮನ ನಡೆ ನುಡಿಯಿಂದ ಬೇಸತ್ತ ವಿರಾಟನ ರಾಣಿ "ನಿಷ್ಠೆ ಸೈರಂಧ್ರಿಯ ದೃಷ್ಟಿಸಿ ನೋಡಲು ನಷ್ಟವಾಗುವುದು ಅಷ್ಟೈಶ್ವರ್ಯವು ಭ್ರಷ್ಟ ನಿನಗೆ ನಾನೆಷ್ಟು ಪೇಳಲಿನ್ನು ಕಟ್ಟಕಡೆಗೆ ನೀ ಕೆಟ್ಟ ಕಂಡ್ಯ" ಎಂದು ಹೆದರಿಸಿ ಬುದ್ಧಿ ಹೇಳುತ್ತಾಳೆ. ಕೀಚಕ ಇದಕ್ಕೆಲ್ಲಾ ಜಗ್ಗ

ತ್ತಾನೆಯೇ? "ಸೃಷ್ಟಿಲಿ ನನ್ನಂಥ ಗಟ್ಟಿಗನ್ಯಾರಕ್ಕ ದುಷ್ಟರೆದೆಯನು ಮೆಟ್ಟಿ ಸೀಳುವನು ಗುಟ್ಟಿಂದ ನಾರಿಯ ಕೊಟ್ಟು ಕಳುಹಲು ಪಟ್ಟದ ರಾಣಿಯೋಲಿಟ್ಟು ಕೊಂಬೆ" ಎಂದು ತನ್ನ ದುಷ್ಟಯೋಜನೆಯನ್ನು ಹೇಳುತ್ತಾನೆ. ಈ ನೀಚ ನುಡಿ ಕೇಳಿ ನಾಚಿ ದ್ರೌಪದಿ ಅಲ್ಲಿಂದ ಹೊರಟರೆ ಕೀಚಕ ಅವಳ ಕರವ ಹಿಡಿದು ತಡೆಯು ತ್ತಾನೆ. ಈ ಎಲ್ಲ ಅಪಮಾನಗಳಿಂದ ನೊಂದ ಪಾಂಚಾಲಿ ಭೀಮನ ಬಳಿಗೆ ಬರುತ್ತಾಳೆ. "ನಡಗುವ ಧ್ವನಿಯಲಿ ಬಿಡುತ ಕಣ್ಣೀರನು ಆಡಿದ ಮಾತನು ಬಾಡಿದ ಮುಖವನು ನೋಡಿದಾಕ್ಷಣ ತೊಡೆದ ನೇತ್ರವ ಬಿಡು ಬಿಡು ದುಃಖ ಮಾಡದಿರು" ಎಂದು ಸಮಾಧಾನ ಮಾಡಿ ಭೀಮ, "ಮಿಡುಕಿ ನಿನ್ನನು ಹಿಡಿದ ಖಳನನು ಬಡಿದು ಯಮನಿಗೆ ಕೊಡುವೆ ನೋಡೀಗ" ಎಂದು ಆಶ್ವಾಸನೆ ನೀಡು ತ್ತಾನೆ. ಇತ್ತ ಕೀಚಕ "ಪೂಶರ ತಾಪಕ್ಕೆ ಕೇಸರಿಗಂಧವ ದಾಸಿಯರಿಂದ ಪೂಸಿಕೊಂಡು ಹಾಸು ಮಂಚದಲ್ಲಿ ಬೀಸಿಕೊಳುತಲಿ ಘಾಸಿಪಡುತಿರೆ ಆ ಸಮಯ ದಲ್ಲಿ" ದ್ರೌಪದಿ ಬಂದು ಕಾಳಗದ ಮನೆಗೆ ರಾತ್ರಿ ಬರುವಂತೆ ತಿಳಿಸಿ ಹೋಗುತ್ತಾಳೆ. "ನಾರಿಯಿನ್ನಾವಾಗ ಬರುವಳೊ ಎಂದು ದಾರಿಯ ನೋಡುವ ಚೋರ ಕೀಚಕನು ತೋರಿದ ಠಾವಿಲಿ ಸೇರುವ ಬೇಗನೆ ಊರೊಳಗಾರೂ ಅರಿಯದಂತೆ." ಇತ್ತ ಭೀಮನು "ಕ್ರೂರನು ಮೋಹಿಪ ತೆರದಲೆನಗೆ ನಾರಿಯ ರೂಪ ಶೃಂಗಾರಿಸು ನೀನೆಂದು" ದ್ರೌಪದಿಗೆ ಹೇಳುತ್ತಾನೆ. ಆಕೆ ಅವನಿಗೆ ಮಾಡಿದ ಅಲಂಕಾರವನ್ನು ವಾದಿರಾಜರು ಬಹು ವಿವರವಾಗಿ ಹೇಳಿದ್ದಾರೆ. ಭೀಮನ ನಾರೀವೇಷವನ್ನು ಕಂಡವರು "ಹಸ್ತಿನಿಯೋ ಈಕೆ ಚಿತ್ತಿನಿಯೊ" ಎಂದು ಸಂಶಯ ತಾಳುವ ಹಾಗಿತ್ತಂತೆ! ಬೇರೆಯವರ ಮಾತಿರಲಿ, ದ್ರೌಪದಿಯೆ ಮೆಚ್ಚಿ "ಪ್ರಾರ್ಥನ ಸ್ತ್ರೀ ರೂಪ ನೋಡಲು ಖೂಳನು ಕೂಡದೆ ಪ್ರಾಣವ ಬಿಡನೆಂದಳು". ಗರುಡಿಯ ಮನೆಗೆ ಬಂದ ಭೀಮನನ್ನು ಕಂಡು ಕೀಚಕ ಸಂಭ್ರಮಗೊಂಡು "ಕುಂದಣದಾಭರಣ ತಂದೆ ನಿನಗಾಗಿ" ಎಂದ. ಭೀಮ ಪಿಸುಮಾತಿನಲ್ಲಿ "ಗುಲ್ಲು ಮಾಡದಿರೊ ಮೆಲ್ಲನೆ ಮಾತಾಡೊ। ವಲ್ಲಭ ಕಂಡರೆ ಹಲ್ಲು ಮುರಿವರೊ। ಬಲ್ಲವ ನಿನಗೆ ಸಲ್ಲದು ಈ ಕಾರ್ಯ ಗೆಲ್ಲಲರಿಯೆ ಕೊಲ್ಲಿಸಿಕೊಂಬೆ" ಎಂದು ಎಚ್ಚರಿಕೆ ನೀಡಿದ. ಆದರೆ ಕಾಮದ ಮದದಿಂದ ಅಂಧನಾಗಿದ್ದ ಕೀಚಕ ಅದೇ ಮತ್ತಿನಲ್ಲಿ "ಚೆಲ್ವೆ ಕೇಳು ನಿನ್ನ ಹುಲ್ಲೆಗಣ್ಣ ನೋಟ। ಕೊಲ್ಲ ಬಗೆಗೆ ನಾ ಗೆಲ್ಲಲಾರೆನೆಂದು। ಗಲ್ಲ ಮುದ್ದಿಟ್ಟ." ಕೂಡಲೇ ಏನೋ ಮೋಸ ನಡೆದಿದೆ ಎಂಬುದು ಅರಿವಾಯಿತು. "ನಾರಿಯೊ ನೀನೇನು ಮಾರಿಯೊ ಇನ್ನೊಂದು। ಬಾರಿ ಎನಗೆ ನಿನ್ನ ಮೋರೆ ತೋರಿಸೆಂದು। ಧೀರನ ಸಮೀಪ ಬಾರದೆ ಓಡುವ। ದಾರಿಯ ನೋಡುತ್ತಲಿರಲಾಗ" ಕೆರಳಿದ ಭೀಮ "ಯಾರಾದರೇನೀಗ ಮಾರನ ತಾಪವ ಹಾರಿಸುವೆ" ಎಂದು "ಎದ್ದು ಸಮೀರಜ ಗುದ್ದಲು ಕೀಚಕ ಬಿದ್ದನು ಭೂಮಿಲಿ ಗೆದ್ದೆನೆನುತ ಅನಿರುದ್ಧನ ಸ್ಮರಿಸುತಲಿದ್ದ ಭೀಮ." ಕೀಚಕನನ್ನು ಕೊಂದು ದ್ರೌಪದಿಯ ಬಳಿ ಬಂದು ಸತ್ತ

ದುಷ್ಟನನ್ನು ನೋಡು ಎಂದರೆ, ಅವಳು "ಭ್ರಷ್ಟನ ನೋಡುವುದೇನೆಂದಳು". ಅನಂತರ ಭೀಮ "ಹಯವದನನ ಪದಪದ್ಮ ಸ್ಮರಿಸುತ ಗದೆಯನು" ಧರಿಸಿ "ಪಟ್ಟಣಕೀಸುದ್ದಿ ಮುಟ್ಟದ ಮುಂಜೆಯೆ ಗುಟ್ಟಲಿ ಪೋಗುವೆ" ಎಂದು ಅಡಿಗೆಯ ಮನೆಯ ಕಡೆಗೆ ಹೊರಡುತ್ತಾನೆ. ಹೀಗೆ ವಾದಿರಾಜರು ಮತ್ತು ವಿಜಯದಾಸರು ಸುದೀರ್ಘವಾಗಿ, ಸ್ವಾರಸ್ಯವಾಗಿ ಕೀಚಕ ವಧೆಯನ್ನು ಬಣ್ಣಿಸಿದ್ದಾರೆ. ಈ ಭಾಗದ ನಾಟಕೀಯತೆಯೂ, ಸಂಭಾಷಣೆಯ ಚತುರತೆಯೂ ಮನವನ್ನು ಸೂರೆಗೊಂಡು ಕೀಚಕವಧೆಯ ಪ್ರಸಂಗವನ್ನು ಕಣ್ಣಿಗೆ ಕಟ್ಟುವಂತೆ ಮಾಡುತ್ತದೆ. ಕುಮಾರ ವ್ಯಾಸನ ಕೀಚಕವಧೆಯ ಘಟನೆ ಸಹಜವಾಗಿಯೇ ನೆನಪಿಗೆ ಬರುತ್ತದೆ. ದಾಸರು ಚಿತ್ರಿಸಿರುವ ಈ ಕಥಾಭಾಗವನ್ನು ಸಂಗೀತಕ್ಕೆ ಅಳವಡಿಸಿ; ಸೊಗಸಾದ ಗೀತ ನಾಟಕವನ್ನಾಗಿ ಪರಿವರ್ತಿಸಬಹುದು.

ಪಾಂಡವರು ಅಜ್ಞಾತವಾಸವನ್ನು ಮುಗಿಸಿ ಬಂದಮೇಲೆ ಯುದ್ಧಕ್ಕಾಗಿ ಸಿದ್ಧತೆ ನಡೆಯುತ್ತದೆ. ಕೃಷ್ಣ ಪಾರ್ಥಸಾರಥಿಯಾಗಿ, ಪಾಂಡವ ಪಕ್ಷವನ್ನು ಸೇರುತ್ತಾನೆ. ಕನಕದಾಸರು ಇದನ್ನು "ಗಾಂಡೀವಿಯರಮನೆಯ ಬಂಡಿಯ ಬೋವನಾದೆ" ಎಂಬ ಮಾತಿನಿಂದ ಸೂಚಿಸಿದ್ದಾರೆ. ಪುರಂದರದಾಸರು "ದುರಿಯೋಧನ ತನ್ನ ಪಕ್ಷ ಸ್ವೀಕರಿಸೆ| ಮೊರೆ ನಿನಗಿಡಲು ಮರುಳಗೊಳಿಸಿ| ಧುರದೊಳು ಪಾರ್ಥನ ಸಾರಥಿಯಾಗಿ ನೀ| ಕುರುಕುಲವಳಿದದ್ದನೆಲ್ಲಿ ಕಲಿತಯ್ಯಾ" ಎಂದು ಪ್ರಶ್ನಿಸಿದ್ದಾರೆ. "ಕಟಿಯಲ್ಲಿ ಕರವಿಟ್ಟನು ಜಗದೀಶನು" ಎಂಬ ಕೀರ್ತನೆಯಲ್ಲಿ "ಸುರತನಯಗೆ ಸಾರಥ್ಯವನೆ ಮಾಡಿ| ಭರದಿಂದ ಚಕ್ರಪಿಡಿದರಿಂದಲೊ| ಪರಿ ಪರಿ ವಿಧದಿಂದ ಕುದುರೆಗಳನೆ ತೊಳೆದು| ಪರಿಪರಿ ಕೆಲಸದ ಆಯಾಸದಿಂದಲೊ" ಎಂದು ಕೇಳಿದ್ದಾರೆ. ಒಮ್ಮೆ "ಅತಿಶಯದಿಂದ ಅರ್ಜುನಗೆ ಸಾರಥಿಯಾಗಿ| ರಥವನೇರಿ ನಡೆಯಿಸಿದವ" ಎಂತಲೂ, ಮತ್ತೊಮ್ಮೆ "ನರನ ರಥಕೆ ಬೋವನಾಗಿ ಕುದುರೆ ನಡೆಸಿದೆ" ಎಂದೂ ಈ ಸಂದರ್ಭವನ್ನು ಸ್ಮರಿಸಿದ್ದಾರೆ.

ಕೃಷ್ಣನ ಸೈನ್ಯವನ್ನು ಕೌರವನೂ, ಕೃಷ್ಣನನ್ನು ಪಾಂಡವರೂ ತಮ್ಮ ಪಕ್ಷಕ್ಕೆ ಆರಿಸಿಕೊಂಡ ಬಳಿಕ ಧರ್ಮರಾಯನ ಆಶಯದಂತೆ ಸಂಧಾನ ನಡೆಸಲು ರಾಯಭಾರಿಯಾಗಿ ಕೃಷ್ಣ ಗಜಪುರಿಗೆ ಹೋಗುತ್ತಾನೆ. ಕೃಷ್ಣನ ಆತಿಥ್ಯಕ್ಕಾಗಿ ಕೌರವ ವೈಭವದ ಸಿದ್ಧತೆಯನ್ನು ಮಾಡಿಸುತ್ತಾನೆ. ಆದರೆ ಶ್ರೀಹರಿ ಅದನ್ನು ಅಲಕ್ಷಿಸಿ ವಿದುರನ ಮನೆಗೆ ನಡೆಯುತ್ತಾನೆ. ಇದನ್ನು ಶ್ರೀಪಾದರಾಯರು "ಷಡುರಸಾಯನ ದೂಟ ರಚಿಸಿರಲು ಕುರುಪತಿಯು| ಬಡ ವಿದುರನ ಮನೆಯ ಕುಡುತೆ ಪಾಲ್ಕುಡಿದು ...ಬಡವರಾಧಾರಿಯೆಂಬ ಬಿರುದನು ಪಡೆದೆ" ಎಂದು ಹೇಳಿದ್ದಾರೆ. ಪುರಂದರ ದಾಸರು "ಸಾದರದಲಿ ವಿದುರನ ಗೃಹದಿ| ಮೋದದಿ ಒಕ್ಕುಡತೆಯ ಪಾಲನೆ ಕೊಂಡು| ಹಾದಿಲಿ ಹರಿಸಿದ್ದು ಎಲ್ಲಿ ಕಲಿತೆ" ಎಂದೂ, "ಮೋದದಿಂದ ವಿದುರನ ಮನೆಗೆಯ್ದಿ| ಆದರದಿ ಪಾಲಕುಡಿದುಳಿದುದ ನೀ| ಮೇದಿನಿಗಿಳಿಸಿದೆ" ಎಂತಲೂ

ಹೇಳಿದ್ದಾರೆ. ಪುರಂದರದಾಸರು ವಿದುರನ ವಿಷಯವನ್ನು ಹೇಳುವುದಕ್ಕಾಗಿಯೇ ಒಂದು ದೀರ್ಘ ಕೀರ್ತನೆಯನ್ನು ರಚಿಸಿದ್ದಾರೆ. ಅದು "ವಿದುರನ ಭಾಗ್ಯವಿದು" ಎಂದು ಪ್ರಾರಂಭವಾಗುತ್ತದೆ. ಕೃಷ್ಣ ರಾಯಭಾರಿಯಾಗಿ ಹಸ್ತಿನಾಪುರಕ್ಕೆ ಬಂದ: "ಕುರುರಾಯನು ಖಳನನುಜನು ರವಿಜನು | ಗುರು ಗಾಂಗೇಯರು ನೋಡುತಿರೆ | ಹರಿಸಿ ರಥವ ನಡೆಸುತ ಹರ್ಷಿ ಬೀದಿಲಿ | ಬರುತಿರೆ ಜನರಿಗೆ ಸೋಜಿಗವೆನಿಸುತ!" ಹೀಗೆ ಬರುತ್ತಿರುವ ಹರಿಯನ್ನು ಕಂಡು ವಿದುರನ ಹೃದಯ ಹಿಗ್ಗಿ ಹೋಯಿತು. ಅವನ ಸಂಭ್ರಮವಾದರೂ ಎಷ್ಟು! "ದೂರದಲಿಹ ಶ್ರೀಶನ ನೋಡುತ ಬಹು | ಹಾರುತ ಚೀರುತ ಮೈ ಮರೆದು | ವಾರಿಧಾರೆಯನು ನೇತ್ರದಿ ಸುರಿಸುತ | ಬಾರಿ ಬಾರಿ ಬಲು ಹಿಗ್ಗುವ ಮನದಲಿ ಅಡಿಗಡಿಗೆ ತನುಗೆಡುವುತಲೇಳುತ | ದೃಢ ಭಕುತಿಲಿ ಗದ್ಗದ ಸ್ವರದಿಂ | ನುಡಿಗಳು ತೊದಲುತ ರೋಮ ಪುಳಕಿತದಿ | ದುಡು ದುಡು ಓಡಾಡುವ ದಶ ದಿಶಿಯಲಿ |." ಭಕ್ತರ ಹೃದಯವನ್ನು ಭಕ್ತರೇ ಬಲ್ಲರು. ಆದ್ದರಿಂದಲೇ ದಾಸರು ವಿದುರನ ಉತ್ಸಾಹ ಆನಂದಗಳನ್ನು ಇಷ್ಟೊಂದು ಸಹಜ ವಾಗಿ ನಿರೂಪಿಸಿದ್ದಾರೆ. ತನ್ನನ್ನು ಕಂಡು ಆನಂದತುಂದಿಲನಾಗಿರುವ ವಿದುರನನ್ನು ನೋಡಿ ಮಾಧವ ನಗುತ, ಕರವ ನೀಡಿ ಬಿಗಿದಪ್ಪಿಕೊಂಡು ಅವನ ಮನೆಗೆ ನಡೆಯುತ್ತಾನೆ. ಮನೆಗೆ ಬಂದ ಗೋವಿಂದನ ಪಾದಗಳನ್ನು ಗಂಗೋದಕದಲ್ಲಿ ತೊಳೆದು, ಅಂಗಕ್ಕೆ ಸುಗಂಧವನ್ನು ಪೂಸಿ, ಪುಷ್ಪಗಳನ್ನು ಕೊಟ್ಟು, ವಿದುರ ಉಪ ಚರಿಸುತ್ತಾನೆ. "ವಾರಿಧಿ ಮನೆಯಾದಖಿಲೇಶಗೆ ಗೋ | ಕ್ಷೀರ ಸ್ವಲ್ಪ ಕೊಡ ಲಾದರದಿ | ವಾರಿಜಾಕ್ಷ ಕರಸಂಪುಟದಿ ಕುಡಿದು | ನೀರಂದದಿ ಹರಿಸಿದ ಬೀದಿ ಯೊಳಗೆ". ಹರಿಯ ಅಪಾರ ಮಹಿಮೆಯನ್ನೂ, ವಿದುರನ ಎಣೆಯಿಲ್ಲದ ಭಾಗ್ಯ ವನ್ನೂ ಕಂಡು "ಸುರರಾಕಾಶದಿ ನೆರೆದು ನೋಡಿ ಬಲು | ಹರುಷದಿ ವಿದುರನ ಪೊಗಳುವರು | ಸಿರಿ ದೇವಿಯರಸ ಪುರಂದರ ವಿಠಲನ | ಶರಣರೆ ಧನ್ಯರು ಧನ್ಯರು ಧರೆಯೊಳು" ಎಂದು ಹಾಡಿ ಮುಗಿಸಿದ್ದಾರೆ.

ಅನಂತರ ವಿದುರನ ಮನೆಯಿಂದ ಕುರುಪತಿಯ ಸಭೆಗೆ ಕೃಷ್ಣ ಬರುತ್ತಾನೆ. ಕೌರವ ಗರ್ವದಿಂದ ನಮಸ್ಕರಿಸದೆ ಕುಳಿತಿರಲು, ಕಾಲಿಗೆ ಬೀಳುವಂತೆ ಮಾಡಿದ ಹರಿಯ ಚಮತ್ಕಾರವನ್ನು ದಾಸರು ಕೊಂಡಾಡಿದ್ದಾರೆ. ಕನಕದಾಸರು "ಕಲಿ ಸುಯೋಧನನ ಓಲಗದಿ ಕೆಡಹಿದ ಪಾದ" ಎಂದು ಹರಿಯ ಪಾದಮಹಿಮೆಯನ್ನು ಹೇಳಿದ್ದಾರೆ. ಪುರಂದರದಾಸರು "ಕುರುಪತಿ ಸಭೆಯಲಿ ಗರುವದಿ ಕುಳಿತಿರೆ | ಸಿರಿಕೃಷ್ಣ ನೀ ಬರೆ ವಂದಿಸದೆ | ಧರೆಯನು ಮೆಟ್ಟುತ ಚರಣಕೆ ಉರುಳಿಸಿ | ಪರಿ ಹಾಸ್ಯ ಮಾಡಿದೆ" ಎಂದೂ, ಮತ್ತೊಂದು ಕಡೆ "ದುರ್ಯೋಧನ ತನ್ನೊಡ್ಡೋಲಗ ದೊಳು | ಹರಿಯನು ಕರೆಸೆಂದರುಹಲು ಬಂದು | ಧರಣಿಯುಂಗುಷ್ಠದಲೊತ್ತುತ ಅವನನು | ಉರುಳಿಸಿದಾಟವನೆಲ್ಲಿ ಕಲಿತ್ಯೋ ರಂಗ" ಎಂದೂ ದುರ್ಯೋಧನ ಹರಿಯ ಪಾದಕ್ಕೆ ಕೆಡೆದುದನ್ನು ಹೇಳಿದ್ದಾರೆ. ತನಗಾದ ಅಪಮಾನದಿಂದ ಕೋಪ

ಗೊಂಡ ಕೌರವ ಕೃಷ್ಣನನ್ನು ಕಟ್ಟಿಹಾಕಿಸಲು ಪ್ರಯತ್ನಿಸುತ್ತಾನೆ. ಆಗ ಶ್ರೀಕೃಷ್ಣ ವಿಶ್ವರೂಪದರ್ಶನ ನೀಡಿ ಎಲ್ಲರನ್ನೂ ದಿಗ್ಭ್ರಾಂತರನ್ನಾಗಿ ಮಾಡುತ್ತಾನೆ. ಇದನ್ನು ಪುರಂದರದಾಸರು ಹೀಗೆ ಹೇಳಿದ್ದಾರೆ: "ಪಾಂಡುಸುತರು ಕೌರವರ ಮಧ್ಯದೊಳು| ಸಂಧಿಯ ಮಾಡಲು ನೀ ಪೋಗಿ| ನಿಂದ್ಯ ಕೌರವಗೆ ದುಷ್ಪ್ರೇರಿಸಿ ನೀ| ಬಂದ ಕಾರ್ಯ ಮಾಡಿ........ಆ ಸಮಯದಿ ಕಲಿಯಂಶದ ಕೌರವ| ಹೇಸದೆ ನಿನ್ನನು ಕಟ್ಟಿಸಲು| ಸಾಸಿರನಾಮನೆ ವಿಶ್ವರೂಪವ ತೋರಿ| ಮೋಸಗೊಳಿಸಿದೆ". ಮತ್ತೊಂದು ಕಡೆ "ಆ ಸಭೆಯಲಿ ಖಳ ದುರ್ಯೋಧನನಾಗ| ಮೋಸದಿ ಕೃಷ್ಣನ ಕಟ್ಟಿಸಲು| ಸಾಸಿರರೂಪಿನ ಕೃಷ್ಣನೆಂದೆನಿಸಿದ| ವೇಷವನೆಲ್ಲಿ ಕಲಿತ್ಯೋ ರಂಗ" ಎಂದು ಪ್ರಶ್ನಿಸಿದ್ದಾರೆ. ಇಲ್ಲಿಗೆ 'ಉದ್ಯೋಗಪರ್ವ'ದ ಕಥೆ ಮುಗಿಯುತ್ತದೆ.

ಕೃಷ್ಣನ ರಾಯಭಾರ ವಿಫಲವಾಗಿ ಯುದ್ಧ ಸಿದ್ಧತೆ ಭರದಿಂದ ನಡೆಯುತ್ತದೆ. ಎರಡು ಸೈನ್ಯವೂ ರಣರಂಗದಲ್ಲಿ ಸೇರಿವೆ. ಇದ್ದಕ್ಕಿದ್ದಂತೆ ಅರ್ಜುನನಿಗೆ ಮಾಯೆ ಕವಿಯುತ್ತದೆ. ಬಂಧುಗಳೊಡನೆ ಹೋರಾಡಲಾರೆ ಎಂದು ಬಿಲ್ಲನ್ನು ಕೆಳಗಿಳಿಸುತ್ತಾನೆ. ಆಗ ಶ್ರೀಕೃಷ್ಣ ಅವನಿಗೆ ಕವಿದಿದ್ದ ಮಾಯೆಯನ್ನು ಹೋಗಲಾಡಿಸಲು ವಿಶ್ವರೂಪವನ್ನು ತೋರಿಸುತ್ತಾನೆ. ಇದನ್ನು ಗೋಪಾಲದಾಸರು "ವಿಶ್ವರೂಪ ಸುಳಾದಿ"ಯಲ್ಲಿ ವಿವರವಾಗಿ ವರ್ಣಿಸಿದ್ದಾರೆ. "ಒಂದು ಕಡೆಯಲ್ಲಿ ದ್ರೋಣ ಭೀಷ್ಮಾದಿಗಳನೆಲ್ಲ | ಕೊಂದು ಅರ್ಜುನನ ಕೊಲ್ಲು ನೀನೆನುತಿರ್ಪ | ಒಂದು ಕಡೆಯಲ್ಲಿ ಸೈನ್ಯಕ್ಕೆ ಬಲವಾಗಿ | ಮುಂದರಿದು ಮತ್ತವಾದ ಮೋಹಗೊಳಿಸುತಿಪ್ಪ | ಒಂದು ರೂಪದಿ ಪಾರ್ಥಗೆ ತತ್ವ ತಿಳಿಸುತ | ಬಂದ ಅರಿಗಳಸ್ತ್ರಗಳ ತಾನೇ ವರಿಸುತಲಿಪ್ಪ | ಒಂದು ರೂಪದಲ್ಲಿ ಅರ್ಜುನನ ಆಲಂಗಿಸಿ | ಬಂದ ಆಯಾಸಗಳ ಬಡಿಸದೆ ನಿಂದಿಪ್ಪ | ಒಂದು ರೂಪದಿ ದೇವದತ್ತ ಶಂಖವನೂದಿ ತಂದೀವ ಬಲವ ಪ್ರತಿಕ್ಷಣಕೆ ಪಾರ್ಥನಿಗಿನ್ನು....... ಒಂದೊಂದನಂತಾನಂತ ರೂಪನಾಗಿ ಮುಂದರಿದ ಕುರು ಸೈನ್ಯವ ಕೊಂದು ಕೊಂದ್ದಾಕುತಿಹ" ಎಂದು ಗೋಪಾಲ ವಿಠಲನ ಮಹಿಮೆಯನ್ನು ಕೊಂಡಾಡಿದ್ದಾರೆ. 'ಭೀಷ್ಮಪರ್ವ'ದಲ್ಲಿ ವಿಶ್ವರೂಪವನ್ನು ಬಿಟ್ಟರೆ ಭೀಷ್ಮನ ಮರಣವನ್ನು ಮಾತ್ರ ದಾಸರು ಹೇಳಿದ್ದಾರೆ. ಕನಕದಾಸರು "ಮರಣ ತನ್ನಿಚ್ಛೆಯೊಳುಳ್ಳ ಗಾಂಗೇಯನು ಧುರದಲಿ ಷಂಡನ ನೆವದಿಂದಲಿ | ಸರಳಮಂಚದ ಮೇಲೆ ಮಲಗಿ ಮೊಮ್ಮಗನನು | ಕೊರಳಕೊಯ್ದವ ಭೀಷ್ಮನೋ ಪಾಂಡವರೋ" ಎಂದು ಕೇಳಿ ತನ್ನ ಮರಣಕ್ಕೂ, ಕೌರವರ ಸೋಲಿಗೂ ಭೀಷ್ಮನೇ ಕಾರಣವೆಂದು ಹೇಳಿದ್ದಾರೆ. ಮತ್ತೊಂದು ಕಡೆ "ಸುರನದಿಯ ಸುತನು ಪಾಂಡವರಿಗಾಪ್ತನು ನಿನಗೆ | ಪರಮಭಕ್ತನು ಸ್ವಯಿಚ್ಛಾಮರಣಿಯು | ಧುರದೊಳಗೆ ಪೂರ್ವ ವೈರದ ಶಿಖಂಡಿಯ ತೋರಿ ಶರಮಂಚದೊಳುಪಾಯದಲಿ ಮಲಗಿಸಿದೆ" ಎಂದು ಹೇಳಿ ಭೀಷ್ಮನ ಮರಣದಪರಾಧವನ್ನು ಕೃಷ್ಣನ ತಲೆಗೆ ಕಟ್ಟಿದ್ದಾರೆ!

ಭೀಷ್ಮಾಚಾರ್ಯರು ಶರಶಯ್ಯಾಗತರಾದ ಮೇಲೆ ದ್ರೋಣಾಚಾರ್ಯರ

ನೇತೃತ್ವದಲ್ಲಿ ಯುದ್ಧ ಮುಂದುವರಿಯುತ್ತದೆ. ಭಗದತ್ತ ಕೌರವರ ಕಡೆ ನಿಂತು ಹೋರಾಡುತ್ತಾನೆ. ಅವನು ಬಿಟ್ಟ ವರಾಹಾಸ್ತ್ರದಿಂದ ಪಾಂಡವರನ್ನು ಕೃಷ್ಣ ಕಾಯ್ದ ಎಂಬುದನ್ನು ಕನಕದಾಸರು ಹೀಗೆ ಹೇಳಿದ್ದಾರೆ: "ಲೋಲಲೋಚನೆಯ ಮಾತೆಯ ಪುತ್ರನಣುಗನ ಮೇಲುಶಕ್ತಿಗೆ ಉರವಾಂತು ತನ್ನವರನ್ನು ಪಾಲಿಸಿ ದಂಥ ದಾತನಹ ದೇವ": (ಸೀತೆಯ ತಾಯಿಯಾದ ಭೂದೇವಿಯ ಮಗನಾದ ನರಕಾಸುರನ ಪುತ್ರ ಭಗದತ್ತನ ಅಸ್ತ್ರದಿಂದ ಪಾಂಡವರನ್ನು ಕೃಷ್ಣ ರಕ್ಷಿಸಿದ.) ಭೀಮನು ಸಹ ಪರಾಕ್ರಮದಿಂದ ಹೋರಾಡಿ ಕೌರವಾನುಜರನ್ನು ಸದೆಬಡೆಯು ತ್ತಾನೆ. ಪುರಂದರದಾಸರು "ನರನಮಿತ ಗುರುರಥವ ತಿರುಹಿ ನಭಕೀಡಾಡಿ | ಕುರುಭೂಮಿಪಾನುಜರ ಕುಸುರಿದರಿದೆ | ಹರಿಯು ಶರಕ್ಕಿದಿರಾದ ಗಿರಿಶನವತಾರ ವಹ | ಗುರುಸುತನ ಭಂಗಬಡಿದೇ ಭಾಪುರೆ" ಎಂದು ಭೀಮನ ಸಾಹಸವನ್ನು ಮೆಚ್ಚಿದ್ದಾರೆ.

ದ್ರೋಣಪರ್ವದ ದಾರುಣ ಪ್ರಸಂಗವೆಂದರೆ ಅಭಿಮನ್ಯುವಿನ ಮರಣ. ದ್ರೋಣರೊಡ್ಡಿದ ಪದ್ಮವ್ಯೂಹವನ್ನು ಭೇದಿಸಲು ಹೊರಟ ಬಾಲಕ ಅಭಿಮನ್ಯುವನ್ನು ಕೌರವರು ಮೋಸದಿಂದ ಕೊಲ್ಲುತ್ತಾರೆ. ಪುರಂದರದಾಸರು 'ಆರೇನು ಮಾಡು ವರು ಆರಿಂದಲೇನಹುದು' ಎಂಬ ಕೀರ್ತನೆಯಲ್ಲಿ ಅಭಿಮನ್ಯುವಿನ ಮರಣವನ್ನು ಕುರಿತು "ರಣದೊಳಗೆ ಅಭಿಮನ್ಯು ಚಕ್ರವ್ಯೂಹವ ಪೊಕ್ಕು| ಸೆಣಸಿ ಷಡುರಥ ರೊಡನೆ ಹೊಯ್ದಾಡಲು | ಅಣಕವಿಲ್ಲದೆ ಕಾದುತಸುವಳಿದು ಪೋಪಾಗ | ತ್ರಿಣಯ ಸಖ ಪಾರ್ಥರಿದ್ದೇನು ಮಾಡಿದರು" ಎಂದು ಹೇಳಿ ಎಲ್ಲವೂ ವಿಧಿಯ ಬರಹ, ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲವೆಂದರೆ, ಕನಕದಾಸರು "ಸೋದ ರತ್ತೆಯ ಸೊಸೆಯ ಮಗ ನಿನಗೆ ಭಾವಿಸಲು | ಸೋದರಳಿಯನು ಮೂರು ಲೋಕ ವರಿಯೆ | ಸಾಧಿಸಿಯೆ ಅಸನುಚಕ್ರವ್ಯೂಹವ ರಚಿಸಿ ಸೋದರನ ಷಡುರಥರ ಕೈಲಿ ಕೊಲ್ಲಿಸಿದೆ" ಎಂದು ಅಭಿಮನ್ಯುವಿನ ಸಾವಿಗೆ ಕುಹಕಿಯಾದ ಕೃಷ್ಣನೇ ಕಾರಣ ವೆಂದಿದ್ದಾರೆ!

ಮಗನ ಮರಣದಿಂದ ಕೋಪಗೊಂಡ ಅರ್ಜುನ ಕತ್ತಲಾಗುವುದರೊಳಗಾಗಿ ಸೈಂಧವನನ್ನು ಕೊಲ್ಲುವುದಾಗಿ ಶಪಥಮಾಡುತ್ತಾನೆ. ಕೃಷ್ಣ ಅದನ್ನು ಪೂರೈಸಿ ಕೊಡುತ್ತಾನೆ. ಈ ಸಂದರ್ಭವನ್ನು ಕನಕದಾಸರು "ಕುರುಪತಿಯ ಮೈದುನನ ಕೊಲ್ಲಬಗೆದವನ ಸಂ | ಗರದೋಳೇರಿಸಿ ನುಡಿದ ನುಡಿಯು ಕೇಳ್ದು | ಪರಿದು ರವಿಮಂಡಲಕೆ ಮರೆಯ ಚಕ್ರದಿ ಮೂಡಿ | ನರನ ಕೈಯಿಂದ ಸೈಂಧವನ ಕೊಲ್ಲಿಸಿದೆ" ಎಂದು ಹೇಳಿದರೆ, ಪುರಂದರದಾಸರು "ಪ್ರಾಣಕೊಳುವೆ ಈ ದಿನವೆಂದರ್ಜುನ | ಥೇನಿಸದಲೆ ಸೈಂಧವಗೆನಲು | ಕಾಣದಂತೆ ಚಕ್ರವ ಸೂರ್ಯಗೆ ಇಟ್ಟು | ಬಾಣ ಹೊಡೆಸಿ....ಆ ಶಿರ ಆತನ ಪಿತನ ಕರದೊಳು | ಸೂಸುತ ರಕ್ತವ ಬೀಳುತಿರೆ | ಸೋಸಿ ನೋಡದೆ ರುಂಡ ಬಿಸಡಲವನ ಶಿರ | ಸಾಸಿರ ಮಾಡಿದಾಟವೆಲ್ಲಿ

ಕಲಿತಯ್ಯಾ" ಎಂದೂ, ಮತ್ತೊಮ್ಮೆ "ದ್ರೋಣನ ಸಂಗ್ರಾಮದಿ ಹರಿಚಕ್ರವ | ಮಾಣದೆ ಸೂರ್ಯಗೆ ಮರೆಮಾಡಿ | ಕಾಣಿಸಿ ಸೈಂಧವನನು ಕೊಲಿಸಿದೆ" ಎಂದೂ ಸೈಂಧವವಧೆಗೆ ಕೃಷ್ಣನೇ ಸಹಾಯಕ ಎಂಬುದನ್ನು ನಿರ್ದೇಶಿಸಿದ್ದಾರೆ. ದ್ರೋಣಾಚಾರ್ಯರ ಅಂತ್ಯವನ್ನು ಕನಕದಾಸರು ಮಾತ್ರ ಎರಡು ಕಡೆ ಹೇಳಿದ್ದಾರೆ. "ಮಗನ ನೆವದಿ ಕಾಳಗವ ಬಿಸುಟು ಸುರನಗರಿಗೆ ನಡೆದು ವೈರಾಗ್ಯದಿಂದ ಜಗವರಿಯಲು ಕುರುವಂಶಕೆ ಕೇಡನು ಬಗೆದು ಕೊಂದವ ದ್ರೋಣನೋ" ಎಂಬುದಾಗಿ ಹೇಳಿ ಕುರುವಂಶನಾಶಕ್ಕೆ ದ್ರೋಣಾಚಾರ್ಯರೂ ಕಾರಣರು ಎಂಬುದನ್ನು ಸೂಚಿಸಿದ್ದಾರೆ. ಮತ್ತೊಂದು ಕಡೆ "ಶಪಥದಲಿ ರಣದೊಳರಸನ ಹಿಡಿವೆನೆಂಬವಗೆ ತಪಸಿಗಳ ತಂದು ತತ್ವವ ಬೋಧಿಸಿ ಕಪಟವರಿಯದ ನೃಪನ ಕೈಯೊಳನೃತವ ನುಡಿಸಿ ಉಪಮೆಯಲಿ ಶಸ್ತ್ರಪಂಡಿತನ ಕೊಲ್ಲಿಸಿದೆ" ಎಂದು ಕಪಟಿ ಕೃಷ್ಣನ ಮೋಸವನ್ನು ಬಯಲಿಗೆಳೆದಿದ್ದಾರೆ. ದ್ರೋಣರ ಸಾವನ್ನು ಕಂಡು ಖತಿಗೊಂಡ "ವೀರನಾದ ಗುರುಸುತನು ಬಲು ಕ್ರೂರತನದಿ ನಿಂತು ತಾನು ಮಹಾಘೋರ ನಾರಾಯಣಾಸ್ತ್ರವನು ಬಿಡೆ ದೂರ ಮಾಡೆ ಮಾಧವನು" ಎಂದು ಗೋಪಾಲದಾಸರೆಂದರೆ, ಶ್ರೀಪಾದರಾಯರು "ಗುರುಸುತನು ಸಂಗರದಿ ನಾರಾಯಣಾಸ್ತ್ರವನು ಉರವಣಿಸಿ ಬಿಡಲು ಶಸ್ತ್ರವ ಬಿಸುಟರು ಹರಿಕೃಪೆಯ ಪಡೆದಿರ್ದ ಭೀಮ ಹೂಂಕಾರದಿಂ ಹರಿಯ ದಿವ್ಯಾಸ್ತ್ರವನು ನೆರೆ ಅಟ್ಟಿದ" ಎಂದರೆ, ಕನಕದಾಸರು "ಗುರುವಿನೊಳುದಿಸಿದನ ಶರವ ತಪ್ಪಿಸಿ ತನ್ನ ದಾಸರ್ಗೆ ಅನುದಿನ ಕರೆದು ವರವನಿತ್ತು ಮನ್ನಿಸಿ ಸಲಹುವ" ಎಂದು ದ್ರೋಣಪರ್ವಕ್ಕೆ ಮಂಗಳವನ್ನು ಹಾಡಿ ಕೃಷ್ಣನನ್ನು ಕೊಂಡಾಡಿದ್ದಾರೆ.

ದ್ರೋಣರ ಮರಣಾನಂತರ ಕರ್ಣ ಸೇನಾಪತಿಯ ಪಟ್ಟವನ್ನು ಕಟ್ಟಿಸಿ ಕೊಳ್ಳುತ್ತಾನೆ. 'ಕರ್ಣಪರ್ವ'ದಲ್ಲಿ ದಾಸರಿಗೆ ಅತ್ಯಂತ ಪ್ರಿಯವಾದ ಘಟನೆಯೆಂದರೆ ಭೀಮವಿಕ್ರಮವನ್ನು ಮೆರೆಸುವ ದುಶ್ಯಾಸನನ ವಧೆ. ವಿಜಯದಾಸರು "ಮದನೃಪನನುಜನ ಉರವ ಬಗೆದ ಹಸ್ತ, ಸುದತಿಯ ತುರುಬು ತಿದ್ದಿದ ಕರುಣಹಸ್ತ" ಎಂದು ಭೀಮನ ಹಸ್ತವನ್ನು ಕೊಂಡಾಡಿದ್ದಾರೆ. ಶ್ರೀಪಾದರಾಯರು "ವೈರಿ ದುಶ್ಯಾಸನನ ರಣದೊಳಗೆ ಎಡೆಗೆಡಹಿ ವೀರ ನರಹರಿಯ ಲೀಲೆಯ ತೋರಿದ ಕೌರವರ ಬಲ ಸವರಿ ವೈರಿಗಳ ನೆಗ್ಗೊತ್ತಿ ಓರಂತೆ ಕೌರವರ ಕುಲ ತರಿದ" ಎಂದೂ, ಮತ್ತೊಂದು ಕಡೆ "ಮರುಳ ಕೌರವನನುಜನುರವ ಕರದಿ ಸೀಳಿ ರಕ್ತವ ಸುರಿದು ನರಸಿಂಹನಿಗೆ ಅರ್ಪಿಸಿದ" ಎಂದೂ ಹೇಳಿದ್ದಾರೆ. ಪುರಂದರದಾಸರು "ದುರುಳ ದುಶ್ಯಾಸನನ ತೊಡೆಯು ಮೇಲಡಗೆಡಹಿ | ಎರಡು ಬಲದತಿರಥರ ಜರೆದಳಲಿಸಿ ನರಹರಿಯ ಲೀಲೆಯಿಂದವನುರವ ಬಗಿದು ನಿಡಿ | ಗರುಳ ನಿಜಸತಿಗೆ ಮುಡಿಸಿದೆಲ ಭಾಪುರೆ" ಎಂದು ಭೀಮಪರಾಕ್ರಮವನ್ನು ಮೆಚ್ಚಿ ಭಲೆ! ಭಲೆ! ಎಂದರೆ, ಪ್ರಾಣೇಶದಾಸರು "ಕಡುಕೋಪದಿಂದ ಹೂಂಕರಿಸಿ ಪುರಿಯುಗುಳುತಲಿ | ಪೊಡವಿ ನಡುಗಿಸಿ ನಭವ ಬೆಯ್ಯುಸುತಲೀ | ಪಿಡಿದು ದುಶ್ಯಾಸನನ ತೊಡೆಯಲ್ಲಿ

ನೆರಿಗೆಡಹಿ | ವಡಲ ಭೇದಿಸಿ ರಕ್ತಮಜ್ಜನವ ಗೈದೆ | ಕರುಳದಂಡೆಯು ಮಾಡಿ ಅರಸಿ ಮುಡಿಗೆ ಮುಡಿಸಿ | ಖರೆಯು ಮಾಡಿದಿ ಉಭಯತರ ಶಪಥವ" ಎಂದು ಭೀಮ ದ್ರೌಪದಿಯರ ಪ್ರತಿಜ್ಞೆ ಪೂರೈಸಿತು ಎಂದು ಹೇಳಿದ್ದಾರೆ. ಕೇಶವದಾಸರು ಇನ್ನೂ ಭಯಂಕರವಾದ ರೀತಿಯಲ್ಲಿ ಇದನ್ನು ವರ್ಣಿಸಿದ್ದಾರೆ. "ಕಟಕೆಲ್ಲ ಕುರುಕ್ಷೇತ್ರದಲ್ಲೀ| ಬಹಳ ಘಟಿತವಾಗಿ ನೆರದಿರಲೀ | ಕುಟಿಲ ದುಶ್ಶಾಸನಿದ್ದನಲ್ಲೀ | ಭೀಮಾರ್ಭಟಿಸುತ ಲವನ ಕಾಣುತಲೀ | ಕಟಕಟನೆ ಪಲ್ಗಡಿದು ಅಸುರನ | ಪಟಪಟನೆ ಕರುಳನ್ನೆ ಹರಿಯುತ | ಪುಟಪುಟನೆ ಹಾರುತಲಿ ರಣದೊಳು | ಘಟಘಟಾ ಘಟಲೆಂದು ಸೀಳಿದ". ಹೀಗೆ ದುಶ್ಶಾಸನನನ್ನು ಸೀಳಿದ ಮಾತ್ರಕ್ಕೆ ಅವನ ಕೋಪ ಶಮನ ವಾಗಲಿಲ್ಲ. "ಗಡಬಡಿಸುತ ಭೀಮನಾಗೇ | ಯುದ್ದು ನಡೆದನು ತುಡುಗರ ಬಳಿಗೇ| ತಡಮಾಡದಲೆ ಬಹುಬ್ಯಾಗೇ ದೊಡ್ಡ ಗಿಡ ಕಿತ್ತಿ ಪಿಡಿದ ಕೈಯೊಳಗೇ | ಘುಡಿ ಘುಡಿಸಿ ರೋಷದಲಿ ಅಸುರರ | ಬಡಿಬಡಿದು ಮುಕುಟವನೆ ಕಿತ್ತುತ | ಕಡಿಕಡಿದು ರಥಗಳನೆ ತರಿವುತ | ಧಡಧಡಾ ಧಡಲೆಂದು ಕೆಡಹಿದ." ಇಲ್ಲಿ ಬಂದಿರುವ ಅನುಕರಣ ಶಬ್ದಗಳು ರೌದ್ರರಸವನ್ನು ಹರಿಸಿ, ಭೀಮನ ಕೋಪ, ಅಟಾಟೋಪ ಗಳನ್ನು ಬಹು ಚೆನ್ನಾಗಿ ಮೂಡಿಸಲು ಸಹಕಾರಿಯಾಗಿವೆ. ದುಶ್ಶಾಸನನ ವಧೆಯನ್ನು ಗೋಪಾಲದಾಸರು ಸುದೀರ್ಘವಾಗಿ ಬಿತ್ತರಿಸಿದ್ದಾರೆ. "ವಿಭವ ಮದದಿ ದುಶ್ಶಾಸನನು ಮಹಾ | ಇಭದಂತೆ ಮದವೇರಿ ತಾನು ಅತಿ | ಪ್ರಭೆಯುಳ್ಳ ಕನಕರಥವನ್ನು ಏರಿ | ಅಭಿಮುಖದಲಿ ಬರೆ ನೀನು ಆಹಾ | ಸ್ವಭುಜ ವಿಕ್ರಮದಿಂದ ಉಭಯ ದಳದವರಿಗಭಿಮುಖನೆನಿಸಿ ಸುಲಭದಿಂದ ಕಾದಿದ್ಯೊ". ಅವನು ಹೋರಾಡಿದ್ದು ಸಹ ಕ್ರಮಬದ್ಧವಾಗಿಯೇ ಇತ್ತಂತೆ! "ಮಡುಹಿದ್ಯವನ ಸಾರಥಿ ಯನು ಬೇಗ ಕೆಡಹಿದ್ಯೊ ಅಶ್ವಧ್ವಜವನು ಆಗ ಕಡಿದೆಯೊ ಕರದ ಚಾಪವನು ಅವ ಪೊಡವಿಗಿಳಿದು ಬರೆ ನೀನು ಬಡಿದು ಗದೆಯಿಂದ ಹೊಡೆದು ಅವನ ಕಾಯ ಪಿಡಿದು ತಿರುಗಿಸುತ ಬಡಿದ್ಯೊ ನೀ ಧರೆಯಲ್ಲಿ". ಕೆಳಗೆ ಬಿದ್ದ ದುಶ್ಶಾಸನನನ್ನು "ಭರದಿ ಕಪೋಲವ ಹಣಿದು ನಿನ್ನ | ಕರದಿ ಕಠಾರಿಯ ಪಿಡಿದು ವೋರೆ | ತೆರದು ನೋಡೆಲೊ ಎಂದು ಕರೆದು ಎಲೊ ಮರೆತ್ಯಾ ಸಭೆಯೊಳ್ ನುಡಿದುದು | ಕರೆಯೊ ನಿನ್ನಣ್ಣನ ಅನುಜನ ಬಿಡಿಸೆಂದು ಪರಿಪರಿ ಭಂಗಿಸಿ ಚರಣದಿ ತುಳಿದ್ಯೆಯು". ಆದರೂ ಅವನ ಕೋಪ ಇಳಿಯುವುದಿಲ್ಲ, ಬದಲಿಗೆ ಹೆಚ್ಚುತ್ತಾ ಹೋಗುತ್ತದೆ. "ಶಿಡಿಲನುಪಮ ರೋಷದಲ್ಲಿ ಮುಷ್ಟಿ | ಹೊಡೆದು ಅವನ ವಕ್ಷದಲ್ಲಿ ರಕ್ತ | ಮಡುವು ಮಾಡಿದ್ಯೊ ಖಡ್ಗದಲ್ಲಿ ನೀ | ಪಿಡಿದ್ಯೊ ಶೋಣಿತ ಬೊಗಸೆಯಲಿ | ಒಡನೆ ವೋರೆಗೆ ಚೆಲ್ಲಿ ಕುಡಿದಂತೆ ತೋರಿಸಿ | ಕಡೆಗಾಲದ ಮೃಡನೊಡೆಯನಂತೊಪ್ಪಿದ್ಯೊ". ಇವನ ಈ ಕಾರ್ಯವನ್ನು ನೋಡಲಂಜಿ ಎರಡು ದಳದವರೂ ದೂರಸರಿದರಂತೆ. ದುರುಳನ ಶಿರವ ಭೀಮ ಕತ್ತರಿಸಲು, ಸುರರು ದುಂದುಭಿ ವೊಳಗಿದರು. ಗೋಪಾಲದಾಸರು ಮತ್ತೊಂದು ಕಡೆ "ನಡುರಣದಲಿ ಬಂದು ಘುಡಿಘುಡಿಸುತ ನಿಂದು | ಜಡ

ಜಂಗಮರೆಲ್ಲ ನಡುಗೆ ದುಶ್ಶಾಸನ| ನ್ಹಿಡಿದು ಕೆಡಹಿ ಬಡಿದೊಡಲು ಬಗೆದು ರಕ್ತ| ಕುಡಿದಂತೆ ತೋರಿಸಿ ಮಡದಿಗೆ ಕರುಳನು ಮುಡಿಸಿದೆ" ಎಂದು ಹೇಳಿದ್ದಾರೆ. ಪುರಂದರದಾಸರು ಒಂದು ಕಡೆ "ಘೋರ ಪಾತಕಿ ದುಶ್ಶಾಸನನ ರಕುತವ ಹೀರಿದೆ" ಎಂದು ಹೇಳಿರುವುದನ್ನು ಬಿಟ್ಟರೆ ಉಳಿದ ದಾಸರು ಅನೇಕ ಬಗೆಯಾಗಿ ದುಶ್ಶಾಸನನ ವಧೆಯನ್ನು ವರ್ಣಿಸಿದ್ದರೂ ಭೀಮ ರಕ್ತವನ್ನು ಕುಡಿದ ಎಂಬ ಅಂಶವನ್ನು ಮಾತ್ರ ಹೇಳಿಲ್ಲ. ಗೋಪಾಲದಾಸರು 'ರಕ್ತ ಕುಡಿದಂತೆ ತೋರಿಸಿದ' ಎನ್ನುತ್ತಾರೆ! ಅಂದರೆ ಅದು ಬರಿಯ ನಟನೆಯೇ ಹೊರತು ನಿಜವಾಗಿ ಭೀಮ ರಕ್ತಕುಡಿಯು ವಂತಹ ರಾಕ್ಷಸನಲ್ಲ ಎಂಬುದು ಅವರ ಅಭಿಪ್ರಾಯ. ಇದರಿಂದ ದಾಸರ ರುಚಿ ಹಾಗೂ ದೃಷ್ಟಿಗಳು ಗೋಚರವಾಗುತ್ತದೆ.

ಕರ್ಣ ಅರ್ಜುನರ ಯುದ್ಧ ಭೀಕರವಾಗಿ ಮುಂದುವರಿಯುತ್ತದೆ. ಕೊನೆಗೆ ಕರ್ಣ ಅರ್ಜುನನ ಮೇಲೆ ಸರ್ಪಾಸ್ತ್ರವನ್ನು ಪ್ರಯೋಗಿಸುತ್ತಾನೆ. ಶ್ರೀಹರಿ ರಥವನ್ನು ಕೆಳಕ್ಕೆ ಅದುಮಿ ಪಾರ್ಥನನ್ನು ರಕ್ಷಿಸುತ್ತಾನೆ. ಇದನ್ನು ಕನಕದಾಸರು "ದಾಯಾದ್ಯನ ಮಗನ ಸಾಯಕವದು ತೀವ್ರದಿ ಬರುತಿರೆ ಕಂಡು ಮಾಯಾಪತಿ ಭೂಮಿಯನೊತ್ತಿ ತನ್ನಯ ಬೀಯಗಾರನ ತಲೆಕಾಯಿದ" ಎಂದೂ, ಮತ್ತೊಂದೆಡೆ "ಒಲಿದು ಪಾರ್ಥನ ರಥವನೊತ್ತಿದ ಪಾದ" ಎಂದೂ ನೆನೆದಿದ್ದಾರೆ. ಪುರಂದರ ದಾಸರು "ಸರ್ಪಬಾಣ ಉರಿಯುತ ಬರಲು ಕಂ| ದರ್ಪನ ಪಿತ ನೀ ರಣದಲ್ಲಿ| ತಪ್ಪಿಸಿ ಪಾರ್ಥನ ರಥ ನೆಲಕೊತ್ತಿದೆ" ಎಂದು ಕೃಷ್ಣನ ಭಕ್ತವಾತ್ಸಲ್ಯವನ್ನು ಕೊಂಡಾಡುತ್ತಾರೆ.

ಕೃಷ್ಣನ ಕೃಪೆಯಿಂದ ಅರ್ಜುನ ಬದುಕುಳಿಯಲು, ಸರ್ಪಾಸ್ತ್ರ ಮರಳಿಬಂದು ತನ್ನನ್ನು ಪುನಃ ಪ್ರಯೋಗಿಸುವಂತೆ ಬೇಡಲು, ಕರ್ಣ ತಾಯಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ನಿರಾಕರಿಸುತ್ತಾನೆ. ಇದರಿಂದ ಕೋಪಗೊಂಡ ಶಲ್ಯ ಸಾರಥಿಪದವನ್ನು ತಿರಸ್ಕರಿಸಿ ರಥದಿಂದ ಇಳಿದು ಹೊರಟುಹೋಗುತ್ತಾನೆ. ಈ ಸನ್ನಿವೇಶವನ್ನು ಕನಕದಾಸರು "ಮಥಿನಿಸಿ ಸೂತತನವ ಮಾಡಿ ರಣದೊಳು| ಅತಿ ಹೀನಗಳೆಯುತ ರವಿಸುತನ | ರಥದಿಂದಿಳಿದು ಪೋಗೆ ಕೌರವಬಲವನು ಹತ ಮಾಡಿದವ ಶಲ್ಯನೋ" ಎಂದು ಕೌರವರ ನಾಶಕ್ಕೆ ಶಲ್ಯನೂ ಕಾರಣವೆಂದು ಹೇಳಿದ್ದಾರೆ. ಹಾಗೆಯೆ ಕರ್ಣನ ಅವಸಾನವನ್ನು ಕುರಿತು "ತೊಟ್ಟ ಬಾಣವ ತೊಡಲೊಲ್ಲದೆ ಮಾತೆಗೆ ಕೊಟ್ಟ ಭಾಷೆಗೆ ನಾಲ್ವರ ಕೊಲ್ಲದೆ ನೆಟ್ಟನೆ ರಣಮುಖದಲಿ ತನ್ನ ಪ್ರಾಣವ ಬಿಟ್ಟು ಕೊಂದವ ಕರ್ಣನೊ" ಎಂದು ನುಡಿದು ಕರ್ಣ ತನ್ನ ಸಾವಿಗೂ, ಕೌರವರ ನಾಶಕ್ಕೂ ತಾನೇ ಕಾರಣನಾದ ಎಂಬುದನ್ನು ಸೂಚಿಸಿ, ದೂರು ಮಾತ್ರ ನಿರಪರಾಧಿಗಳಾದ ಪಾಂಡವರಿಗೆ ಬಂದಿದೆ ಎಂದಿದ್ದಾರೆ.

'ಶಲ್ಯಪರ್ವ'ದ ಕಥೆ ತೀರ ಸಾಮಾನ್ಯ. ಕುಮಾರವ್ಯಾಸನಂಥ ಮಹಾ ಕವಿಯೇ ಕೇವಲ ಮೂರು ಅಧ್ಯಾಯಗಳಲ್ಲಿ ಅದರ ಕಥೆಯನ್ನು ಮುಗಿಸಿದ್ದಾನೆ

ಎಂದಮೇಲೆ ದಾಸರು ಎಷ್ಟೆಂದು ಹಾಡಿಯಾರು ? ಅಲ್ಲಿ ಭೀಮಪ್ರತಾಪವೂ ಇಲ್ಲ; ಹರಿಯ ಮಾಹಾತ್ಮ್ಯೆಯೂ ಇಲ್ಲ. ಆದ್ದರಿಂದ ದಾಸರು ಆ ಪರ್ವದತ್ತ ತಮ್ಮ ಗಮನವನ್ನು ಹರಿಸಿಲ್ಲ. ಕನಕದಾಸರು ಮಾತ್ರ ಒಂದು ಕಡೆ "ಯಮಳರನು ಪಡೆದ ತಾಯಿಗೆ ಸಹೋದರನು | ಭೂರಮಣರೊಳಗಗ್ಗಳೆಯನತಿ ಧೈರ್ಯನು ಸಮರದಲಿ ರವಿಸುತನ ರಥಕೆ ಸೂತನ ಮಾಡಿ | ಯಮಸುತನ ಕೈಲಿ ಮಾವನನು ಕೊಲ್ಲಿಸಿದೆ" ಎಂದು ಹೇಳಿ ಕೃಷ್ಣ ಯಾರಿಗೂ ಬಾಂಧವನಲ್ಲ, ತನ್ನಿಚ್ಛೆಗನುಸಾರವಾಗಿ ಎಲ್ಲರನ್ನೂ ಮಣಿಸುತ್ತಾನೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಕೌರವ ತನ್ನವರೆಲ್ಲಾ ಮಡಿದ ಮೇಲೆ ತಾನೇ ಸೇನಾಧಿಪತಿಯಾಗುತ್ತಾನೆ. ಸರೋವರದಲ್ಲಿ ಅಡಗಿದ್ದ ಅವನನ್ನು ಭೀಮ ಹೊರಗೆಳೆದು ಗದಾಯುದ್ಧ ಪ್ರಾರಂಭಿಸುತ್ತಾನೆ. ತನಗೆ ಭೀಮನೇ ಸರಿಯಾದ ಜೋಡಿ ಎಂಬುದಾಗಿ ಕೌರವ ನಿರ್ಧರಿಸಿದ್ದನ್ನು ಗುರುಪುರಂದರದಾಸರು ಹೀಗೆ ಹೇಳಿದ್ದಾರೆ. "ಕುರುಪತಿ ಯಮಜ ಪಾರ್ಥ ನಕುಲ ಸಹದೇವರನು | ಜರಿದು ನಿನ್ನನು ಸಂಗರಕೆ ವರಿಸಲು ಧರೆಭಾರ ಹಾರಿ ಗುರುಪುರಂದರವಿಠಲನಿದಿರ | ಉರವಣಿಸಿ ಅವನ ಮುರಿದೆಲ ಭಾಪುರೆ" ಎಂದು ಭೀಮನನ್ನು ಹೊಗಳುತ್ತಾರೆ. ವಿಜಯದಾಸರು "ದುರಿಯೋಧನ ಬಂದು ತರುಬಲಾಕ್ಷಣ ಅವನ ತರಿದು ಬಿಸುಟು ಶಿರವ ಮೆಟ್ಟಿದ ಮಹಚರಣ" ಎಂಬುದಾಗಿ ಭೀಮನ ಚರಣವನ್ನು ಸ್ತುತಿಸಿದ್ದಾರೆ. ಕನಕದಾಸರು "ಜಲದೊಳು ಮುಳುಗಿ ತಪವಮಾಡಿ ಬಲವನು ಛಲದಿಂದೆಬ್ಬಿಸಿ ಕಾದುವೆನೆಂದವ ಕೌರವನೊ" ಎಂದು ಹೇಳಿ ಕುರುವಂಶ ನಾಶಕ್ಕೆ ಕೌರವನೇ ಕಾರಣ ಎಂದು, ಮತ್ತೊಂದು ಸಲ "ಜನವರಿಯದಂತೆ ಜೀವನದೊಳಡಗಿರ್ದವಗೆ ಮನಕೆ ಖತಿಗೊಳಿಸಿ ಬರಸೆಳೆದು ನಗುತ | ಅನುವರದೊಳಾಯತದ ತೊಡೆಯ ಸನ್ನೆಯ ತೋರಿ | ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ" ಎಂದು ಎಲ್ಲಕ್ಕೂ ಕೃಷ್ಣನೇ ಮೂಲಕಾರಣ ಎಂದು ನುಡಿದಿದ್ದಾರೆ. ಕೇಶವದಾಸರು "ಪೂಶರಜನಕ ತಾನೊಲಿದೂ | ಉಪದೇಶ ಕೊಟ್ಟನು ಭೀಮಗೊಂದೂ | ದ್ವೇಷಿ ದುರ್ಯೋಧನನ ಹಿಡಿದೂ | ತೊಡೆ ನಾಶ ಮಾಡೆಲೊ ಎಂದು ನುಡಿದೂ | ರೋಷದಲಿ ಬೊಬ್ಬಿರಿದು ಅವನಾ | ಕಾಶಕೊಗೆಯುತ ಭಾಪುರೇ ಗದೆ | ಬೀಸಿ ಬಡಿಯುತ ಕಡಿದೆ ತೊಡೆಗಳ | ಕೇಶವಾ ವಿಠಲೇಶನಾಜ್ಞದಿ" ಎಂದು ಹೇಳಿ ಕೃಷ್ಣನೇ ಸೂತ್ರಧಾರ, ಅವನ ಆಜ್ಞೆಯಂತೆ ಭೀಮ ಕೌರವನ ಊರುಭಂಗ ಮಾಡಿದ ಎಂಬುದಾಗಿ ಹೇಳಿದ್ದಾರೆ. ಗೋಪಾಲದಾಸರು "ಮರುಳ ಕೌರವರನ್ನು ವರಗದೆಯಲಿ ಕೊಂದ" ಎಂತಲೂ, ಇನ್ನೊಂದು ಬಾರಿ "ದುರಿಯೋಧನನ ಊರುಗಳ ಬೇಗ ತರಿದೆಯೊ ಗದೆಯಿಂದ" ಎಂದೂ, ಮತ್ತೊಂದು ಕಡೆ "ಸುಯೋಧನನೊಡನೆ ಗದಾಯುದ್ಧ ಬಿಡದೆ ಜಡಿದು ಮಾಡಿ ಒಡೆಯನಾಜ್ಞದಿ ತೊಡೆ ಕಡಿದು ಪೊಡವಿ ಮೇಲೆ ಕೆಡಹಿದೆ" ಎಂದೂ, ನುಡಿದು ಗದಾಯುದ್ಧ ಮತ್ತು ಊರುಭಂಗಗಳನ್ನು ಹೇಳಿದ್ದಾರೆ.

ತೊಡೆ ಮುರಿದು ಬಿದ್ದ ಕುರುಪತಿಯ ದಾರುಣಸ್ಥಿತಿಯನ್ನು ಕಂಡು ಮರುಗಿ ಕುಪಿತನಾದ ಅಶ್ವತ್ಥಾಮ ಪಾಂಡವರ ತಲೆಗಳನ್ನು ತರುವುದಾಗಿ ಹೇಳಿ ಹೋಗಿ ಕೃಷ್ಣನ ಮೋಸದಿಂದ ಉಪಪಾಂಡವರನ್ನು ಕೊಲ್ಲುತ್ತಾನೆ. ಇದನ್ನು ಕನಕದಾಸರು "ಉರಿಯೊಳಗೆ ಜನಿಸಿದಂಗನೆಯ ನಿಜಸುತರು ಮಂದಿರದೊಳೈವರು ನಿದ್ರೆಗೈಯು ತಿರಲು ನರವೃಕೋದರ ಧರ್ಮನಂದನರನಗಲಿಸಿಯೆ ಗುರುಸುತನ ಕೈಲಿ ಬಾಲಕರ ಕೊಲ್ಲಿಸಿದೆ". ಹೀಗೆ ಹೇಳಿ ಅಶ್ವತ್ಥಾಮ ಬಾಲಕರ ಹತ್ಯೆಗೆ ನಿಮಿತ್ತಮಾತ್ರವೇ ಹೊರತು ನಿಜವಾದ ಕೊಲೆಗಾರ ಕೃಷ್ಣನೇ ಎಂದಿದ್ದಾರೆ. ತನ್ನ ಪ್ರಯತ್ನ ವಿಫಲ ವಾದದ್ದನ್ನು ಕಂಡು ಅಶ್ವತ್ಥಾಮ ಉತ್ತರೆಯ ಗರ್ಭವನ್ನು ನಾಶಮಾಡಲು ಕುಶಿಕಾಸ್ತ್ರವನ್ನು ಪ್ರಯೋಗಿಸುತ್ತಾನೆ. "ಉತ್ತರೆಯ ಗರ್ಭದಲ್ಲಿ ಸುತ್ತುಮುತ್ತಿದ ಅಸ್ತ್ರವನ್ನು ಒತ್ತಿ ಚಕ್ರದಿಂದ ನಿಜಭಕ್ತ ಪರೀಕ್ಷಿತನ ಕಾಯ್ದು" ಎಂದು ವಾದಿರಾಜರು ಕೃಷ್ಣಮಹಿಮೆಯನ್ನು ಹಾಡುತ್ತಾರೆ. ಇಲ್ಲಿಗೆ 'ಗದಾಪರ್ವ' ಮುಗಿಯುತ್ತದೆ.

ಮಹಾಭಾರತದ ಮೇಲಿನ ಹತ್ತು ಪರ್ವಗಳಲ್ಲಿ ಎಲ್ಲಿಯೂ ನೇರವಾಗಿ ಸೇರಿಸ ಲಾಗದ ನೂರಾರು ಭಾರತದ ಘಟನೆಗಳು, ವಿಷಯಗಳು ದಾಸರ ಕೀರ್ತನೆಗಳಲ್ಲಿ ಕಂಡುಬರುತ್ತದೆ. ಇವುಗಳನ್ನು ಸ್ಥೂಲವಾಗಿ ಎರಡು ಭಾಗವಾಗಿ ವಿಂಗಡಿಸಬಹುದು. ಒಂದು ಭೀಮನಸ್ತುತಿ, ಮತ್ತೊಂದು ಭಗವಂತನ ಲೀಲೆ. ಮೊದಲು ಭೀಮನ ಸ್ತುತಿಯನ್ನು ಹರಿದಾಸರು ಹೇಗೆ ಮಾಡಿದ್ದಾರೆ ಎಂಬುದನ್ನು ಗಮನಿಸೋಣ.

ಶ್ರೀಪಾದರಾಯರು "ಲಂಡ ಕೀಚಕ ಬಕರ ಮಂಡೆಯನು ಒಡೆದು ಉದ್ದಂಡ ಮಗಧಾಧಿಪನ ದಂಡವನು ಸೀಳಿ ಭಂಡ ಕೌರವರ ಶಿರ ಚೆಂಡಾಡಿ ಪ್ರಬಲ ರಣಮಂಡಲದಿ ಚಂಡರಿಪುದಂಡೆಗಳ ಖಂಡಿಸಿದೆ" ಎಂದು ಭೀಮನ ಸಾಹಸದ ಪರಿಚಯಮಾಡಿಕೊಟ್ಟಿದ್ದಾರೆ. ವ್ಯಾಸರಾಯರು "ದ್ವಿತಿಯಾವತಾರದಲಿ ದೇವಕೀಜನ ಕಂಡು, ಸತಿಗೆ ಕಾಮಿಸಿದವನ ಸಾಹಸದಿ ಸದೆದೆ, ಪ್ರತಿಯಾದ ಮಾಗಧನ ಪೃತನದಲಿ ನೀ ಕೊಂದೆ ಪ್ರತಿಯ ಕಾಣೆನೊ ನಿನಗೆ ಮೂಜಗದೊಳಗೆ" ಎಂದಿದ್ದಾರೆ. ವೆಂಕಟದಾಸರು "ಕುಂತಿಸುತ ಭೀಮ ದಕ್ಷಕ ಅಸುರಶಿಕ್ಷಕ ಮಾನಿತಜನ ರಕ್ಷಕ| ಭೂಮಿಭಾರವು ಬೇಗವಿಳಿಸಲು| ಅವತರಿಸಲು ಮಾನಿನಿ ಮಾತನಾಡಿಸಲು ಕೌರವಜನ ವೈರ ಬೆಳಸಲು| ಕದನ ಸಲಿಸಲು ಸರ್ವವು ಕೃಷ್ಣಗರ್ಪಿಸಲು" ಎಂದು ನುಡಿದು ಭೀಮ ತನ್ನ ಸಾಹಸಕಾರ್ಯಗಳನ್ನೆಲ್ಲಾ ಕೃಷ್ಣನಿಗೆ ಸಮರ್ಪಿಸಿದ ಎಂದಿದ್ದಾರೆ. ಇದೇ ಅಭಿಪ್ರಾಯವನ್ನು ಪ್ರಸನ್ನ ವೆಂಕಟ ದಾಸರು "ಬಂಧು ಬಳಗಾದಂತೆ ಆಪದ್| ಬಾಂಧವನಾಗಿ ಪಾರ್ಥನಿಗೆ| ಬಂದ ಬಂದ ಭಯಂಗಳ ಪರಿಹರಿಸಿ| ಅಂಧಕಜಾತಕರ ಕೊಂದು| ಅಂದೇ ಕೃಷ್ಣಾರ್ಪಣ ವೆಂದೆ" ಎಂಬುದಾಗಿ ಹೇಳಿದ್ದಾರೆ. ಗೋಪಾಲದಾಸರು "ಐದ(ವ)ರೊಳು ನೋಡಲು ಅತಿಬಲವೆಂದೆನಿಸಿ| ಐದೊಂದು ರಥಿಕರೊಳು ಅಧಿಕವೆನಿಸಿ| ಐದು ಪುರ ಬೇಡೆ ಕೊಡದಿರಲವನ ಮಡದಿಯರ| ಐದು ಮುತ್ತೈತನ ದೂರಮಾಡಿದ"

ಎಂದು ಚಮತ್ಕಾರದಿಂದ ಭೀಮನನ್ನು ಸ್ತುತಿಸಿದ್ದಾರೆ. ಗೋಪಾಲದಾಸರು ಭೀಮವನ್ನು ಕೊಂಡಾಡುವುದಕ್ಕಾಗಿಯೇ ಮತ್ತೊಂದು ದೊಡ್ಡ ಕೀರ್ತನೆಯನ್ನು ರಚಿಸಿದ್ದಾರೆ. "ಸಹಜ ಬಲವಂತ, ದುರ್ಜನ ಕುಠಾರಿ, ಕೌರವಸೇನಾಕಾಂತಾರ ಪಾವಕ, ದೀನೋದ್ಧಾರಿ, ವೃಕೋದರ, ವಿಷ್ಣುಸೇವಕ, ವಿಜ್ಞಾನಾಂಬುಧಿ, ಬಕಮದ ಧ್ವಂಸಿ, ಜಟಾಸುರಾಂತಕ, ಹಿಡಿಂಬಕಾಸುರ ಗರ್ವಪರ್ವತಪವಿಧರ, ಹಿಡಿಂಬಕೀ ಚಿತ್ತಕುಮುದಕೋರಕ...." ಇತ್ಯಾದಿ ಅನೇಕ ವಿಶೇಷಣಗಳಿಂದ ಸ್ತುತಿಸಿದ್ದಾರೆ.

ವಾದಿರಾಜರು ಹಲವಾರು ಹಾಡುಗಳಲ್ಲಿ ಭೀಮನನ್ನು ಸ್ತೋತ್ರಗೈದಿದ್ದಾರೆ. "ಅರ್ಜುನಗೆ ಅಣ್ಣನಾಗಿ ಅಂದು ದುರ್ಯೋಧನನ ಲಜ್ಜೆಯನೆ ಕೆಡಿಸಿ ಬಹು ಖಳರ ಮುರಿದು ಮೂಜ್ಜಗವಾಳುವ ಮಗಧಾಧಿಪನ ಸೀಳ್ದ ಸಜ್ಜನಪ್ರಿಯ ಭೀಮಸೇನ" ಎಂತಲೂ, ಮತ್ತೊಂದು ಸಲ "ದ್ವಾಪರಾಂತ್ಯದಲಿ ಶ್ರೀಕೃಷ್ಣ ನಂಘ್ರಿಯ ಭಜಿಸಿ ಪಾಪಿ ಮಾಗಧ ಬಕ ಕೀಚಕಾದಿಗಳ ಕೋಪದಿಂದಲಿ ತರಿದು ಕುರುಕುಲವ ಸವರಿ ಪ್ರತಾಪದಿಂದಲಿ ಮೆರೆದೆ ಖಳರ ನೀ ಮುರಿದೆ" ಎಂದೂ, ಇನ್ನೊಮ್ಮೆ "ಭೂಮಿಭಾರವನಿಳುಹೆ ಬಂದೆ ಕಲಿಭೀಮ ಕಾಮಿ ಕೀಚಕರನ್ನು ಕುಟ್ಟಿ ರಣಧಾಮ, ಭಾಮಿನೀ ದ್ರೌಪದಿ ಕಷ್ಟನಿರ್ಧೂಮ" ಎಂದು ಮುಂತಾಗಿ ಭೀಮನ ಸಾಹಸಗಳನ್ನೆಲ್ಲಾ ಹೇಳಿ ವಿಶೇಷವಾಗಿ ಹೊಗಳಿದ್ದಾರೆ. ಜಗನ್ನಾಥ ದಾಸರು "ಬಿನ್ನೈಪೆ ನಿನಗಾನು ಭೀಮಸೇನ" ಎಂಬ ಕೀರ್ತನೆಯಲ್ಲಿ ಭೀಮನನ್ನು ವಿಧವಿಧವಾಗಿ ಕೊಂಡಾಡಿ, ಎಲ್ಲರನು ಸಲಹೆಂದು ಪ್ರಾರ್ಥಿಸುತ್ತಾರೆ. ಮತ್ತೊಂದು ಕೃತಿಯಲ್ಲಿ "ಕುರುಕುಲದೊಳಗೆ ಉದ್ಭವಿಸಿ, ಬಲುಗರಳ ಪದಾರ್ಥವ ಸಲಿಸಿ ಚೆಲ್ವ ತರುಣಿ ರೂಪವನೆ ಶೃಂಗರಿಸಿ ನಿಶಾಚರ ಕೀಚಕನ ಸಂಹರಿಸಿ, ಆಹಾ ಜರೆಯ ಸುತನ ಸೀಳಿ ಧರಣಿಪಾಲಕರನ್ನು ಸೆರೆಯ ಬಿಡಿಸಿ ಕಾಯ್ದ ಪರಮ ಸಮರ್ಥನೆ" ಎಂದು ಮೆಚ್ಚಿದ್ದಾರೆ. ಪುರಂದರದಾಸರು ಬೇರೆ ಬೇರೆ ಹಾಡುಗಳಲ್ಲಿ ಭೀಮನನ್ನು ಕುರಿತು ಹಾಡಿದ್ದಾರೆ. "ರೋಮ ರೋಮಕೆ ಕೋಟಿ ಲಿಂಗವುದುರಿಸಿದ ಭೀಮನ ನೆನೆದರೆ ಬಿಟ್ಟು ಹೋಗದೆ ಪಾಪ" ಎಂದಿದ್ದಾರೆ. "ಗೋಪಿಸುತನ ಪಾದ ಪೂಜಿಸಿ ಗದೆಯ ಧರಿಸಿ ಬಕಾಸುರನ ಸಂಹರಿಸಿದೆ। ದ್ರೌಪದಿಯ ಮೊರೆಯ ಕೇಳಿ ಮತ್ತೆ ಕೀಚಕನ್ನ ಕೊಂದು। ಭೀಮನೆಂಬ ನಾಮಧರಿಸಿ ಸಂಗ್ರಾಮಧೀರನಾಗಿ ಜಗದಿ ಮೆರವೆ" ಎಂತಲೂ, ಇನ್ನೊಮ್ಮೆ "ಬಂಧುಬಳಗದಂತೆ ಆಪದ್ಬಾಂಧವನಾಗಿ ಪಾರ್ಥನಿಗೆ। ಬಂದ ಬಂದ ದುರಿತಗಳ ಪರಿಹರಿಸಿ ಅಂಧಕಜಾತರ ಕೊಂದು ನಂದಕಂದಾರ್ಪಣೆಂದು" ನುಡಿದ ಭೀಮನೆ ನಮ್ಮ ಬಂಧು ಬಳಗ—ಎಂದಿದ್ದಾರೆ. ಪುರಂದರದಾಸರು ಮತ್ತೊಂದು ಕೀರ್ತನೆಯಲ್ಲಿ ಭೀಮನನ್ನು ಕುರಿತು "ಕುರು ಕುಲಾಂಬುಧಿ ಸೋಮ । ಎಂದೆಣಿಸಿದನೆ ಮಹಾ। ಗುರು ಪರಾಕ್ರಮ ಭೀಮ। ದ್ರೌಪದಿ ಮನೋಜಯ। ಕರುಣವಾರಿಧಿ ಸೋಮ। ರಣರಂಗ ಧಾಮ। ದುರುಳ ದುರ್ಯೋಧನನು ನಿಮ್ಮನು । ಅರಗಿನರಮನೆಯಲ್ಲಿ ಪೊಗಿಸಲು । ಹಿರಿಯ

ಧರ್ಮಾದಿಗಳ ಕೈಗೊಂಡ್ಹರುಷದಿಂದಲಿ ತೆರಳಿ ಬಂದಾ| ನರಹಿಡಿಂಬಕ ಬಕ ಮುಖಾದ್ಯರ| ತರಿದು ಯದುಕುಲಜಾತ ಕೃಷ್ಣನ | ಪರಮ ಕಿಂಕರನಾಗಿ ಸತತದಿ| ಮೆರೆವ ಪಾಂಡವಜಾತ ಖ್ಯಾತ" ಎಂದು ಹೃದಯತುಂಬಿ ಬಾಯಿತುಂಬ ಪ್ರಶಂಸಿಸಿದ್ದಾರೆ. ಹೀಗೆ ದಾಸರು ಇನ್ನೂ ಅನೇಕ ವಿಧದಲ್ಲಿ ಹಲವಾರು ಕಡೆ ಭೀಮನನ್ನು ಸ್ತುತಿಗೈದಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ಭೀಮನ ಸಾಹಸ ಪರಾಕ್ರಮಗಳು ದಾಸರ ಮನಸ್ಸನ್ನು ಹೆಚ್ಚಾಗಿ ಆಕರ್ಷಿಸಿವೆ ಎಂಬುದರಲ್ಲಿ ಸಂದೇಹವಿಲ್ಲ.

ಭೀಮಪ್ರತಾಪವನ್ನು ಮೆಚ್ಚಿ ಕೊಂಡಾಡಿದ ದಾಸರು ಭಗವಂತನ ಅಪಾರ ಲೀಲೆಯನ್ನು ಮುಕ್ತ ಕಂಠದಿಂದ ಹಾಡಿದ್ದಾರೆ. ಆ ಕೃಷ್ಣಪರಮಾತ್ಮ ಮಹಾಭಾರತದ ವ್ಯಕ್ತಿಗಳನ್ನು ತನ್ನ ಇಚ್ಛೆಗನುಗುಣವಾಗಿ ಕುಣಿಸಿ, ಶಿಷ್ಟ ರಕ್ಷಕ ದುಷ್ಟ ಶಿಕ್ಷಕ ಎಂಬ ಬಿರುದನ್ನು ಸಾರ್ಥಕಪಡಿಸಿಕೊಂಡಿದ್ದಾನೆ. ಆದ್ದರಿಂದಲೇ ದಾಸರು ಅವನನ್ನು 'ಪಾಂಡವಪ್ರಿಯ', 'ಪಾಂಡವಪಕ್ಷ' 'ದ್ರೌಪದೀ ಮಾನಸಂರಕ್ಷಕ' ಮುಂತಾದ ವಿಶೇಷಣಗಳಿಂದ ಕರೆದಿದ್ದಾರೆ. ಇದನ್ನು ಪ್ರಸನ್ನ ವೆಂಕಟದಾಸರು "ಹರಿ ನೀ ಗೆಲಿಸೆ ಪಾರ್ಥನಿಗೆ ಗೆಲುವು ಹರಿ ನೀ ಮುನಿದ ಕೌರವರಿಗೆ ಅಳಿವು" ಎಂದು ಹೇಳಿದ್ದಾರೆ. ಮತ್ತೊಂದು ಕಡೆ "ಕುರುಕಂಟಕರು ಅಭಿಮಾನವ ಕೊಳುತಿರೆ ಹರಿನಾಮ ಸತಿಮಾನ ಕಾಯ್ದಿತು | ಮರುಳೊಮ್ಮೆ ದುರ್ವಾಸ ದ್ರೌಪದಿ ಗುಣ ಬೇಡೆ ಹರಿನಾಮ ಇರುಳಲಿ ಕಾಯ್ದಿತು | ಗುರುಪುತ್ರನುರಿಬಾಣ ಉರ ವಣಿಸಿ ಬರೆ | ಹರಿನಾಮ ಪಾಂಡವರ ಕಾಯ್ದಿತು" ಎಂದು ಹರಿನಾಮದ ಹಿರಿಮೆಯನ್ನು ಹೇಳಿದ್ದಾರೆ. ಗೋಪಾಲದಾಸರು "ಧನಗಳಿಸಿದ ಸುಯೋಧನನೇನಾದ ಕೊನೆಗೆ" ಎಂದೂ, "ಸುತರಿಂದ ಧೃತರಾಷ್ಟ್ರ ಗತಿಯೇನು ಕಂಡ" ಎಂದೂ ಕೇಳಿ, ಎಲ್ಲಕ್ಕಿಂತ ಭಗವಂತನ ಭಕ್ತಿಯೇ ಮುಖ್ಯ ಎಂದಿದ್ದಾರೆ. ವಿಜಯದಾಸರು 'ಹರಿನಾಮ ಸುಳಾದಿ'ಯಲ್ಲಿ "ಹರಿನಾಮ ಭೀಷ್ಮನ ಪಂಥವ ಗೆಲಿಸಿತು.... ಹರಿನಾಮ ದ್ರೌಪದಿಯ ಮಾನವ ಕಾಯಿತು....ಹರಿನಾಮ ವಿದುರನ ಕ್ಷೀರಕ್ಕೆ ಹಿಗ್ಗಿತು....ಹರಿನಾಮ ಪಾರ್ಥನ ಜೀವವ ಉಳಿಸಿತು" ಎಂದಿದ್ದಾರೆ. ಪಂಪ ತನ್ನ ಭಾರತದಲ್ಲಿ ಒಂದು ವೃತ್ತವನ್ನು ಬರೆದು ಮಹಾಭಾರತದ ಮುಖ್ಯ ಪಾತ್ರಗಳಿಗೆಲ್ಲಾ ಒಂದೊಂದು ಗುಣವನ್ನು ಆರೋಪಿಸಿರುವಂತೆ, ವಿಜಯದಾಸರು ಸಹ ತಮ್ಮ ಒಂದು ಕೀರ್ತನೆಯಲ್ಲಿ "ಆಯುವಿನಲಿ ದ್ರೋಣಸುತ ಕೃಪ....ಶೂರತನದಲಿ ಭೀಷ್ಮ ಅಭಿಮನ್ಯು....ಬಲದಲಿ ಶಲ್ಯ ಕೀಚಕ....ತಿಳಿನಳಿಕೆಯಲಿ ವಿದುರ ಸಂಜಯ.... ಯುಕುತಿಯಲಿ ಸಹದೇವ....ಭಕುತಿಯಲಿ ಬಲಭೀಮ....ತ್ಯಾಗದಲಿ ಕರ್ಣ.... ಘನ್ನಮದದಲಿ ಧೃತರಾಷ್ಟ್ರ....ಕ್ರತು ಮಾಡುವಲ್ಲಿ ಧರ್ಮಪುತ್ರ" ಎಂದು ಹೇಳಿ ಈ ಯಾವ ಗುಣಗಳೂ ಇಲ್ಲದಿರುವ ನೀನು ಹಿಗ್ಗದಿರು ಎಂದು ಎಚ್ಚರಿಸಿದ್ದಾರೆ. ಶ್ರೀಪಾದರಾಯರು ಸಂಸಾರವನ್ನು ನೆಚ್ಚಿ ಕೆಡಬೇಡ ಎಂದು ಹೇಳುವಾಗ

"ಕೌರವನು ಧರೆಯೆಲ್ಲ ತನಗಾಗಬೇಕೆಂದು ವೀರ ಪಾಂಡವರೊಡನೆ ಕದನ ಮಾಡಿ ಮಾರಿಯ ವಶವೈದಿ ಹೋದಾಗ ತನ್ನೊಡನೆ ಶ್ಯಾರೆ ಭೂಮಿಯುವೈದುದಿಲ್ಲವೂ ನೋಡೊ" ಎಂಬುದಾಗಿ ಕೌರವನ ಉದಾಹರಣೆಯನ್ನು ಕೊಟ್ಟಿದ್ದಾರೆ. ಪುರಂದರ ದಾಸರು "ಭೂಮಿಯ ಲೋಭದಿ ಕೌರವ ಕೆಟ್ಟ ಧರ್ಮಗೆ ರಾಜ್ಯವ ಬಿಟ್ಟ" ಎಂದು ಹೇಳಿ ಅಭಿಮಾನದಿಂದ ದುರ್ಯೋಧನಗೆ ಹಾನಿಯಾಯಿತು ಎಂದಿದ್ದಾರೆ. "ಗುರು ಭೀಷ್ಮ ಕರ್ಣ ಅಶ್ವತ್ಥಾಮ ಜಯದ್ರಥರ ಪರಿಭವಗೈದ ನಾಮ। ಕುರುಸೈನ್ಯ ಶರಧಿ ಯೊಳು ಪಾಂಡವರ ದಾಟಿಸಿತು ಸಿರಿಕೃಷ್ಣ ದಿವ್ಯನಾಮ" ಎಂದು ಒಮ್ಮೆ ಹೇಳಿ ಮಗದೊಮ್ಮೆ "ಕಲಹಬಾರದ ಹಾಗೆ ಕರ್ಣನನು ನೀ ಕೊಂದೆ| ಸುಲಭದಲಿ ಕೌರವರ ಮನೆಯ ಮುರಿದೆ" ಎಂದು ಕೃಷ್ಣನ ಕುಹಕವನ್ನು ಹೊರಗೆಳೆದಿದ್ದಾರೆ. ಶ್ರೀಹರಿಯನ್ನು "ರಾಜಸೂಯವ ಕೇಳಿ ವಾಯುಸುತ ಬಂದಾನೆ ಅರ್ಜುನನು ರಥ ಹೂಡಬೇಕೆಂದು ನಿಂದಾನೆ ಸಾಜಧರ್ಮಜ ಅಗ್ರಪೂಜೆ ಮಾಡುವೆನೆಂದು" ಕಾಯುತ್ತಿದ್ದಾನೆ ಏಳು, ಬೆಳಗಾಯಿತು ಎಂದು ಎಬ್ಬಿಸಿದ್ದಾರೆ.

ಕನಕದಾಸರು ಮಹಾಭಾರತಕ್ಕೆ ಕೃಷ್ಣನೇ ಮೂಲಕಾರಣ ಎಂದಿದ್ದಾರೆ. "ಕೌರವ ಪಾಂಡವರಿಗೆ ಭೇದಪುಟ್ಟಿಸಿ ಫೌಜೊಡ್ಡಿ ಕುರುಕ್ಷೇತ್ರದಿ ಕಾದಿಸಿ ಸಂಶಯ ವಿಲ್ಲದೆ ಕುರುಬಲವನು ಕೊಂದ ಹಿಂಸಕನಾದಿಕೇಶವನೊ" ಎಂದು ದಿಟ್ಟತನದಿಂದ ಹೇಳಿ, ಬರಿದೆ ದೂರು ಬಂದಿದೆ ಪಾಂಡವರಿಗೆ ಎಂದು ಮರುಗಿದ್ದಾರೆ! ಮತ್ತೊಂದು ಕೀರ್ತನೆಯಲ್ಲಿ ಎಲ್ಲರನ್ನೂ ಮೋಸದಿಂದ ಕೊಲ್ಲಿಸಿ "ಸುರಲೋಕದಲಿ ನೆಲೆಗೊಳಿಸಿ ಭಾವಮೈದುನರೈವರನು ರಕ್ಷಿಸಿ ಭೂವಲಯದೊಳು ಕೀರ್ತಿಪಡೆದು ಎಸೆವ ನಮ್ಮ ದೇವ ಕಾಗಿನೆಲೆಯಾದಿಕೇಶವ" ಎಂದಿದ್ದಾರೆ. ಮಂಗಳವನ್ನು ಹಾಡುವಾಗ "ಹರಿಯ ಮಗನ ಶಿರತರಿದನ ತಂದೆಯ ಹಿರಿಯ ಮಗನ ತಮ್ಮನ ಪಿತನ ಭರದಿ ಭುಜಿಸಿದನ ಶಿರದಲಿ ನಟಿಸಿದ ವರ ಕಾಗಿನೆಲೆಯಾದಿಕೇಶವಗೆ ಮಂಗಳಂ" ಎಂದು ಶ್ಲೇಷೆಯಿಂದ ಸ್ತುತಿಸಿದ್ದಾರೆ. ಕನಕದಾಸರು 'ಬೊಂಬೆಯಾಟವನಾಡಿಸಿದೆ ಮಹಾಭಾರತವ' ಎಂಬ ಒಂದು ಕೀರ್ತನೆಯಲ್ಲಿ ಇಡೀ ಮಹಾಭಾರತವನ್ನೇ ಬೊಂಬೆಯಾಟಕ್ಕೆ ಹೋಲಿಸಿದ್ದಾರೆ. "ಕುರುಭೂಮಿಯೆಂಬ ಪುರವೀಥಿಯನು ವಿರಚಿಸಿ ಮರೆಯ ಮಾಯದ ಐದು ತೆರೆಯ ಹಾಕಿ ಧರಣೀಶರೆಂಬ ನರಪ್ರತಿಮೆಗಳ ಅಳವಡಿಸಿ ನರನ ರಥವಾಜಿಯ ಸೂತ್ರವನೆ ಹಿಡಿದು" ಆಡಿಸಿದವನು ಕೃಷ್ಣ, "ಲೋಕದೊಳಗಿದನೈದ ನೆಯ ವೇದವೆಂದೆನಿಸಿ ಪಾಕಶಾಸನ ಸಭೆಯ ಮೆಚ್ಚಿಸಿ ಈ ಕಥೆಯ ಕೇಳ್ದ ಜನಮೇಜಯನ ಪತಿಕರಿಸಿ ತಾ ಕಪಟ ನಾಟಕದ ಸೂತ್ರಧಾರನೆನಿಸಿ" ಮೆರೆದವನು ಕೃಷ್ಣ ಎಂದಿದ್ದಾರೆ. ಕನಕದಾಸರ ಪ್ರತಿಭೆಯ ದ್ಯೋತಕವಾದ ಈ ಕಲ್ಪನೆ ಸುಂದರವಾಗಿದೆ. ಜಗನ್ನಾಥದಾಸರು ಒಂದು ಕಡೆ "ಕುರುಕುಲದಿ ಧೃತರಾಷ್ಟ್ರ ಪಾಂಡು ವಿದುರರ ಪಡೆದೈವರಿಗೊಲಿದು ಸಂಹರಿಸಿ ದುರ್ಯೋಧನನ ಭಾರತ ವಿರಚಿಸಿದ ಸುಂದರ ಕವೀಂದ್ರ" ಎಂಬುದಾಗಿ ವೇದವ್ಯಾಸರನ್ನು ಸ್ತುತಿಸಿದ್ದಾರೆ.

ಹೀಗೆ ದಾಸರು ಭಾರತ ರಚನೆಗೆ ಕಾರಣನಾದ ಭಗವಂತನನ್ನು ಅನೇಕ ಬಗೆಯಾಗಿ ಸ್ಮರಿಸಿ, ಹಾಡಿ, ಹಿಗ್ಗಿದ್ದಾರೆ.

ವಿಜಯದಾಸರು ರಚಿಸಿದ 'ಭಾರತ ಸುಳಾದಿ' ಎಂಬ ಸುಳಾದಿ, ಗೋರಬಾಳ ಹನುಮಂತರಾಯರು ಸಂಪಾದಿಸಿರುವ ಸುಳಾದಿಗಳ ಪುಸ್ತಕದಲ್ಲಿದೆ. ಆದರೆ ಈ ಕೃತಿ ಪೂರ್ಣವಾಗಿ ದೊರೆತಿಲ್ಲ. ಹಾಗೆಯೇ 'ಚಂಪಕಾಪುರದ ಅರಸ ವೈಂಕಟರಮಣ' ಎಂಬ ಅಂಕಿತದಲ್ಲಿ ಒಂದು 'ಮಹಾಭಾರತದ ಉದಯರಾಗ' ದೊರೆಯುತ್ತದೆ. ನಲವತ್ತೊಂದು ನುಡಿಗಳಿರುವ ಈ ಹಾಡಿನಲ್ಲಿ ಇಡೀ ಮಹಾಭಾರತವಿದೆ. ಆದರೆ ಇದು ಯಾವ ದಾಸರದು ಎಂಬುದು ಇನ್ನೂ ಗೊತ್ತಾಗಿಲ್ಲ. ಈ ಕಾರಣಗಳಿಂದಾಗಿ ಮೇಲಿನ ಎರಡು ಕೀರ್ತನೆಗಳನ್ನು ಇಲ್ಲಿ ಸೇರಿಸಿಲ್ಲ. ಹುಡುಕುತ್ತಾ ಹೋದರೆ ಇನ್ನೂ ನೂರಾರು ಕಡೆ ಮಹಾಭಾರತದ ಘಟನೆಗಳು ದಾಸಸಾಹಿತ್ಯದಲ್ಲಿ ದೊರೆಯುತ್ತವೆ. ಆದರೆ ಅವು ಮತ್ತೆ ಮತ್ತೆ ಹೇಳಿದ ವಿಷಯಗಳೇ ಆಗಿರುತ್ತವೆಯೇ ಹೊರತು ಹೊಸದೇನೂ ದೊರೆಯುವುದಿಲ್ಲ. ವಿಷಯಗಳು ಅವೇ, ಹೇಳಿರುವ ರೀತಿ ಮಾತ್ರ ಬೇರೆಯಾಗಿರುತ್ತದೆ. ಹೆಚ್ಚಿನ ವೈವಿಧ್ಯವಿಲ್ಲ. ಒಟ್ಟಿನಲ್ಲಿ ದಾಸರು ತಮ್ಮ ದೃಷ್ಟಿಗನುಸಾರವಾಗಿ, ತಮಗೆ ಬೇಕಾದಷ್ಟು ಭಾರತದ ಘಟನೆಗಳನ್ನು ಅಳವಡಿಸಿ ಕೊಂಡಿದ್ದಾರೆ ಎಂದು ಹೇಳಬಹುದು. ಕಡೆಯದಾಗಿ ಪುರಂದರದಾಸರು ಹೇಳಿರುವ "ಸಕಲ ಪಾಪಹರವು ಭಾರತ ಕೇಳಲು" ಎಂಬ ಮಾತನ್ನು ಇಲ್ಲಿ ಸ್ಮರಿಸಬಹುದು.

ಕೆ. ನ. ಶಿವತೀರ್ಥನ್

## ವಿವೇಕಾನಂದ

ಸಾಲಾಗಿ ಹಕ್ಕಿ ಹಾಲಾಗಿ ತೇಲಿದಂತೆ
ಮೈ ಮರೆತ ಯೋಗಿ ಅಯಸ್ಕಾಂತ
ಸೆಳವಿಗೆ ಒಳಗಾಗಿ—
ಹುಚ್ಚಾಬಟ್ಟೆ ಕುಣಿವ ಕತ್ತಲೆಕೊಚ್ಚಿ,
ಬೆಳಕ ಚಾಟಿಯಲಿ ಬದುಕ ಬುಗುರಿ ಆಡಿಸಿ
ಬದುಕಿ, ಬದುಕಿನರ್ಥ ಬೆದಕಿ
ಕುರುಡು ಭ್ರಮೆ ಇದ್ದವರ ಬಡಿದೆಚ್ಚರಿಸಿ
ನರಸತ್ತ ತಂತಿಗುಂಟ ಕರೆಂಟ ಹರಿಸಿ
ಹಿರಿ ಪರಂಪರೆಯಲಿ ಅಚ್ಚಳಿಯದೆ ಮೂಡಿನಿಂತೆ—
'Foot-prints on the Sands of Time!'

ಆದದ್ದಾದರು ಏನಯ್ಯಾ?
ನೀನಿದ್ದವರೆಗೂ
ನಿದ್ದೆಸಾವಿನ ನಡುಗಡ್ಡೆಯಲಿ
ಎಚ್ಚರದ ಸೋಗಿನಲಿ
ಆಶ್ರಮದಲಿ ತಸಬೀರುಗಳಲಿ ಪ್ರತಿಮೆಗಳಲಿ
ಇನ್ನೂ ಇತ್ಯಾದಿಗಳಲಿ
ನಿನ್ನ ಅರಸುತ್ತ, ಇದ್ದಲ್ಲೆ
ಗಿರಿ ಗಿರಿ ಗಿರೀ ಸುತ್ತಿ
ಗಿರ್ಕಿ ಹೊಡೆವ ನಮಗೆ
ಸತ್ಯ ಶಿವ ಸೌಂದರ್ಯದ
ಅರಿವು ಎಂದಿಗಯ್ಯಾ?

## ಏರ್ಯ ಲಕ್ಷ್ಮೀ ನಾರಾಯಣ ಆಳ್ವ

# ಹೂ

> ಹೂವಿನಾಗ ಹುದುಗ್ಯಾನ । ಮಾಲ್ಯಾಗ ಮಲಗ್ಯಾನ
> ಮೊಗ್ಯಾಗ ಕಣ್ಣ ತೆರೆದಾನ । ಲಿಂಗಯನ
> ನೋಡೋಕೆ ನಿದ್ದೆ ಬಯಲಾದೊ ||
>
> —ಜಾನಪದ ಗೀತೆ

ಹೂ !

ಹೂ ! ಎಷ್ಟು ಮಧುರವಾದ ಹೆಸರು ! ಉಚ್ಚರಿಸುವಾಗಲೂ ಅಷ್ಟೆ ಎಷ್ಟು ನಯ ! ಎಂತಹ ನವುರು ! ದೇವಸೃಷ್ಟಿಯ ಈ ಸುರಮ್ಯ, ಸುಕುಮಾರ ರಚನೆಯನ್ನು ಅದರ ಗುಣ-ಧರ್ಮ, ಚೆಲವು-ನಲವು, ಗಂಧ-ಬಂಧಗಳಿಗೆ ಅನುಗುಣವಾದ "ಹೂ" ಎಂಬ ಹೆಸರಿನಿಂದ ಕರೆದ ಕನ್ನಡಿಗನ ಕಾಣ್ಕೆ ಅದ್ಭುತವಾದುದು.

ಹೂ ! ದೇವನ ಎಂತಹ ಸುಂದರ ಸೃಷ್ಟಿ ! ಬೆಳ್ಳನೆ ಬೆಳಗಾತ ಕಿರಿಯ ಗಿಡದಲ್ಲಿ, ಬಳುಕುವ ಬಳ್ಳಿಯಲ್ಲಿ, ತಲೆಯೆತ್ತಿರುವ ವೃಕ್ಷದಲ್ಲಿ ಹಸುರ ಹೊದಿಕೆಯನ್ನು ಮೆಲ್ಲನೆ ಸರಿಸಿ ಮಧುರವಾಗಿ ಕಣ್‌ತೆರೆಯುವ ದರ್ಶನ ಎದೆಯನ್ನು ಸೂರೆಗೊಳ್ಳುತ್ತದೆ. ತನು ಪುಲಕಿಸುತ್ತದೆ. ಯಾವ ಜನ್ಮದಲ್ಲೊ ನಾನು ಕಂಡು ಮರೆತ ಮತ್ತಮೋಹಕ ಕನಸು ಮತ್ತೆ ನನ್ನನ್ನು ಕೈಬೀಸಿ ಕರೆದಂತೆನಿಸುತ್ತದೆ ! ಭಾವ ಪರವಶತೆಯಿಂದ ಕಣ್ಣು ಹನಿಗೂಡುತ್ತದೆ.

ಹಸುರ ಹಾಸಿನಲ್ಲಿ ನಸುಗಾಳಿಗೆ ತುಸು ತೂಗುತ್ತಾ ಅರೆ ಬಿರಿಯುತ್ತಿರುವ ಅರಳನ್ನು ಕಂಡಾಗ ತಾಯ ತೊಡೆಯಲ್ಲಿ ಸೆರಗ ಮರೆಯಲ್ಲಿ ಅತ್ತ ಇತ್ತ ಒಲೆಯುತ್ತ ನಸುನಗುವ ಎಳೆಯ ಮಕ್ಕಳ ನೆನಪಾಗುತ್ತದೆ ನನಗೆ !

ಬಾಲಕೃಷ್ಣನ ತೆರೆದ ಬಾಯಿಯಲ್ಲಿ ಬ್ರಹ್ಮಾಂಡವನ್ನು ಕಂಡು ಬೆಕ್ಕಸ ಬೆರಗಾದಳಂತೆ ಯಶೋದಾ. ಹೂವಿನ ಅಂತರಂಗದಲ್ಲಿ ಅಡಗಿರುವ ಲೋಕ ಅದಕ್ಕಿಂತ ಕಡಿಮೆಯ ಪವಾಡವೇನೂ ಅಲ್ಲ ! ದಳವರಳಿಸುತ್ತಿರುವ ಹೂವಿನ ಅಂತರಂಗದಲ್ಲಿ ಅಮರ ಸೌಂದರ್ಯದ ಅವರ್ಣನೀಯ ಲೋಕವನ್ನು ಕಂಡು ವಿಸ್ಮಯ ಮೂಕನಾಗುತ್ತೇನೆ ನಾನು.

ಮೃದುಹೃದಯದ ಬಾಲೆಯರು, ಕರುಣೆತುಂಬಿದ ಕಾಮಿನಿಯರು ಪರಮಾತ್ಮನ ಈ ಮುಗ್ಧ, ಕೋಮಲ ಸೃಷ್ಟಿಯನ್ನು ತಾಯಿಗಿಡದಿಂದ ಕಿತ್ತು, ಮುಡಿಯಲ್ಲಿ ಮುಡಿದುಕೊಂಡುದನ್ನು ಕಂಡಾಗಲೆಲ್ಲ ನನ್ನ ಹೃದಯದಲ್ಲಿ ತಿಳಿಸಲಾರದಂತಹ ಒಂದು ನೋವು ಸುಳಿದು ಹೋಗುತ್ತದೆ. ಪ್ರಕೃತಿಯ ಈ ನವುರು ಜೀವ ಅವರ ಮುಡಿಯಲ್ಲಿ ಮೆಲ್ಲಮೆಲ್ಲನೆ ಕಣ್ಮುಚ್ಚಿಕೊಳ್ಳುವುದನ್ನು ಕಂಡಾಗ ನನ್ನೆದೆಗೆ ಎಲ್ಲೊ ಬಾಣ ನೆಟ್ಟಂತೆ ಭಾಸವಾಗುತ್ತದೆ. ಈ ಕುಸುಮಕೋಮಲೆಯರೇ ಕುಸುಮ ಸಂಹಾರೆಯರಾದರಲ್ಲಾ ಎಂದು ವೇದನೆಯಾಗುತ್ತದೆ.

ಗಿಡದ ತೆಕ್ಕೆಯಲ್ಲಿ ಕುಲುಕುಲೆಂದು ನಗುತ್ತಿರುವ ಹೂವನ್ನು ಕೊಯ್ಯುವುದೂ ತಾಯಿಯ ಮಡಿಲಲ್ಲಿ ಚಿಲಿಪಿಲಿಯೆಂದುಲಿಯುತ್ತಿರುವ ಮಗುವನ್ನು ಕರುಣೆಯಿಲ್ಲದೆ ಸೆಳೆದೊಯ್ಯುವುದೂ ಒಂದೇ !

ಶಿವಪರೆ ಇನ್ನೂ ಕಳಚದ ಮಗುವನ್ನು ಕಂಡು ಆನಂದಿಸಬೇಕೆಂದಿದ್ದರೆ ಅದು ತಾಯ ತೊಡೆಯಲ್ಲಿ—ತನ್ನ ಸ್ವತಂತ್ರ ಜಗತ್ತಿನಲ್ಲಿ ಸಂಕೋಚರಹಿತವಾಗಿ, ಭಯ ದೂರವಾಗಿ ಆಡುತ್ತಿರುವಾಗ ನೋಡು! ಅದು ಅಲ್ಲಿ ಮುಕ್ತ ಆಗಸದ ಬಂಧನರಹಿತ ಹಕ್ಕಿಯಂತೆ ಸ್ವಚ್ಛಂದ ಲೀಲೆಯಲ್ಲಿರುತ್ತದೆ. ಹೂವಿನದೂ ಅಷ್ಟೆ! ಮಾತೆ ಪೃಥಿವಿಯ ಮಡಿಲಲ್ಲೆ ಅದರ ಸೊಗಸು; ಲೀಲೆ! ಹಸುರಿನ ಆ ಸ್ವಾನಂದ ಸಾಮ್ರಾಜ್ಯದಲ್ಲಿ ಅದು ಯೋಗಿಯಂತೆ ಸ್ವಾಂತಸುಖದ ಸುವಾಸನೆಯನ್ನು ಸುತ್ತಲೆಲ್ಲ ಬೀರಿ ಮಧುರ ಮೌನದ ಸಮಾಧಿಯಲ್ಲಿರುತ್ತದೆ! ಹೂವಿನ ಈ ಕಡೆ ಗಾಣದ ದೇವಗನಸನ್ನು ನಿರ್ದಯವಾಗಿ ಕೆಡಿಸಿ, ತೊಟ್ಟು ತುಂಡರಿಸಿ, ತಾಯಿ ಗಿಡದಿಂದ ಅಗಲಿಸಿ ಮನೆಯ ಮೆರಗೊ, ಕೊರಳ ಹಾರವೊ, ಕೈಯ ಗೊಂಡೆಯೊ, ತುರುಬ ದಂಡೆಯೊ ಮಾಡಿಕೊಳ್ಳುವವರು ಒಮ್ಮೆ ತಮ್ಮ ಎಳೆಯ ಮಗುವಿನತ್ತ ನೋಡಿಕೊಳ್ಳಬಾರದೆ!

ನಿನಗೆ ಹೂವಿನ ಸಂಪೂರ್ಣ ಸೌಂದರ್ಯದ ದರ್ಶನವಾಗಬೇಕೆ? ಅದರ ದಿವ್ಯಾನಂದವನ್ನು ಸವಿಯಬೇಕೆ? ಹಾಗಿದ್ದರೆ ಅದು ಇದ್ದಲ್ಲೆ ಇರಲಿ ಬಿಡು! ಅದು ಇರುವಲ್ಲಿ ನಡೆದು ನೋಡು! ಕಣ್ಣ ಎವೆ ತೆರೆ! ಮನದ ಕೊಳೆ ತೊಳೆ! ಎದೆಯ ಕದ ತೆರೆ! ಹೀಗೆ ನೋಡು. ಆ ಕಂಪು, ಆ ಅಲಂಪು, ಆ ತಂಪು, ಆ ಸೊಂಪುಗಳನ್ನು ಈಗ ಅನುಭವಿಸು! ಇದು ರಾಮನನ್ನು ಕಂಡ ಶಬರಿಯ ಆನಂದ! ಕೃಷ್ಣನನ್ನು ಕಂಡ ಕುಬ್ಜೆಯ ಸಂತಸ! ಈಗ ಇಹದ ಇರವಿಲ್ಲ! ಪರದ ಪರಿವೆ ಯಿಲ್ಲ! ಇಲ್ಲಿ ಅಲೌಕಿಕ ಆನಂದದ ಅನುರಾನುಭವ!

ಹೂ!

—ಇದು ಕವಿಯ ಕನಸು!

ಅಲ್ಲ!

—ಇದು ಮಗುವಿನ ಮನಸು!

ಅಲ್ಲ!

—ಇದು ಶಿವದ ಉಣಿಸು!

"Where flowers degenerate man cannot live"—ಎಂದ ಕವಿ ವಾಣಿಯಲ್ಲಿ ದೇವವಾಣಿ ಧ್ವನಿಸಿದೆ!

ಹೂ!

ಎಷ್ಟು ವಿಧ! ಎಂತಹ ಹದ! ಏನು ಬಣ್ಣ! ಎಲ್ಲಿಯ ಗಂಧ! ಯಾವ ಬಂಧ!

ಹೂ! ಇದು ಮಾತೆ ಪೃಥಿವಿಯ ಹೃದಯದೆಸಕದ ಸಂಕ್ಷಿಪ್ತ ರೂಪ!

ಜಡದಂತೆ ಭಾಸವಾಗುವ ತಾಯಿ ಪೃಥಿವಿಯಲ್ಲಿ ಅಡಗಿರುವ ರೂಪ, ಗುಣ, ಪರಿಮಳ, ಬಣ್ಣಗಳನ್ನು ರಸರೂಪದಲ್ಲಿ ಹೀರಿ ಹೂವಾಗಿ ರೂಪಿಸುವ ಗಿಡಬಳ್ಳಿಗಳಿಗಿದೊ ನಮನ! ಮರ್ತ್ಯದಿಂದ ಅಮರ್ತ್ಯವನ್ನು ಸೃಷ್ಟಿಸಿದ ಕವಿಗಿದೊ ಶರಣು!

ಸೃಷ್ಟಿಕರ್ತನಾದ ಬ್ರಹ್ಮನನ್ನೇ ಹೂವಿನಲ್ಲಿ ಸೃಷ್ಟಿಸಿದರಲ್ಲಾ, ಆ ದಾರ್ಶನಿಕರ ಕಾಣ್ಕೆ ಬಹುದೊಡ್ಡದು! ಸ್ಥಿತಿಪಾಲಕನಾದ ವಿಷ್ಣುವಿನ ಹಸ್ತದಲ್ಲಿ ಹೂವನ್ನು ಕೊಟ್ಟರಲ್ಲಾ, ಆ ಋಷಿಗಳ ದೃಷ್ಟಿ ಬಹಳ ವಿಶಾಲವಾದುದು! ಲಯಕರ್ತನಾದ ಶಿವನ ಬಳಿ ಮಾತ್ರ ಅವರು ಹೂವಿನ ಗಾಳಿ ಹಾಯಿಸಲಿಲ್ಲ. ಇಲ್ಲೆ ಅವರ ಹಿರಿಮೆ!

ಇಳೆಯ ಕವಿದ ಕಾವಳ ಕರಗುತ್ತಿರುವಾಗ, ಅರುಣ ಕಿರಣ ಹೊಮ್ಮಿ ಚಿಮ್ಮಿ ಭುವಿಯ ಮುತ್ತಿಡುತ್ತಿರುವಾಗ, ಹಕ್ಕಿಪಕ್ಕಿಗಳ ಸಾವಿರ ಕಲಕಂಠ ಉದಯಗೀತೆ ನುಡಿಸುತ್ತಿರುವಾಗ, ಹರಿಕಾರನಂತೆ ತಂಗಾಳಿ ಹೊಸ ಬೆಳಕಿನ ಹೊಸ ಬೆರಗಿನ ಸಂತಸದ ಸುದ್ದಿಯನ್ನು ಸಾರುತ್ತ ಸಾರುತ್ತ ತಳುವದೆ ಮುಂದೋಡುತ್ತಿರುವಾಗ ಹುಲ್ಲ ಚಿಗುರಿನ ಬಳ್ಳಿಯ ಗಂಟಿನ, ಗಿಡದ ಟೊಂಗೆಯ, ಮರದ ಶಿರದ ಹಸುರ ಹಾಸಿನಿಂದ ಮೆಲ್ಲನುಪ್ಪವಡಿಸಿ ಅರೆಕಣ್ಣು ತೆರೆದು ಜಗದ ಭಾಗ್ಯಕ್ಕೆ ತನ್ನ ಪಾಲನ್ನೂ ಬೆರಸಿ ಪರಿಮಳಿಸುತ್ತಿರುವ ಹೂವನ್ನು ಕಂಡಾಗ ನನ್ನ ಹೃದಯ ಆರ್ತವಾಗಿ ಅಲ್ಪರಿಯುತ್ತದೆ: "ಓ ಪ್ರಭುವೇ! ನನ್ನನ್ನೂ ಇಂತಹ ಒಂದು ಹೆಸರಿಲ್ಲದ ಹೂವಾಗಿ ಏಕೆ ಸೃಷ್ಟಿಸದಾದೆ! ಪಾಪ ಲೇಪವಿಲ್ಲದ ಪುಣ್ಯಪರಿಮಳಿತ ಈ ಬಾಳು ನನ್ನ ಹಿಂದಿನ ಯಾವ ಜನ್ಮದ ಪಾಪದಿಂದ ತಪ್ಪಿಹೋಯಿತು! ಓ ದಯಾಮಯ! ಮುಂಬರುವ ಮಂಗಲ ಪ್ರಭಾತದಲ್ಲಿ ನಿನ್ನ ತೋಟದಲ್ಲಿ ನನ್ನನ್ನೂ ಒಂದು ಹೂವಾಗಿ ರೂಪಿಸು! ಇದೇ ನಿನ್ನಲ್ಲಿ ನನ್ನ ಅಂತಃಕರಣದ ಬೇಡಿಕೆ!"

ತೀರ್ಥಹಳ್ಳಿ ಜೈ ಪ್ರಕಾಶ

## ಶೂನ್ಯ

ಸುತ್ತೆಲ್ಲ ಮುಳ್ಳುಬೇಲಿ
ಇಲ್ಲ ಹೊರಬರಲು
ದಾರಿ.
ಬೇಲಿಯೊಳಗೂ ಬರಿ ಮುಳ್ಳು,
ವಿಷಕಾರುವ ಸಸ್ಯ. ಸ್ವಚ್ಛಗಾಳಿಗೂ ಇಲ್ಲ
ಒಳಬರಲು ಸರಿಯಾದ
ನೇರ!
ಒಂದರಮೇಲೊಂದು ಗಿಡಗಂಟಿ
ನಂಜುಕಾರುವ ವಿಧಾನವೂ ವಿಕಾರ.
ಪರಿಣಾಮ: ಒಳಬರಲು ಶುದ್ಧಗಾಳಿಗೂ
ಅಸಹ್ಯ.
ಮಣ್ಣವಾಸನೆಗೆ ಜೋತುಬಿದ್ದು
ಇರುವ ವಿಷಾನಿಲವನೆ ನಂಬಿದರೆ
ಆಗಬೇಕು ನಾನೂ—
ಬ್ಯೂಟಬ್ಸನ ಮಗ! ವಿಷಕನ್ಯೆಯ ಸುಪುತ್ರ!
ಒಟ್ಟಾರೆ—
ಈ ಅಡಿಕೆ-ಕತ್ತರಿಯಿಂದ, ಈ
ನಿರ್-ವಾತದಿಂದ ಪಾರಾಗಲು
ಸಿಗುತ್ತಿಲ್ಲ ಒಂದೂ
ಮಾರ್ಗ.

ಎ. ವಿ. ನರಸಿಂಹಮೂರ್ತಿ

# ಚಾಳುಕ್ಯ ಗೊಗ್ಗಿರಾಜ

ಮೈಸೂರು ನಗರಕ್ಕೆ ಆರು ಮೈಲಿ ದೂರದಲ್ಲಿರುವ ವರುಣ ಎಂಬ ಗ್ರಾಮದಲ್ಲಿ ದೊರಕಿರುವ ಶಾಸನಗಳಿಂದ ಚಾಳುಕ್ಯ ವಂಶಕ್ಕೆ ಸೇರಿದ ಗೊಗ್ಗಿರಾಜನೆಂಬ ಸಾಮಂತ ನಿದ್ದನೆಂದು ತಿಳಿದುಬರುತ್ತದೆ. ಈ ಸಾಮಂತನು ಯಾರು ಮತ್ತು ಸಮಕಾಲೀನ ರಾಜಕೀಯದಲ್ಲಿ ಇವನ ಪಾತ್ರವೇನು ಎಂದು ಇಲ್ಲಿ ವಿವೇಚಿಸಲಾಗಿದೆ. ಈ ಶಾಸನಗಳು ಸವೆದುಹೋಗಿ ಅವುಗಳ ಪೂರ್ಣಪಾಠ ದೊರೆತಿಲ್ಲದೇ ಇರುವುದರಿಂದ ಖಚಿತವಾದ ಮಾಹಿತಿಯು ದೊರಕುವುದು ಕಷ್ಟ. ಅಷ್ಟೇ ಅಲ್ಲದೆ ಈ ಶಾಸನಗಳಲ್ಲಿ ಕಾಲವು ಹೇಳಲ್ಪಟ್ಟಿಲ್ಲ. ಆದರೆ ಲಿಪಿಲಕ್ಷಣಗಳ ಆಧಾರದಮೇಲೆ ಈ ಶಾಸನಗಳು ಕ್ರಿ.ಶ. ಹತ್ತನೆಯ ಶತಮಾನಕ್ಕೆ ಸೇರಿದವು ಎಂದು ನಿರ್ಧರಿಸಬಹುದಾಗಿದೆ.

ಇದರಲ್ಲಿ ಮೊದಲನೆಯ ಶಾಸನದ ಬಹುಪಾಲು ಸವೆದುಹೋಗಿದೆ. ಈ ಶಾಸನದಲ್ಲಿ ಗೊಗ್ಗಿಯ ಹೆಸರು ಕಾಣಬರುವುದಿಲ್ಲ. ಆದರೆ 'ಶ್ರೀಮಚ್ಚಾಳುಕ್ಯವಂಶಲಲಾಮ' ಎಂಬ ಬಿರುದು ಕಾಣಿಸುತ್ತದೆ.[1] ಎರಡನೆಯ ಶಾಸನವು ಸ್ಪಷ್ಟವಾಗಿದೆ. ಆದರೆ ಇದರಲ್ಲಿಯೂ ಗೊಗ್ಗಿಯ ಹೆಸರು ಕಾಣುವುದಿಲ್ಲ. ಚಾಳುಕ್ಯವಂಶದ ಉಲ್ಲೇಖವು ಸ್ಪಷ್ಟವಾಗಿರುವುದು ಇಲ್ಲಿ ಗಮನಾರ್ಹ.[2]

'ಸ್ವಸ್ತಿ ಸಮಧಿಗತಪಞ್ಚಮಹಾಶಬ್ದ ಮಹಾಸಾಮನ್ತ ಚಾಳುಕ್ಯವಂಶೋದ್ಭವ ನಾದಿ ವರಾಹಲಾಂಛನಂ ಸಮಸ್ತ....ಸಾಹಸೋತ್ತುಂಗ ವೈರಿಬಳಜಳಧಿ....' ಇದರಲ್ಲಿ ನರಸಿಂಗನೆಂಬುವನು ಭೂತೇಶ್ವರ ದೇವಾಲಯಕ್ಕೆ ಕೊಟ್ಟ ದತ್ತಿಗಳ ವಿಚಾರವು ಪ್ರಸ್ತಾ ಪಿತವಾಗಿದೆ. ಇಲ್ಲಿ ಪಂಚಮಹಾಶಬ್ದ, ಮಹಾಸಾಮಂತ, ಚಾಳುಕ್ಯವಂಶೋದ್ಭವ ಮತ್ತು ವರಾಹಲಾಂಛನ ಇವುಗಳು ಮುಖ್ಯವಾದುವು. ಮೂರನೆಯ ಶಾಸನದಲ್ಲಿ ಗೊಗ್ಗಿಯು ಭೂತೇಶ್ವರದೇವಾಲಯಕ್ಕೆ ದತ್ತಿಗಳನ್ನು ಕೊಟ್ಟ ವಿಚಾರವು ಹೇಳಲ್ಪಟ್ಟಿದೆ.[3]

'ಸ್ವಸ್ತಿ ಸಮಧಿಗತ ಪಞ್ಚಮಹಾಸಬ್ದ ಮಹಾಸಾಮನ್ತನಾದಿ ವರಾಹಲಾಞ್ಛನ

---

[1] Epigraphia Carnatica, Vol. 3, ಮೈಸೂರು, 35

[2] ಅದೇ, ಮೈಸೂರು, 36

[3] ಅದೇ, ಮೈಸೂರು, 37

ಶ್ರೀಮತ್ ಗೊಗ್ಗಿ ಭೂತೇಸ್ವರರ್ಕ್ಕ........' ಇದರಲ್ಲಿ ಗೊಗ್ಗಿಯ ಹೆಸರು ಅವನ ಕುಲ ಮೊದಲಾದವುಗಳು ಉಕ್ತವಾಗಿವೆ. ಇದರ ಪ್ರಕಾರ ಗೊಗ್ಗಿಯು ಚಾಳುಕ್ಯ ವಂಶದವನು; ವರಾಹಲಾಂಛನವನ್ನು ಹೊಂದಿದವನು; ಮಹಾಸಾಮಂತನು ಮತ್ತು ಪಂಚಮಹಾಶಬ್ದ ಗಳನ್ನು ಹೊಂದಿದವನು. ಎರಡನೆಯ ಶಾಸನದಲ್ಲಿ ಗೊಗ್ಗಿಯ ಹೆಸರಿಲ್ಲದಿದ್ದರೂ, ಮಿಕ್ಕೆಲ್ಲ ಮಾಹಿತಿಗಳಿಂದ ಆ ಶಾಸನವೂ ಗೊಗ್ಗಿಯ ಕಾಲದ್ದು ಎಂದು ಸುಲಭವಾಗಿ ತೀರ್ಮಾನಿಸಬಹುದು.

ನಾಲ್ಕನೆಯ ಶಾಸನವು ಒಂದು ವೀರಗಲ್ಲು. ಇದರಲ್ಲಿ ಗೊಗ್ಗಿಯ ಹೆಸರು ಉಲ್ಲೇಖಿತವಾಗಿದೆ.[4] ಆದರೆ ಅವನ ವಂಶ ಮುಂತಾದವುಗಳಿಲ್ಲ.

'ಸ್ವಸ್ತಿ ಶ್ರೀ ಗೊಗ್ಗಿಯ ಮನೆವಗತಿ ಎಜ಼ಿ ಬೀರಯ್ಯ ಉತ್ತಮವಗಳ್ಪುಗುಂ....ಕಾದಿ ಎಜ಼ಿಬೀರಯ್ಯಸತ್ತ'. ಐದು ಮತ್ತು ಆರನೆಯ ಶಾಸನಗಳು ಅಪೂರ್ಣವಾಗಿವೆ.[5] ಅವುಗಳಲ್ಲಿಯೂ ಗೊಗ್ಗಿಯ ಹೆಸರು ಮಾತ್ರ ಉಲ್ಲೇಖಿತವಾಗಿದೆ. ಒಟ್ಟಿನಲ್ಲಿ ಈ ಶಾಸನಗಳಿಂದ ಚಾಳುಕ್ಯವಂಶದ ಮಹಾಸಾಮಂತ ಗೊಗ್ಗಿ ಎಂಬುವನೊಬ್ಬನು ಇದ್ದನೆಂದು ಸ್ಪಷ್ಟವಾಗುತ್ತದೆ. ಸಮಕಾಲೀನ ಶಾಸನವೊಂದರಲ್ಲಿ ಗೊಗ್ಗಿರಾಜನೆಂಬುವನ ಉಲ್ಲೇಖವು ದೊರಕುವುದು ಗಮನಾರ್ಹವಾದುದು. ಸೇವುಣ ವಂಶದ ಮೂರನೆಯ ಭಿಲ್ಲಮನ ಕಲಾಸ್‌ಬದ್ರುಕ್[6] ಶಾಸನದಲ್ಲಿಯೂ ಮತ್ತು ಅದೇ ರಾಜನ ದೇವಲಾಲಿ ಶಾಸನದಲ್ಲಿಯೂ[7] ಗೊಗ್ಗಿರಾಜನ ಉಲ್ಲೇಖವು ಬರುತ್ತದೆ. ಈ ಶಾಸನಗಳ ಪ್ರಕಾರ ವೇಸುಗಿ ಎಂಬ ರಾಜನು ಚಾಳುಕ್ಯಾನ್ವಯ ಮಂಡಲೀಕ ಗೊಗ್ಗಿರಾಜನ ಮಗಳನ್ನು ವಿವಾಹವಾದನೆಂದು ಗೊತ್ತಾಗುತ್ತದೆ.

'ಚಾಳುಕ್ಯಾನ್ವಯ ಮಂಡಲೀಕ ತಿಲಕಾತ್ ಶ್ರೀ ಗೊಗ್ಗಿರಾಜಾದ್ವರಾದುತ್ಪನ್ನಾ ದುಹಿತಾ ಗುಣತ್ರಯವತೀ ಧಾಮ್ನಾಕುಲದ್ಯೋತಿಕಾ ಸ್ತ್ರೀರತ್ನಂಬತವೇಧಸಾ ಪ್ರಕಟಿತಂ ಸಾಮಂತ ರತ್ನಾಯ ಸಾ ಶ್ರೀ ನಾಯಿಲ್ಲ ದೇವಿ ನಾಮ ಸುಭಗಾ ಶ್ರೀಪಟ್ಟರಾಜ್ಞೀ ಸದಾ....'. ಈ ಶಾಸನದ ಆಧಾರದ ಮೇಲೆ ಗೊಗ್ಗಿರಾಜನು ನಾಯಿಲ್ಲದೇವಿಯ ತಂದೆಯೆಂದೂ, ಸೇವುಣ ವೇಸುಗಿಯ ಮಾವನೆಂದೂ ಗೊತ್ತಾಗುತ್ತದೆ. ಸೇವುಣ ವೇಸುಗಿಯ ಕಾಲ ಸುಮಾರು ಕ್ರಿ.ಶ. 1000–1025. ಭಂಡಾರಕರ್‌ರವರು ಈ ಶಾಸನವನ್ನು ಸಂಪಾದಿಸಿ, ಈ ಗೊಗ್ಗಿಯು ಶಿಲಾಹಾರ ಗೊಗ್ಗಿಯೆಂದು ಅಭಿಪ್ರಾಯಪಟ್ಟರು[8].

---

[4] ಅದೇ, ಮೈಸೂರು, 41

[5] ಅದೇ, ಮೈಸೂರು, 42 ಮತ್ತು 43

[6] Indian Antiquary, Vol. XVII, p. 117.

[7] ARIE, Copper Plate 12 of 1957–58 ಮತ್ತು Proceedings of the All India Oriental Conference, 18th Session, p. 344.

[8] Bhandarkar : Early History of Deccan, p. 111.

ಆದರೆ ಈ ಅಭಿಪ್ರಾಯವು ಸರಿಯಲ್ಲವೆಂದು ಹೇಳಬೇಕು. ಏಕೆಂದರೆ ಶಿಲಾಹಾರರಲ್ಲಿದ್ದ ಗೊಗ್ಗಿಯೆಂಬುವನು (ಝುಂಝು ರಾಜನ ಉತ್ತರಾಧಿಕಾರಿ) ರಾಜ್ಯವಾಳಿದ ಕಾಲ ಕ್ರಿ.ಶ. 930ರಿಂದ 945.[9] ಇವನನ್ನು ಬಿಟ್ಟರೆ ಆ ವಂಶದಲ್ಲಿ ಇದೇ ಹೆಸರಿನ ಮತ್ತಾವ ದೊರೆಯೂ ಇರಲಿಲ್ಲ. ಕ್ರಿ.ಶ. 1000ದಿಂದ 1025ರವರೆಗೆ ಆಳಿದ ವೇಸುಗಿಗೆ ಸುಮಾರು ಮುಕ್ಕಾಲು ಶತಮಾನದ ಮುಂಚಿನವನಾದ ಗೊಗ್ಗಿಯು ಮಾವನಾಗಿರಲು ಸಾಧ್ಯವಿಲ್ಲವೆಂದು ಸುಲಭವಾಗಿ ತೀರ್ಮಾನಿಸಬಹುದು. ಅಷ್ಟೇ ಅಲ್ಲದೆ, ಗೊಗ್ಗಿಯು ಚಾಳುಕ್ಯಾನ್ವಯದವನೆಂದು ಸ್ಪಷ್ಟವಾಗಿ ಹೇಳಿದೆ. ಆದುದರಿಂದ ಅವನು ಭಂಡಾರಕರ್‌ರವರು ಹೇಳಿದಂತೆ ಶಿಲಾಹಾರಾನ್ವಯನಾಗಿರಲು ಸಾಧ್ಯವಿಲ್ಲ.

ಸಂತಲಾಲ ಕಟಾರೆಯವರು ಲಾಟದೇಶದಲ್ಲಿದ್ದ ಬಾರಪ್ಪನ ಮಗನು ಗೊಗ್ಗಿರಾಜನೆಂದೂ, ಅವನೇ ವೇಸುಗಿಯ ಮಾವನಿರಬೇಕೆಂದೂ ವಾದಿಸಿದ್ದಾರೆ.[10] ಇದನ್ನು ಖಚಿತವಾಗಿ ತೀರ್ಮಾನಿಸಲು ದೊರಕಿರುವ ಮಾಹಿತಿಗಳು ಸಾಲದು. ವರುಣದ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಗೊಗ್ಗಿಯು ವೇಸುಗಿಯ ಮಾವನಿರಬಹುದೇ ಎಂಬ ಸಂದೇಹ ಮೂಡುತ್ತದೆ. ವರುಣದ ಶಾಸನಗಳಲ್ಲಿ ದೊರೆತಿರುವ ಮಾಹಿತಿಗಳಿಂದ ಈ ವಿಷಯವನ್ನು ನಿರ್ಧರಿಸುವುದು ಕಷ್ಟಕರವಾದುದು. ಸೇವುಣರ ಶಾಸನಗಳಲ್ಲಿಯಾದರೋ, ಗೊಗ್ಗಿಯು ಯಾರು ಎಂದು ವಿಶದವಾಗಿ ಹೇಳಿಲ್ಲ. ಅವನೊಬ್ಬ ಚಾಳುಕ್ಯ ವಂಶದವನೆಂದೂ, ಮತ್ತು ಮಂಡಲೀಕನಾಗಿದ್ದನೆಂದೂ ಮಾತ್ರ ಗೊತ್ತಾಗುತ್ತದೆ. ವರುಣದ ಶಾಸನಗಳಲ್ಲಿ ಹೆಸರಿಸಿರುವ ಗೊಗ್ಗಿಯೂ ಚಾಳುಕ್ಯ ವಂಶದವನು ಮತ್ತು ಪಂಚಮಹಾಶಬ್ದಸಹಿತನಾದ ಮಹಾ ಸಾಮಂತನು. ಇವೆರಡೂ ಬೇರೆ ಬೇರೆ ವ್ಯಕ್ತಿಗಳನ್ನುದ್ದೇಶಿಸುತ್ತವೆಯೇ ಇಲ್ಲವೇ ಎಂಬುದು ಖಚಿತವಾಗಿ ಹೇಳಲಾಗದು. ಸೇವುಣರಾಜರು ಸಾಮಾನ್ಯವಾಗಿ ಕಲ್ಯಾಣದ ಚಾಳುಕ್ಯ ಮನೆತನದವರೊಂದಿಗೆ ವಿವಾಹ ಸಂಬಂಧಗಳನ್ನು ಬೆಳೆಸಿದ್ದರು. ಕಲ್ಯಾಣದ ಚಾಳುಕ್ಯರ ಆಶ್ರಯದಲ್ಲಿ ಸಾಮಂತರಾಗಿಯೂ ಇದ್ದು ನಂತರ ಸ್ವತಂತ್ರರಾದರು. ಆದುದರಿಂದ ಸೇವುಣರಿಗೂ ಕಲ್ಯಾಣದ ಚಾಳುಕ್ಯರಿಗೂ ನಿಕಟ ಸಂಬಂಧಗಳಿದ್ದುದು ವ್ಯಕ್ತವಾಗುತ್ತದೆ. ಲಾಟದೇಶದ ಚಾಳುಕ್ಯರೊಡನೆ ಸೇವುಣರು ಮೈತ್ರಿಯುತ ಸಂಬಂಧಗಳನ್ನು ಬೆಳೆಸಿಕೊಂಡಿದ್ದರೆಂದು ಹೇಳಲು ಯಾವ ಆಧಾರಗಳೂ ಇಲ್ಲ. ವರುಣದ ಗೊಗ್ಗಿಯು ಕಲ್ಯಾಣದ ಚಾಳುಕ್ಯರ ಮನೆತನಕ್ಕೆ ಸೇರಿದ ಮಹಾಸಾಮಂತನಿರಬಹುದೆಂದು ಊಹಿಸುವುದಾದರೆ ಈ ಗೊಗ್ಗಿಯು ಸೇವುಣ ವೇಸುಗಿಯ ಮಾವನಿರಬಹುದೆಂದೂ ಹೇಳಬಹುದು. ವೇಸುಗಿಯೂ ಈ ಗೊಗ್ಗಿಯೂ ಸಮಕಾಲೀನರೆಂದು ಆಗಲೇ ಗಮನಿಸಿದ್ದೇವೆ. ಇದು ನಮ್ಮ ಊಹೆಯನ್ನು ಸಮರ್ಥಿಸುತ್ತದೆ.

[9] Indian Culture, Vol. II, p. 393.

[10] Journal of Indian History, Vol. XXX, p. 125.

ಎನ್. ಕೃಷ್ಣಮುಕಾರಿ

# ' ಚಂದ್ರಯಾನ '

ತೊಟ್ಟಿಲಾಡಲಿ ! ಬಿನ್ನಣದ ಕಲ್ಪನೆಯ ಸೀಮೆಗೆ ಹಾಯಲಿ !
ಭುವಿಯ ಕಂದನ ಯಂತ್ರ–ಸಂಜ್ಞಾ ಚೇತನವು ಕೈಗಾಯಲಿ !

ನಿಖಿಲ ಕರ್ಷಣದೊಳಗೆ ಹರ್ಷದಿ ಸಾಗುತಿಹುದೀ ತೊಟ್ಟಿಲು
ಸುತ್ತ ಮಿನುಗುವ ಲಕ್ಷನಕ್ಷತ್ರಗಳ ಬಾನಿನ ಬಟ್ಟಲು !
ಮೂಡಿ ಮುಳುಗುವ ರುಧಿರವರ್ಣದ ರವಿಯದೋ ಸ್ಥಿರಮೇಖಲೆ !
ನವಿರು ಸ್ಪರ್ಶಕೆ ಕುಕಿಲುತಿದೆ ವ್ಯೋಮಾಂತ ಮಾರ್ಗದ ಕೋಗಿಲೆ !

ಇಲ್ಲಿ ಲಾಸದ ಕಾನು–ನದಿ–ಜನ ಕಲ್ಪವೃಕ್ಷದ ಕಲಕಲ !
ಚಿಮ್ಮಿ ತಿರೆಯಂಚಿನಲಿ ರಿಂಗಣಗುಣಿವ ಕಡಲಿನ ಚಂಚಲ !
ದೀಪ್ತಿ ದೀವಿಗೆ ಹಿಡಿದ ತಂಬೆಳಗತ್ತಲಿತ್ತಲ ನಡುವಣ
ಚಂದ್ರಯಾನದ ಮೋದ ತಳೆತಿದೆ ಕಟ್ಟೆ ನಿಲುಮೆಯ ಕಂಕಣ ;

ಹಚ್ಚಿ ಹರಣವ ಪಣಕೆ ಮುಗಿಲಿನ ಮಲ್ಲಿಗೆಯ ಮುಡಿಗಿರಿಸಿಹ
ಗಿರಿಯ ನೆತ್ತಿಯ ತುಳಿದ ಮಾನವ ಕಬ್ಬಿಣಕೆ ಗರಿ ಬರಿಸಿಹ !
ವರುಣಗರ್ಭವ ಹೊಕ್ಕು ಹವಳದ ಕೋಡು ಕೊರಳಲಿ ತೊಟ್ಟಿಹ
ಚೆಲ್ವ ನೀಲಾಂಬರದಿ ಉಯ್ಯಾಲೆ ಕಟ್ಟಿ ತೂಗಲು ಬಿಟ್ಟಿಹ !

ಜೀವ ಸಂಜೀವನದಿ, ಕಾಲವ ಬೆರಳ ಕೊನೆಯಲಿ ಗಣಿಸುತ,
ಸಿಡಿವ ಅಣುಗಳ ಹಿಡಿದು ಒಡಲಿಗೆ ಬೇಡಿತೊಡಿಸುತ ಮಣಿಸುತ,
' ಬದುಕು ಅಸ್ಥಿರ ! ಜ್ಞಾನ ಸುಸ್ಥಿರ ' ವೆನ್ನುತುನ್ಮುಖ ದಿವದಲಿ
ವಿಲಸದಲಿ ಮನ ತನನವಾಗಿದೆ ತೇಲು ಬಟ್ಟಲ ಕದದಲಿ !

ಬಾರ ! ಪ್ರಿಯಸಖಿ ! ಚಂದ್ರ ಮಂಚಕೆ : ಭಾವನೆಯ ಸುಖದೊಡಲಿಗೆ !
ನೇಹವಿನಿತಿದೆ : ಸಸಿಗೆ ನಿನ್ನಯ ಮೊಗಕೆ ಶಾಂತಿಯ ಕಡಲಿಗೆ !
ಹೊತ್ತು ಸಾಯಲಿ ! ಕತ್ತು ನೋಯಲಿ ! ಮನವು ಇರವನೆ ಮರೆಯಲಿ !
ಪ್ರಣಯ ಚಂದ್ರವಿಹಾರ ' ಶಹರ ' ನ ' ಬೀದಿ ' ನೋಡುವ ತಿರೆಯಲಿ !

ಎಂ. ಜಿ. ನಂಜುಂಡಾರಾಧ್ಯ

# ನಾಟ್ಯಾಚಾರ್ಯ ನಂದಿಕೇಶ್ವರ

ಭಾರತೀಯ ನಾಟ್ಯಶಾಸ್ತ್ರ ಪರಂಪರೆಯ ಪ್ರವರ್ತಕರಾದ ಆಚಾರ್ಯರಲ್ಲಿ
ಶಿವಾಚಾರ್ಯ ನಂದಿಕೇಶ್ವರನ ಹೆಸರು ಪ್ರಮುಖವಾದುದು. ಆತನ ಐತಿಹಾಸಿಕ
ಅನ್ವೇಷಣೆಯ ದಿಶೆಯಲ್ಲಿ ಪ್ರಾಯಃ ಇತಿಹಾಸಕಾರರು ಮೌನ ಧರಿಸಿದ್ದಾರೆ. ಇದಕ್ಕೆ
ಮುಖ್ಯಕಾರಣ, ಬಹುಶಃ ಆತನ ಕೃತಿಯೆನಿಸಿರುವ "ಅಭಿನಯದರ್ಪಣ"ವು
ವಿಳಂಬವಾಗಿ ಪ್ರಕಟವಾದುದು ; ಮತ್ತು ಆತನ ಬಗೆಗೆ ಅಂತರ್ಬಾಹ್ಯ ಸಾಕ್ಷ್ಯಗಳ
ಕೊರತೆ ಮತ್ತೊಂದು ಕಾರಣ.

ನಂದಿಕೇಶ್ವರನ ಜನ್ಮಸ್ಥಾನ ಮತ್ತು ವಂಶಪರಿಚಯದ ಸಂಬಂಧವಾಗಿ
ಪ್ರಾಮಾಣಿಕ ಸಾಮಗ್ರಿಯು ದೊರೆತಿಲ್ಲ. ಡಾ|| ಮನಮೋಹನ ಘೋಷ್
ಎಂಬವರು ಸಂಪಾದಿಸಿರುವ "ಅಭಿನಯದರ್ಪಣ"ದ ಭೂಮಿಕೆಯಲ್ಲಿ (ಪು. ೧೭)
"ದಕ್ಷಿಣ ಭಾರತದಲ್ಲಿ ನಂದಿಕೇಶ್ವರನನ್ನು ಒಬ್ಬ ದೇವತೆಯೆಂದು ಪೂಜಿಸುತ್ತಾರೆ,
ಈ ಕಾರಣದಿಂದ ಈತನು ದಾಕ್ಷಿಣಾತ್ಯನಿರಬಹುದು" ಎಂದು ಊಹಿಸಿದ್ದಾರೆ.
ಇವರ ಹೇಳಿಕೆಯಂತೆ ದಕ್ಷಿಣ ಭಾರತದಲ್ಲಿ ನಂದಿಕೇಶ್ವರನನ್ನು ಪೂಜಿಸುವ ಸಂಸ್ಕೃತಿ
ವೀರಶೈವ. ನಂದಿ ವೀರಶೈವ ಧರ್ಮದ ಗೋತ್ರಪುರುಷ. ನಂದಿ ಮತ್ತು ವೃಷಭ
ಗೋತ್ರಗಳ ಪರಂಪರೆ ಉಜ್ಜಯಿನಿ ಮತ್ತು ಶ್ರೀಶೈಲ ಧರ್ಮಪೀಠಗಳಲ್ಲಿ ಇಂದಿಗೂ
ನಡೆದುಬರುತ್ತಿದೆ.

ಶ್ರೀ ಆನಂದಕುಮಾರಸ್ವಾಮಿ ಅವರು "ಮಿರರ್ ಆಫ್ ಜೆಶ್ಚರ್" ('ಅಭಿನಯ
ದರ್ಪಣ'ದ ಆಂಗ್ಲ ಭಾಷಾಂತರ, ಪು. ೩೧) ಎಂಬ ಗ್ರಂಥದಲ್ಲಿ "ನಂದಿಕೇಶ್ವರನು
ನಂದಿಕೇಶ್ವರತಂತ್ರ, ಪೂರ್ವಮೀಮಾಂಸಾ ಹಾಗೂ ಲಿಂಗಾಯತ ಶೈವಧರ್ಮದ
ಅನುಯಾಯಿ. ಆತನು ಶಿವನ ಅವತಾರ ಮತ್ತು ಕೈಲಾಸದಲ್ಲಿ ಆತನು ಇಂದ್ರ
ನೊಡನೆ ಸಂವಾದ ಮಾಡಿದ್ದಾನೆ. ಪ್ರಾಚೀನ ಉಲ್ಲೇಖಗಳಲ್ಲಿ ಭಗವಾನ್
ಶಂಕರನ ಅನುಚರನಾದ ನಂದಿಯ ಸಂಬಂಧವು ಈ ಅಭಿನಯದರ್ಪಣದ
ನಂದಿಕೇಶ್ವರನಿಗೆ ಇದ್ದಂತೆ ತಿಳಿದುಬರುತ್ತದೆ" ಎಂದು ಹೇಳಿದ್ದಾರೆ.

ಇವರ ಅಭಿಪ್ರಾಯದಂತೆ 'ಅಭಿನಯದರ್ಪಣ'ದ ನಂದಿಕೇಶ್ವರನು ವೀರಶೈವ

ಧರ್ಮಾಚಾರ್ಯನೆಂಬುದು ದೃಢಪಡುತ್ತದೆಯಾದರೂ ಆತನ ಕಾಲನಿರ್ಣಯಕ್ಕೆ ಕೈಲಾಸದ ನಂದಿಯ ಸಂಬಂಧವು ಎಷ್ಟುಮಾತ್ರವೂ ಉಪಯೋಗವಾಗುವುದಿಲ್ಲ. ಏಕೆಂದರೆ ಆವನನ್ನು ಮನುಷ್ಯಲೋಕದಿಂದ ದೇವಲೋಕಕ್ಕೊಯ್ಯುವುದು ವಾಸ್ತವಿಕತೆಗೆ ದೂರ.

ಮತ್ತೆ ಕೆಲವರು ವಿದ್ವಾಂಸರು ಭರತನ ನಾಟ್ಯಶಾಸ್ತ್ರದ ಕಡೆಯಲ್ಲಿರುವ "ಸಮಾಪ್ತಶ್ಚಾಯಂ (ಗ್ರಂಥಃ) ನಂದಿ–ಭರತ ಸಂಗೀತ ಪುಸ್ತಕಮ್"[1] ಎಂಬ ಉಲ್ಲೇಖವನ್ನು ಆಧಿಕರಿಸಿ ಭರತ ಮತ್ತು ನಂದಿಕೇಶ್ವರರಿಗೆ ಏಕತ್ವವನ್ನು ಸಾಧಿಸುತ್ತಾರೆ.[2] ಸೇಠ್ ಕನ್ಹಯ್ಯಾಲಾಲ್ ಪ್ರೋದ್ದಾರ್ ಎಂಬುವರು "ನಂದಿ–ಭರತ" ಎಂಬುದರ ಆಧಾರದ ಮೇಲೆ "ನಂದಿಕೇಶ್ವರನು ಭರತನಿಗಿಂತ ಹಿಂದಿನವನು" ಎಂದು ಒಪ್ಪಿಕೊಂಡು "ನಾಟ್ಯಶಾಸ್ತ್ರದ ಮೇಲೆ 'ಅಭಿನಯದರ್ಪಣ'ದ ಪ್ರಭಾವ ಬಿದ್ದಿದೆ" ಎಂದು ಸಾಧಿಸಿದ್ದಾರೆ.[3] ಇದಕ್ಕೆ ಅವರು ಸುಮಾರು ನಲವತ್ತು ಹಸ್ತಲಿಖಿತ ಪ್ರತಿಗಳನ್ನು ಪರಿಶೀಲಿಸಿದ ಮೇಲೆ ತಾವು ಈ ಅಭಿಪ್ರಾಯಕ್ಕೆ ಬಂದಿರುವುದಾಗಿ ಹೇಳಿ ಈ ಮೂರು ಕಾರಣಗಳನ್ನು ಕೊಟ್ಟಿದ್ದಾರೆ:

೧. ನಂದಿಯ ಪ್ರೇರಣೆಯಿಂದ ನಾಟ್ಯಶಾಸ್ತ್ರವು ರಚಿತವಾಯಿತು.

೨. ಮತ್ತೊಬ್ಬ ಭರತನಿಗಿಂತಲೂ ಈತನು ಬೇರೆ ಎಂದು ಸೂಚಿಸಲು ನಾಟ್ಯಶಾಸ್ತ್ರಕರ್ತೃವಿಗೆ 'ನಂದಿ' ಎಂಬ ವಿಶೇಷಣ ಸೇರಿಸಿದೆ. ಆಥವಾ

೩. ಲಿಪಿಕಾರರ ಅಜಾಗರೂಕತೆಯಿಂದ ಹೀಗಾಗಿರಬಹುದು.

ರಾಜಶೇಖರ(ಕ್ರಿ.ಶ. ಸು. ೧೦ನೇ ಶತಮಾನ)ನ "ಕಾವ್ಯಮೀಮಾಂಸೆ"ಯ ಅಭಿಪ್ರಾಯದಂತೆ ಭರತ ಮತ್ತು ನಂದಿಕೇಶ್ವರರು ವಿಭಿನ್ನ ವ್ಯಕ್ತಿಗಳು. ಅಲ್ಲಿ ಕಾವ್ಯವಿದ್ಯೆಯ ಉತ್ಪತ್ತಿ ಮತ್ತು ಪರಂಪರೆಯನ್ನು ವಿವೇಚಿಸುತ್ತಾ ಭಗವಾನ್ ಶಂಕರನು ಈ ಕಾವ್ಯವಿದ್ಯೆಯನ್ನು ತನ್ನ ೬೪ ಮಂದಿ ಶಿಷ್ಯರಿಗೆ ಉಪದೇಶಿಸಿದನು. ಇವರಲ್ಲಿ ಹದಿನೆಂಟು ಮಂದಿ ಕಾವ್ಯಾಚಾರ್ಯರು. ಅವರಲ್ಲಿ ಒಬ್ಬನಾದ ಭರತನು ನಾಟಕದ ('ರೂಪಕ ನಿರೂಪಣೀಯಂ ಭರತಃ') ಮೇಲೆಯೂ ನಂದಿಕೇಶ್ವರನು ರಸದ ವಿಷಯದ (ರಸಾಧಿಕಾರಿಕಂ ನಂದಿಕೇಶ್ವರಃ) ಮೇಲೆಯೂ ಗ್ರಂಥಗಳನ್ನು ರಚಿಸಿರುವುದಾಗಿ ಹೇಳಲಾಗಿದೆ.[4]

---

[1] ಭರತನಾಟ್ಯಶಾಸ್ತ್ರಮ್ (ಪು. ೪೪೭), ಮುಂಬಯಿ ನಿರ್ಣಯ ಸಾಗರ ಪ್ರೆಸ್ (೧೮೯೪).

[2] ಭರತಶಾಸ್ತ್ರಮ್–ವೇದಾಂತಂ ಲಕ್ಷ್ಮೀನಾರಾಯಣಶಾಸ್ತ್ರಿ, ೨೭–೪–೧೯೪೬ (ಕೃಷ್ಣಾ ಪತ್ರಿಕೆ).

[3] ಸಂಸ್ಕೃತ ಸಾಹಿತ್ಯಕಾ ಇತಿಹಾಸ್ (ಭಾಗ I. ಪು. ೩೬–೩೭)

[4] "ಭಾರತೀಯ ನಾಟ್ಯಪರಂಪರಾ ಔರ್ ಅಭಿನಯದರ್ಪಣ" (ಪು. ೩೭), ವಾಚಸ್ಪತಿ ಗೈರೋಲಾ. "ಸಂಸ್ಕೃತ ವಾಙ್ಮಯ ಚರಿತ್ರ" (ಪು. ೧೮೫), ಮಲ್ಲಾದಿ ಸೂರ್ಯನಾರಾಯಣ ಶಾಸ್ತ್ರೀ.

ಕಾವ್ಯಮೀಮಾಂಸೆಯ ಅಭಿಪ್ರಾಯದಂತೆ ನಂದಿಕೇಶ್ವರನು ರಸವಿಷಯಕ ವಾದ ಗ್ರಂಥದ ಪ್ರಥಮಾಚಾರ್ಯ. ಆದ್ದರಿಂದಲೇ "ರತಿರಹಸ್ಯ" ಮತ್ತು "ಪಂಚಸಾಯಕ' ಎಂಬ ಗ್ರಂಥಗಳಲ್ಲಿ ಆತನನ್ನು ಕಾವ್ಯಶಾಸ್ತ್ರಕ್ಕೂ ಆಚಾರ್ಯ ನೆಂದು ಸ್ತುತಿಸಲಾಗಿದೆ. ಮೇಲಾಗಿ ನಂದಿಯು ಸಂಗೀತ ಶಾಸ್ತ್ರಕ್ಕೂ ಪ್ರವರ್ತಕ ನೆಂದು ಶಾರ್ಙ್ಗದೇವ (ಕ್ರಿ.ಶ. ಸು. ೧೨೧೦–೪೭)ನು ತನ್ನ ಗ್ರಂಥದಲ್ಲಿ ಉಲ್ಲೇಖಿ ಸಿದ್ದಾನೆ.[1]

ಸಂಗೀತಶಾಸ್ತ್ರ ಪ್ರವರ್ತಕರು—

"ಸದಾಶಿವಃ ಶಿವಾ ಬ್ರಹ್ಮಾ ಭರತಃ ಕಶ್ಯಪೋ ಮುನಿಃ ।
ಮತಂಗೋ ಯಷ್ಟಿಕೋ ದುರ್ಗಾ ಶಕ್ತಿಃ ಶಾರ್ದೂಲಕೋಹಲೌ" ॥ ೧೫ ॥
". . . . ಆಂಜನೇಯೋ ಮಾತೃಗುಪ್ತೋ ರಾವಣೋ ನಂದಿಕೇಶ್ವರಃ ।
ಸ್ವಾತಿರ್ಗುಣೋ ಬಿಂದುರಾಜಃ ಕ್ಷೇತ್ರರಾಜಶ್ಚ ರಾಹುಲಃ" ॥ ೧೭ ॥
(—ಸಂಗೀತರತ್ನಾಕರ, ಪ್ರ. ೧. ೧೫–೧೯)

ಮುಂತಾದವರು ನಾಟ್ಯಶಾಸ್ತ್ರ ಪ್ರವರ್ತಕರೆಂದು ಹೇಳಲಾಗಿದೆ. ಅಲ್ಲದೆ ನಂದಿ ಕೇಶ್ವರನು ತಾಲ–ಲಕ್ಷಣ ಅಥವಾ ತಾಲಾದಿ ಲಕ್ಷಣಗಳ ಆಚಾರ್ಯನೆಂದೂ ಹೇಳಲಾಗಿದೆ.[2]

ಈ ಎಲ್ಲ ಕಾರಣಗಳಿಂದ ಆಚಾರ್ಯ ನಂದಿಕೇಶ್ವರನು ಅನೇಕ ವಿಷಯಗಳಲ್ಲಿ ಅಭಿಜ್ಞನಷ್ಟೇ ಅಲ್ಲದೆ ಅನೇಕಗ್ರಂಥಕರ್ತೃವೂ ಆಗಿದ್ದನೆಂದು ವ್ಯಕ್ತವಾಗುತ್ತದೆ.

ಆಚಾರ್ಯ ನಂದಿಕೇಶ್ವರನ ಐತಿಹಾಸಿಕತ್ವವನ್ನು ವಿಮರ್ಶಿಸಿರುವವರಲ್ಲಿ ಮ॥ ಮ॥ ರಾಮಕೃಷ್ಣ ಎಂಬವರು ಮುಖ್ಯರು. ಅವರ ಅಭಿಪ್ರಾಯದಂತೆ ನಂದಿಕೇಶ್ವರ ಮತ್ತು ತಂಡು ಇಬ್ಬರೂ ಒಬ್ಬ ವ್ಯಕ್ತಿಯೇ.[3] ನಂದಿಕೇಶ್ವರನು ಒಂದು ಸಂಹಿತೆಯನ್ನು ರಚಿಸಿದ್ದನು. ಅದರ ಅನೇಕ ಭಾಗಗಳು ನಷ್ಟವಾಗಿವೆ. ಕೇವಲ ಪಾತ್ರಗಳಿಗೆ ಸಂಬಂಧಿಸಿದ ಪ್ರಕರಣವು ಮಾತ್ರ ಇಂದು ಉಳಿದಿದೆ. ಉಳಿದಿರುವ ಭಾಗವೇ ಪ್ರಾಯಶಃ ಅಭಿನಯದರ್ಪಣವಿರಬೇಕು.[4]

ಈ ಅಭಿಪ್ರಾಯಕ್ಕೆ ಪರಿಪೋಷಕವಾಗಿ ಭರತ ನಾಟ್ಯಶಾಸ್ತ್ರದಲ್ಲಿ ಹೀಗೆ ಹೇಳಿದೆ—

---

1 ದಿ ಹಿಸ್ಟರಿ ಆಫ್ ದಿ ಡೆಕ್ಕನ್—ಡಾ॥ ಭಂಡಾರ್‌ಕರ್.

2 ಮದರಾಸ್ ಸರ್ಕಾರವು ಪ್ರಕಟಿಸಿರುವ ಸಂಸ್ಕೃತ ಹಸ್ತಲಿಖಿತ ಗ್ರಂಥಸೂಚಿ.

3 "ತಂಡುಮುನಿಶಬ್ದೌ ನಂದಿ–ಭರತಯೋರಪರನಾಮನೀ"—ಅಭಿನವಭಾರತೀ (ಅಭಿನವಗುಪ್ತಕೃತ).

4 ದಿ ಕ್ವಾರ್ಟರ್ಲೀ ಜರ್ನಲ್ ಆಫ್ ದಿ ಆಂಧ್ರ ಹಿಸ್ಟಾರಿಕಲ್ ರಿಸರ್ಚ್ ಸೊಸೈಟಿ. ಭಾ.೩. (ಪು. ೨೫–೨೬)

ತತಸ್ತಂಡುಂ ಸಮಾಹೂಯ ಪ್ರೋಕ್ತವಾನ್ ಭುವನೇಶ್ವರಃ ।
ಪ್ರಯೋಗಮಂಗಹಾರಾಣಾಮಾಚಕ್ಷ್ವ ಭರತಾಯ ವೈ ॥ ೧೬ ॥

ತತೋ ಯೇ ತಂಡುನಾ ಪ್ರೋಕ್ತಾಸ್ತ್ವಂಗಹಾರಾ ಮಹಾತ್ಮನಾ ।
ತಾಂಶ್ಚ ಕಾರಣಸಂಯುಕ್ತಾನ್ವ್ಯಾಖ್ಯಾಸ್ಯಾಮಿ ಸರೇಚಕಾನ್ ॥ ೧೭ ॥

ತತ್ರ ರೂಪೋಹನಂ ಕೃತ್ವಾ ತಂತ್ರೀಗಾನ ಸಮನ್ವಿತಮ್ ।
ಕಾರ್ಯ ಪ್ರವೇಶೋ ನರ್ತಕ್ಯಾಸ್ತಂಡುವಾದ್ಯ ಸಮನ್ವಿತಃ ॥ ೨೫೫ ॥

(—ನಾಟ್ಯಶಾಸ್ತ್ರ ಅ. ೪.)

ಎಂದರೆ ಅಂಗಹಾರಗಳು, ಕರಣಗಳು ಮತ್ತು ರೇಚಕಗಳ ಅಭಿನಯ ಶಿಕ್ಷೆ ಭರತನಿಗೆ ತಂಡುವಿನಿಂದ ಲಭ್ಯವಾಯಿತು. ಒಂದು ಪಕ್ಷ ತಂಡುವೇ ನಂದಿಕೇಶ್ವರನಾಗಿದ್ದ ಪಕ್ಷದಲ್ಲಿ ಆತ ಭರತನಿಗಿಂತ ಹಿಂದಿನವನೆಂದು ಸಿದ್ಧವೇ ಆಯಿತು. ಆದರೆ ಇದು ವಾಸ್ತವವಲ್ಲ. ಏಕೆಂದರೆ ತಂಡು–ನಂದಿಗಳು ಒಬ್ಬರಲ್ಲ. 'ಅಭಿನಯದರ್ಪಣ'ದ ಪ್ರಾರಂಭದಲ್ಲಿ ಹೇಳಿರುವ

"ನಾಟ್ಯವೇದಂ ದದೌ ಪೂರ್ವಂ ಭರತಾಯ ಚತುರ್ಮುಖಃ ॥ ೨ ॥

ಚತುರ್ಮುಖನು ಭರತನಿಗೆ ನಾಟ್ಯವೇದವನ್ನು ಕೊಟ್ಟನು.

"ಪ್ರಯೋಗಮುದ್ಧೃತಂ ಸ್ಮೃತ್ವಾ ಸ್ವಪ್ರಯುಕ್ತಂ ॥ ೩ ॥

ತಂಡುನಾ ಸ್ವಗಣಾಗ್ರಣ್ಯಾ ಭರತಾಯನ್ವದೀದಿಶತ್ ।
ಲಾಸ್ಯಮಸ್ಯಾಗ್ರತಃ ಪ್ರೀತ್ಯಾ ಪಾರ್ವತ್ಯಾ ಸಮುದೀದಿಶತ್ ॥ ೪ ॥

ಬುಧ್ವಾಽಥ ತಾಂಡವಂ ತಂಡೋರ್ಮರ್ತ್ಯೇಭ್ಯೋ ಮುನಯೋಽವದನ್ ॥ ೫ ॥

"ಪರಮೇಶ್ವರನು ಉದ್ಧತಪ್ರಯೋಗವನ್ನು ನೆನೆದು ಅದನ್ನು ತನ್ನ ಗಣವರರಲ್ಲೊಬ್ಬನಾದ ತಂಡುವಿಗೆ ಕೊಟ್ಟನು. ಅದೇ ಮುಂದೆ 'ತಾಂಡವ'ವೆನಿಸಿತು"— ಎಂಬ ವರ್ಣನೆಗಳು ನಂದಿ–ತಂಡುಗಳು ಬೇರೆಬೇರೆಯೆಂದೂ, ಭರತನು ನಂದಿಕೇಶ್ವರನಲ್ಲವೆಂದೂ ಸಿದ್ಧಪಡಿಸುತ್ತವೆ.

### ನಂದಿಕೇಶ್ವರನ ಕಾಲ

ಆಚಾರ್ಯ ನಂದಿಕೇಶ್ವರನ ಕಾಲದ ವಿಷಯವನ್ನು ಕುರಿತು ವಿಚಾರಮಾಡುವಾಗ ಬಾಹ್ಯಸಾಮಗ್ರಿಗಳ ಪರಿಶೀಲನೆಯಲ್ಲಿ ಸಂಗೀತಾಚಾರ್ಯ ಮತಂಗನ ಹೆಸರು ಮುಂದೆ ಬರುತ್ತದೆ. ಮತಂಗನು ನಂದಿಕೇಶ್ವರನನ್ನು ಉಲ್ಲೇಖಿಸಿದ್ದಾನೆ. "ಶಿಲಪ್ಪದಿಕಾರಂ" ಎಂಬ ತಮಿಳು ಗ್ರಂಥದಲ್ಲಿ ಮತಂಗನ ಹೆಸರಿದೆ. ಶಿಲಪ್ಪದಿಕಾರದ ಕಾಲ ಕ್ರಿ. ಶ. ಸು. ೫೦೦ ಎಂದು ಸಿದ್ಧಮಾಡಲಾಗಿದೆ. ಇದರಿಂದ ಆಚಾರ್ಯ ಮತಂಗನು ಕ್ರಿ.ಶ. ೫ನೇ ಶತಮಾನದ ಪೂರ್ವದವನಾಗುತ್ತಾನೆ.

ಅಂದಮೇಲೆ ಮತಂಗನು ಹೆಸರಿಸಿರುವ ನಂದಿಕೇಶ್ವರನು ಏನಿಲ್ಲೆಂದರೂ ಕ್ರಿ. ಶ. ಸು. ೪೦೦ಕ್ಕಿಂತ ಪೂರ್ವದವನೆಂದು ದೃಢವಾಗುತ್ತದೆ.

ಎರಡನೆಯದಾಗಿ 'ಅಭಿನಯದರ್ಪಣ'ದಲ್ಲಿ ಉಲ್ಲೇಖಿಸಿರುವ ದಶಾವತಾರಗಳ ಅಭಿನಯದಲ್ಲಿ ಬುದ್ಧಾವತಾರವನ್ನು ಕೈಬಿಡಲಾಗಿದೆ (ಶ್ಲೋ. ೨೧೭-೨೨೫). ಬುದ್ಧನ ಸ್ಥಳದಲ್ಲಿ ಕೃಷ್ಣಾವತಾರವೇ ಇದೆ. ಇದಕ್ಕೆ ಕಾರಣ, ಬೌದ್ಧಧರ್ಮ ಹಾಗೂ ಹಿಂದೂ ಧರ್ಮಗಳಿಗೆ ಪ್ರಬಲವಾದ ಘರ್ಷಣವಿದ್ದಕಾಲದಲ್ಲಿ ಅಭಿನಯ ದರ್ಪಣವು ರಚಿತವಾಗಿರುವುದು. ವೇದವಿರುದ್ಧವಾದ ನಾಸ್ತಿಕಧರ್ಮವೊಂದಕ್ಕೆ ಪ್ರವರ್ತಕನಾದ ಬುದ್ಧನನ್ನು ಹಿಂದೂ ದೇವತೆಯ ಸ್ಥಾನದಲ್ಲಿ ಸೇರ್ಪಡೆ ಮಾಡಿದುದು ಬೌದ್ಧ ಧರ್ಮದ ಇತ್ತೀಚಿನ ದಿನಗಳಲ್ಲಿ. ಬುದ್ಧನನ್ನು ದಶಾವತಾರ ಗಳಲ್ಲಿ ಸೇರ್ಪಡೆಮಾಡಿದ ಗ್ರಂಥಗಳನ್ನು ಪರಿಶೀಲಿಸುವಾಗ ಮತ್ಸ್ಯಪುರಾಣದ ಹೆಸರು ಮೊದಲು ಬರುತ್ತದೆ. ಮತ್ಸ್ಯಪುರಾಣ (ಅ. ೪೭. ಶ್ಲೋ. ೨೪೭), ಆ ತರುವಾಯ ಭಾಗವತ (೧.೩.೨೪)ಗಳಲ್ಲಿ ಬುದ್ಧನು ದಶಾವತಾರಗಳಲ್ಲಿ ಒಂಬತ್ತನೆಯವನಾಗಿ ಉಲ್ಲೇಖಿತನಾಗಿದ್ದಾನೆ. ಮತ್ಸ್ಯಪುರಾಣದ ಕಾಲ ಕ್ರಿ.ಶ. ಸು. ೬ನೆಯ ಶತಮಾನವೆಂದೂ, ಭಾಗವತವು ತದನಂತರದ್ದೆಂದೂ ಸಿದ್ಧವಾಗಿದೆ. ಈ ಕಾರಣದಿಂದ 'ಅಭಿನಯದರ್ಪಣ'ದ ರಚನೆಯು ಕ್ರಿ.ಶ. ೫ನೇ ಶತಮಾನ ಪೂರ್ವವೆಂದು ದೃಢಪಡುತ್ತದೆ.

### ವೀರಶೈವಧರ್ಮ–ನಂದಿಕೇಶ್ವರ

ಆಚಾರ್ಯ ನಂದಿಕೇಶ್ವರನು ಶೈವಧರ್ಮೀಯನೆಂಬ ಬಗೆಗೆ ವಿವಾದವಿಲ್ಲ. ಆದರೆ ಆತನು ಲಿಂಗಧಾರಣವುಳ್ಳ ವೀರಶೈವಧರ್ಮಾಚಾರ್ಯನೆಂಬ ವಿಷಯದಲ್ಲಿ ಪರಿಶೀಲನೆ ಅಗತ್ಯ. ಈ ವಿಷಯವನ್ನು ವಿಮರ್ಶಿಸುವಾಗ ಲಿಂಗಧಾರಣದ ಪ್ರಾಚೀನತೆ ಹಾಗೂ 'ಭರತರ' ಪೂರ್ವಚರಿತ್ರೆಯ ಪರಿಚಯ ಅತ್ಯಗತ್ಯ.

ಲಿಂಗವನ್ನು ಶರೀರದ ಮೇಲೆ ಧರಿಸಿಕೊಳ್ಳುವ ಸಂಸ್ಕೃತಿ ಪ್ರಾಗೈತಿಹಾಸಿಕ ಕಾಲದಿಂದ ಬಂದುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮೊಹೆಂಜೋ ದಾರೋ ಮತ್ತು ಹರಪ್ಪ ಕಣಿವೆಗಳಲ್ಲಿ ಪರಿಶೋಧನೆಗಳನ್ನು ನಡೆಯಿಸಿದವರಲ್ಲಿ ಒಬ್ಬರಾದ ಸರ್ ಜಾನ್ ಮಾರ್ಷೆಲ್ ಎಂಬುವರು ಅಲ್ಲಿ ಸಿಕ್ಕಿರುವ ಅವಶೇಷಗಳಲ್ಲಿ ಸಣ್ಣ ಲಿಂಗಗಳನ್ನು ಇಂದಿನ ಶೈವರಂತೆ ದೇಹದ ಮೇಲೆ ಧರಿಸಿಕೊಳ್ಳಲು ಉಪ ಯೋಗಿಸುತ್ತಿದ್ದರೆಂದೂ, ದೊಡ್ಡವನ್ನು ಪೂಜೆಗಾಗಿ ಉಪಯೋಗಿಸುತ್ತಿದ್ದರೆಂದೂ ಅಭಿಪ್ರಾಯಪಟ್ಟಿದ್ದಾರೆ. ಈ ಶೈವರು ವೀರಶೈವರೆಂದೇ ಅವರ ಗ್ರಂಥದ ೬೧ನೆಯ ಪುಟದ ಅಡಿಟಿಪ್ಪಣಿಯಲ್ಲಿ ಸ್ಪಷ್ಟಪಡಿಸಿದ್ದಾರೆ.[1] ಕೀಥ್ ಮತ್ತು ಫ್ರೀಲಸ್ಕಿ ಎಂಬ

1 ವೀರಶೈವ ಉಗಮ ಮತ್ತು ಪ್ರಗತಿ.—ಶ್ರೀ ಟ. ಎನ್. ಮಲ್ಲಪ್ಪನವರು, ಬೆಂಗಳೂರು.

ಪಂಡಿತರು "ಯೂರೋಪಿನ ಭೂಮಧ್ಯ ಸಮುದ್ರತೀರದ ಕೆಲವು ಜನಾಂಗಗಳಲ್ಲಿ ಲಿಂಗ ಚಿಹ್ನವನ್ನು ತಾಯಿತದಂತೆ ಪೀಡಾನಿವಾರಣೆಗಾಗಿ ಕೊರಳಲ್ಲಿ ಕಟ್ಟಿಕೊಳ್ಳುವ ರೂಢಿಯಿತ್ತು", ಅಲ್ಲದೆ "ಲಿಂಗಧಾರಣಕ್ರಮವನ್ನು ಆರ್ಯ ಹಾಗೂ ದ್ರಾವಿಡ ರಿರ್ವರೂ, ಅವರಿಗಿಂತ ಮೊದಲೇ ಇದ್ದ ಆಸ್ಟ್ರೋ-ಏಷಿಯಾಟಿಕ್ ಎಂಬ ಜನಾಂಗ ದವರಿಂದ ಸ್ವೀಕರಿಸಿದ್ದಿರಬೇಕು" ಎಂದು ಅಭಿಪ್ರಾಯಪಟ್ಟಿದ್ದಾರೆ.[1]

ಋಗ್ವೇದದಲ್ಲಿ ಆರ್ಯವಿರೋಧಿ ಪಂಗಡಗಳಲ್ಲಿ ಫಣಿಗಣವು ಪ್ರಥಮಸ್ಥಾನ ವನ್ನು ಪಡೆದಿದೆ. ಆಚಾರ್ಯ ಸಾಯಣರು 'ಫಣಿ' ಎಂದರೆ 'ವಣಿಕ್' ಎಂದು ಅರ್ಥಯಿಸಿದ್ದಾರೆ. ಈ ಜನರು ವ್ಯಾಪಾರಿಗಳು. ಇವರು ಹೊರದೇಶಗಳಲ್ಲಿ ಸಂಚರಿಸಿ ತಮ್ಮ ಲಿಂಗಾರ್ಚನೆ, ಲಿಂಗಧಾರಣಗಳನ್ನೊಳಗೊಂಡ ಸಂಸ್ಕೃತಿಯನ್ನು ಮೆಡಿಟರೇನಿಯನ್ ತೀರದ ದೇಶಗಳವರೆಗೂ ಹಬ್ಬಿಸಿದರು.[2]

ಇಂದಿಗೂ ವೀರಶೈವರಲ್ಲಿ ಮುಖ್ಯವಾದ ಪಂಗಡಕ್ಕೆ "ಬಣಜಿಗ"ರೆಂದು ಹೆಸರು. 'ಫಣಿ'ಗಳಿಗೆ ವೃಷಭವೇ ಧನವಾಗಿತ್ತು. ಆರ್ಯರು ಬರುವ ಮುನ್ನವೇ ಫಣಿಜನರು ಇಲ್ಲಿದ್ದರು. ಯಾಜ್ಞಿಕರಾದ ಆರ್ಯರೂ ಗೋಧನರು. ಗೋಧನ ಕ್ಕಾಗಿ ಈ ಎರಡೂ ಜಾತಿಗಳಲ್ಲಿ ಆಗಾಗ್ಗೆ ಯುದ್ಧಗಳಾಗುತ್ತಿದ್ದವು. ಫಣಿ ಜನರನ್ನು 'ಅಕ್ರತು' ಎಂದರೆ 'ಯಜ್ಞವಿರೋಧಿ'ಗಳೆಂದು ಕರೆಯುತ್ತಿದ್ದರು. ಅವರಲ್ಲಿ ಅನೇಕ ಶಾಖೆಗಳಿದ್ದವು. ಅವರನ್ನು ಆರ್ಯರು 'ರಾಕ್ಷಸರು, ವಾನರರು' ಮುಂತಾಗಿ ಕರೆದರು. ಅವರಿಗೆ ಪ್ರತ್ಯೇಕವಾದ ಲಿಪಿ ಮತ್ತು ಸಂಸ್ಕೃತಿಗಳಿದ್ದವು.[3]

ಫಣಿಗಳು ಭರತನಾಟ್ಯ ನಿಪುಣರು. ಈ ಗಣದಲ್ಲಿ ನಂದಿಕೇಶ್ವರನು ನಾಟ್ಯ ಶಾಸ್ತ್ರ ಪ್ರವೀಣನಾಗಿದ್ದನು.

> ಆಂಗಿಕಂ ಭುವನಂ ಯಸ್ಯ ವಾಚಕಂ ಸರ್ವವಾಙ್ಮಯಮ್ |
> ಆಹಾರ್ಯಂ ಚಂದ್ರತಾರಾದಿ ತಂ ನಮಃ ಸಾತ್ವಿಕಂ ಶಿವಮ್ ॥ ೧ ॥
>
> (—ಅಭಿನಯದರ್ಪಣ)

ಎಂದು ನಂದಿಕೇಶ್ವರನಿಂದ ನಟರಾಜನು ಸ್ತುತನಾಗಿದ್ದಾನೆ. ನಂದಿಕೇಶ್ವರ, ತಂಡು ಮತ್ತು ಭೃಂಗೀಶ್ವರಾದಿಗಳ ವಿವಿಧ ಭಂಗಿಗಳನ್ನು ಭರತನಟಕರು ಅಭಿನಯಿಸುತ್ತಿದ್ದರು. ನಾಟ್ಯಕ್ಕೆ ಮೂಲವೆನಿಸಿರುವ ಉದ್ಧತ (ತಾಂಡವ) ನಾಟ್ಯಕ್ಕೆ ಶಿವನೂ, ಮೃದು (ಲಾಸ್ಯ) ಲಾಸ್ಯಕ್ಕೆ ಪಾರ್ವತಿಯೂ ಪ್ರವರ್ತಕರಾಗಿ ದ್ದಾರೆ. ಶಿವನ ಹೆಸರುಗಳೆನಿಸಿದ ನಟರಾಜ, ತಾಂಡವನ್, ಅರ್ಧನಾರೀಶ್ವರ,

---

[1] 'ಶಿವರಹಸ್ಯ' (ಪು. ೨೪–೨೫) ಶಂ. ಬಾ. ಜೋಶಿ.

[2] Religions of India (p. 7)–A. P. Karamarkar.

[3] ಭಾರತೀಯ ಲಿಪಿತತ್ತ್ವ—ನಾಗೇಂದ್ರನಾಥಬಸು, ಎಂ. ಆರ್. ಎ. ಎಸ್.

ಚಂದ್ರಚೂಡ, ನಾಗಾಭರಣ, ಧವಳಗಿರಿನಿವಾಸ ಮುಂತಾದ ಹೆಸರುಗಳು ಆಯಾ ಹೆಸರು ತಳೆದ ಮಾನವವ್ಯಕ್ತಿಗಳಿಗೇ ಅನ್ವಯಿಸುವುವೆಂದು ವಿದ್ವಾಂಸರು ತರ್ಕಿಸಿದ್ದಾರೆ.

ಅರ್ಧನಾರೀಶ್ವರಶ್ಚೈವ ಶಂಕರಶ್ಚಂದ್ರಶೇಖರಃ ।
ಗಣಾಧ್ಯಕ್ಷಃ ಪಶುಪತಿಃ ಸರ್ವೇ ತೇ ಲಿಂಗಧಾರಕಾಃ ॥ ೨೪೦ ॥

ಗೌರೀನಾಥ ಉಮಾನಾಥ ಅಂಬಿಕಾ ಪಾರ್ವತೀಪತಿಃ ।
ಗಂಗಾಧರೋ ಮಹಾದೇವಃ ಸತತಂ ಲಿಂಗಧಾರಕಾಃ ॥ ೨೪೧ ॥

ತಥಾಗಸ್ತ್ಯಾದಿ ದೂರ್ವಾಸಾ ಮುನಯೋ ನಂದಿಕೇಶ್ವರಃ ।
ಮಹಾಕಾಲೋ ದಧೀಚಿಶ್ಚ ಕಣಾದಃ ಪಾಣಿನಿಸ್ತಥಾ ॥ ೨೪೨ ॥

ಸ್ಕಂದೋ ಭೃಂಗಿರಿಟಿರ್ವೀರಭದ್ರಶ್ಚ ಪ್ರಮಥಾದಯಃ ।
ದೇವಾಸುರ ಮನುಷ್ಯಾಶ್ಚ ಸರ್ವೇ ತೇ ಲಿಂಗಧಾರಕಾಃ ॥ ೨೪೪ ॥

(—ಸ್ಕಾಂದಪುರಾಣ, ಕಾಳಿಕಾಕಾಂಡ, ಅ. ४)

ಮುಂತಾದ ಅವತರಣಗಳಲ್ಲಿ ನಂದಿಕೇಶ್ವರ ಮುಂತಾದ ಶಿವಭಕ್ತರು ಲಿಂಗಧಾರಿಗಳಾಗಿದ್ದು ಭರತಾದಿಶಾಸ್ತ್ರಗಳಿಗೆ ಪ್ರವರ್ತಕರಾಗಿದ್ದರೆಂದು ಹೇಳಲು ಇಂಬು ದೊರೆಯುತ್ತದೆ.

ಭರತನಾಟ್ಯದಲ್ಲಿ ಡಿಂಡಿಮಾದಿ ಅನೇಕ ನಾಟ್ಯರೀತಿಗಳಿವೆ. ಅವುಗಳಲ್ಲಿ ನಾಗನಾಟ್ಯವೂ ಒಂದು. ಶಿರಸ್ಸಿನಲ್ಲಿ ನಾಗಹೆಡೆಗಳನ್ನು ಧರಿಸಿ ಕೆಳಭಾಗದಲ್ಲಿ ವಾಲಗಳನ್ನು ಕಟ್ಟಿದ ನಟನು ನಾಗರೂಪ ಹೊಂದುತ್ತಿದ್ದನು. ಇದನ್ನೇ ಅಮರ ನಿಘಂಟು ಟೀಕಾಕಾರನಾದ ಲಿಂಗಭಟ್ಟನು "ನಾಗ–ಕಾದ್ರವೇಯಿಾ ಶಬ್ದಾ ಮಾನುಷಾಕಾರೇಷು ಫಣಲಾಂಗೂಲಾದಿಯುಕ್ತೇಷು ದೇವಯೋನಿಷು ಭೋಗಿಷು ವರ್ತತೇ" (ಗುರುಬಾಲಪ್ರಬೋಧಿಕೆ. ಕಾಂ. ೧. ಶ್ಲೋ. ೨೨४) ಎಂದು ಅರ್ಥಯಿಸಿದ್ದಾನೆ. ಎಂದರೆ ನಾಗಶಬ್ದವು ಹೆಡೆ:ಬಾಲಗಳನ್ನು ಧರಿಸಿದ ಮನುಷ್ಯ ರೂಪಿಗಳು ಮತ್ತು ದೇವಯೋನಿ ವಿಶೇಷಗಳೆನಿಸಿದ ನಾಗರಹಾವಿನ ಹೆಸರುಗಳು. ನಾಗನಾಟ್ಯದಲ್ಲಿ ನಾಗರಹಾವಿನ ವೇಷಭೂಷಣಗಳನ್ನು ಧರಿಸುವುದರಿಂದ ನಾಗ ನಟರನ್ನು "ನಾಗರು" ಎಂದು ವ್ಯವಹರಿಸಿದರು. ಇವರೇ ವೇದಕಾಲದ ಫಣಿ, ನಾಗ, ಜನಾಂಗಗಳು.

ಭರತಶಾಸ್ತ್ರ ಪ್ರವೀಣರಾದ ವೇದಕಾಲದ ಫಣಿಗಳೇ ಪುರಾಣಗಳಲ್ಲಿ ನಾಗ ಜನಾಂಗವೆನಿಸಿತು. ಮಹಾಭಾರತದ ಆದಿಪರ್ವದಲ್ಲಿ ಬರುವ ಸರ್ಪಯಾಗದ ವರ್ಣನವು ನಾಗಜನಾಂಗವನ್ನು ನಿರ್ಮೂಲಮಾಡಲು ಏರ್ಪಟ್ಟ ಸಂಚು. "ವಾಸುಕಿ" ಎಂಬ ನಾಗಜಾತಿಯುವನ ತಂಗಿಯ ಮಗನೇ "ಆಸ್ತಿಕ". ಆಸ್ತಿಕನ ತಂದೆ ಆರ್ಯಜನಾಂಗದ ಬ್ರಾಹ್ಮಣ. ಅವನಿಗೆ ನಾಗಕನ್ಯೆಯೊಡನೆ ಸಂಬಂಧ

ವೇರ್ಪಟ್ಟಿತ್ತು. ಆತನ ಪ್ರಯತ್ನದ ಫಲವಾಗಿಯೇ ನಾಗಜಾತಿ ಉಳಿಯಿತು. ಅಂದಿನಿಂದ ನಾಗರ ಚರಿತ್ರೆ ಕಡಮೆಯಾಯಿತು. ಕ್ರಿ.ಶ. ೬೯೧ರಲ್ಲಿ ನಾಗರು "ಶಿಶುನಾಗರು" ಎಂಬ ಹೆಸರಿನಿಂದ ಮಗಧರಾಜ್ಯವನ್ನು ಆಳತೊಡಗಿದರು.[1] ನಾಗರು ಪರದೇಶಗಳಿಗೆ ವಲಸೆಹೋದರು. ಇವರಿಗೆ ಒಂದೊಂದು ದೇಶದಲ್ಲಿ ಒಂದೊಂದು ಹೆಸರುಂಟಾಯಿತು. ನಂದಲಾಲ್ ಡೇ ಅವರ ಹೇಳಿಕೆಯಲ್ಲಿ ನಾಗರಿಗೆ ಇರುವ ಹೆಸರುಗಳು ಹೂಣರಲ್ಲಿರುವ ವಿವಿಧ ಜಾತಿಗಳಿಗೆ ಹೋಲುತ್ತವೆ. ಹಿಂಗನು (Hingnu) ಎಂಬುದು ಹೂಣರ ಹೆಸರು. ಇದರ ಮಾತೃಕೆ 'ನಾಗ' ಎಂಬುದು. ಇದರಂತೆ ಸರ್ತನ್ಪ, ಸರ್ಪ, ಉಗುರಸ್ ಎಂಬವುಗಳು ಮತ್ತು ಶಕಜಾತಿಗಳು, ಫಿನಿಷಿಯಾದಲ್ಲಿನ ಫನಿಕರು, ಫಣಿ, ಮುಂತಾದವರೆಲ್ಲರೂ ನಾಗಜಾತಿಯ ಪ್ರಭೇದ ಗಳಿಗೆ ಸೇರಿದವರೇ ಎಂದು ಹೇಳಲಾಗಿದೆ.[2] ಯವನರು, ಪಲ್ಲವರು, ನಾಗರು ಒಂದೇ ಬುಡಕಟ್ಟಿಗೆ ಸೇರಿದವರು; ಕೆಲವರು ಕನ್ನಡನಾಡಿನಲ್ಲಿಯೂ ವಾಸಿಸು ತ್ತಿದ್ದರು.[3]

### ಭಾರಶಿವ (ಶಿಶುನಾಗರು)

ಭರತ, ಫಣಿ, ನಾಗ, ಬಣಜ ಎಂಬ ಹೆಸರಿನವರು ಶೈವಧರ್ಮವನ್ನು ಅವಲಂಬಿಸಿದವರೆಂದು ಎರಡುಸಾವಿರ ವರ್ಷಗಳಷ್ಟು ಚಾರಿತ್ರಕ ಆಧಾರಗಳಿಂದ ಸ್ಪಷ್ಟಪಡುತ್ತದೆ. ನಾಗರ ಮೊಟ್ಟಮೊದಲನೆಯ ರಾಜವಂಶವು ವಿದಿಶಾ ನಗರ ದಲ್ಲಿತ್ತು. ಅಲ್ಲಿ ಶೇಷನಾಗ, ಭೋಗನಾಗ ಮೊದಲಾದವರಿದ್ದರು. ಕ್ರಿ. ಶ. ೮೦–೧೪೦ರ ವರೆಗೆ ಅವರು ಮಧ್ಯಭಾರತದ ಕಾಡುಗಳಲ್ಲಿ ಅಡಗಿದ್ದರು. ಅಲ್ಲಲ್ಲಿ ಚಿಕ್ಕಪುಟ್ಟ ರಾಜ್ಯಗಳನ್ನು ಸ್ಥಾಪಿಸಿದ್ದರು. ಅಲ್ಲಿಂದ ಅವರು ರೇವಾ, ಬಾಗಲ್ ಖಂಡದಿಂದ ಗಂಗಾತೀರದವರೆಗೆ ವ್ಯಾಪಿಸಿ ಶಕರಾಜರೊಡನೆ ಹೋರಾಡಿ ಭಾರತದಲ್ಲಿ ಸಾರ್ವಭೌಮರಾದರು. ಈ ನಾಗರಾಜರಿಗೆ "ಭಾರಶಿವ" ಎಂಬ ಹೆಸರಿತ್ತು. ಇವರಲ್ಲಿ ವೀರಸೇನ, ಹಯನಾಗ, ಭರಜನಾಗ ಮುಂತಾದವರು ಪ್ರಸಿದ್ಧರಾಗಿದ್ದರು. ನಾಗರಾಜ್ಯಾಂತರ್ಗತ "ಪರಸಮನಿಯಾ" ಪರ್ವತದ ಮೇಲೆ ಭಮರಾ ಗ್ರಾಮಕ್ಕೆ ಸಮೀಪದ ಅರಣ್ಯದಲ್ಲಿನ ಒಂದು ಶಿಥಿಲಮಂದಿರದಲ್ಲಿ ಲಿಂಗಧಾರಣವಿರುವ ಒಂದು ಮೂರ್ತಿಯಿದೆ. ಅದರ ಹೆಸರು "ಭಾಕುಲಬಾಬಾ" ಎಂದು. ಇದು ಭಾರಕುಲ ದೇವತೆಯ ಹೆಸರಾಗಿರಬೇಕು. ಆ ಮಂದಿರದ ಸುತ್ತು ಬಿದ್ದಿರುವ ಇಟ್ಟಿಗೆಗಳಲ್ಲಿ

---

[1] ಆಂಧ್ರುಲ ಚರಿತ್ರ, ಭಾಗ I (ಪು. ೫೮), ಚಿಲಕೂರಿ ವೀರಭದ್ರರಾವ್ ಪಂತಲು(೧೯೧೦).

[2] ರಸಾತಲ (ಪು. ೫೧) ರಾಮಾಯಣ ವಿಶೇಷಮುಲು (ಪು. ೧೨೧–೧೩೫)–ಸುರ ವರಮು ಪ್ರತಾಪರೆಡ್ಡಿ (ಜೂನ್ ೧೯೪೨).

[3] ಕನ್ನಡನಾಡಿನ ಚರಿತ್ರೆ ಭಾಗ I, ರಾಜಕೀಯಚರಿತ್ರೆ (ಪು. ೧೪೨)–ಡಾ|| ಬಿ. ಎ. ಸಾಲೆತೊರೆ.

ಅನೇಕ ಅಕ್ಷರಗಳಿದ್ದು ಅವು ಕ್ರಿ. ಶ. ೧೫೦–೨೦೦ರವರೆಗಿನವೆಂದು ಕಾಶೀಪ್ರಸಾದ್ ಜೋಯಿಸ್ ವಾಲಾ ಅವರು ಬರೆದಿದ್ದಾರೆ.[1] ನಾಗವಂಶದ ಶಿಲಾಶಾಸನಗಳಲ್ಲಿ— "ಅಂಸಭಾರ ಸನ್ನಿವೇಶಿತ ಶಿವಲಿಂಗೋದ್ವಹನ ಶಿವಸುಖಪರಿತುಷ್ಟ ಸಮುತ್ಪಾದಿತ ರಾಜವಂಶಾನಾಂ, ಪರಾಕ್ರಮಾಧಿಗತ ಭಾಗೀರಥ್ಯಮಲಜಲಮೂರ್ಧಾಭಿಷಿಕ್ತಾನಾಂ ದಶಾಶ್ವಮೇಧಾವಭೃತಸ್ನಾನಾನಾಂ ಭಾರಶಿವಾನಾಂ" ಎಂಬ ಉಲ್ಲೇಖಗಳಿವೆ.[2]

ಕಾಶಿಯಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಒಂದು ಮೂರ್ತಿ ದೊರೆತಿದೆ. ಅದರ ಶಿರಸ್ಸಿನಲ್ಲಿ ಲಿಂಗಧಾರಣವಿದೆ.[3] ಈ ವಿಷಯವನ್ನು ಡಾ|| ಎಸ್. ಸಿ. ನಂದಿಮಠ ಇವರು ತಾವು ರಚಿಸಿರುವ 'ಕನ್ನಡನಾಡಿನ ಚರಿತ್ರೆ' (ಭಾ. II, ಪು. ೧೮೪)ಯಲ್ಲಿ ಸಮರ್ಥಿಸಿದ್ದಾರೆ. ಭಾರಶಿವರಾಜನ ಮೂರ್ತಿಯು 'ಕಾಶೀ ನಾಗರೀ ಪ್ರಚಾರಿಣೀ ಸಭೆ'ಯ ಕಳಾಭವನದಲ್ಲಿ ಇಡಲ್ಪಟ್ಟಿದೆ. ಈ ಮೂರ್ತಿಯ ಶಿರಸ್ಸಿನಲ್ಲಿ ಶಿವಲಿಂಗವಿದೆ.[4]

## ವಾಕಾಟಕರು

ಶಿವಲಿಂಗವನ್ನು ಧರಿಸುವ ಧರ್ಮವುಳ್ಳ 'ಭಾರಶಿವ' ರಾಜವಂಶವು ಕ್ರಿ.ಶ. ೧ನೆಯ ಶತಮಾನದಲ್ಲಿಯೇ ಕಾಶೀ ಪ್ರದೇಶದಲ್ಲಿತ್ತು. ಈ ಧರ್ಮವುಳ್ಳದ್ದೇ ವಾಕಾಟಕ ರಾಜವಂಶ. ಇವರೂ ಶಿವಭಕ್ತರು. ಕ್ರಿ.ಶ. ೩೦೦ರ ಸುಮಾರಿನ ಅಮರಾವತಿ ಸ್ತೂಪದಲ್ಲಿ ಇವರ ಅಸ್ತಿತ್ವವು ಕಂಡುಬರುತ್ತದೆ. ವಿನ್ಸೆಂಟ್ ಸ್ಮಿತ್ ಎಂಬುವರ ಅಭಿಪ್ರಾಯದಂತೆ ವಾಕಾಟಕ ವಂಶವು ಕ್ರಿ.ಶ. ೩೦೦ರ ಸುಮಾರಿನಲ್ಲಿ ಅಧಿಕಾರಕ್ಕೆ ಬಂತು. ಈ ಶಾಸನಗಳಲ್ಲಿ ಕಂಡುಬರುವ ವಾಕಾಟಕ ಪಾಠವು ಸರಿಯಾದುದಾದರೆ ಕ್ರಿ.ಪೂ. ೧೫೦ ವರ್ಷಗಳಲ್ಲಿಯೇ ದಕ್ಷಿಣದಲ್ಲಿ ವಾಕಾಟಕರಿದ್ದರೆಂದು ಗುರ್ತಿಸಬಹುದಾಗಿದೆ.[5] ವಾಕಾಟಕ ರಾಜಕನ್ಯೆಯನ್ನು ಮದುವೆಯಾದ ವಿಷ್ಣುಕುಂಡಿನ ವಂಶದ ಮಾಧವ ವರ್ಮ ಶೈವ. ಅವರ ಕುಲದೇವತೆ ಶ್ರೀಶೈಲ ಮಲ್ಲಿಕಾರ್ಜುನ. ಇವರ ಕಾಲದಲ್ಲಿ ಶೈವಧರ್ಮ ಪ್ರಬಲಿಸಿತು. ಇವರ ಕಾಲ ಕ್ರಿ.ಶ. ೩೫೦–೬೧[6].

---

1 ಕಲ್ಯಾಣ ಶಿವಾಂಕ "ಭಾರಶಿವ ವಾಕಾಟಕ ರಾಜವಂಶಗಳ ಇಷ್ಟದೇವಸು". ಶ್ರೀ ಶಾರದಾಪ್ರಸಾದ್‌ಜೀ ಪತನಾ (ಪು. ೫೯೯–೬೦೦).

2 "ವೀರಶೈವ" ೧೯೬೨ ಸೆಪ್ಟೆಂಬರ್. ನಾ. ಪ. ಭಾ. ೧೩. ಅಂಕ ೧.

3 ಗಂಗಾಪುರ .ತತ್ತ್ವಾಂಕ (ಪು. ೬೯) (ಕಲ್ಯಾಣಶಿವಾಂಕ) "ಶಿವೋಪಾಸನೆಯ ಪ್ರಾಚೀನತೆ."

4 ಶುದ್ಧಿ ಮತ್ತು ಸಂಘಟನೆ (ಪು. ೩).

5 ಆಂಧ್ರ ವಿಜ್ಞಾನ ಸರ್ವಸ್ವಮು. ಸಂ. ೨. ಅಮರಾವತೀ, ಟಿ. ಎಸ್. ರಾಮಚಂದ್ರನ್.

6 ಆಂಧ್ರ ಸರ್ವಸ್ವಮು (ಪು. ೧೧೬–೧೧೭).

## ಪಲ್ಲವರು

ವಾಕಾಟಕರ ತರುವಾಯ ದಕ್ಷಿಣ ಭಾರತದಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಿದವರಲ್ಲಿ ಪಲ್ಲವರು ಮುಖ್ಯರು. ಪುರಾಣಗಳಲ್ಲಿಯೂ ಪಲ್ಲವರ ಉಲ್ಲೇಖವಿದೆ. ಪಲ್ಲವ, ಬಲ್ಲವ ಎಂಬ ಹೆಸರುಗಳು ಬರುವುದಕ್ಕೆ ವಿವಿಧ ಕಾರಣಗಳೂ ಉಕ್ತವಾಗಿವೆ. ವಸಿಷ್ಠಮಹರ್ಷಿಯ ಕಾಮಧೇನು ಗುಟರುಹಾಕಿದಾಗ ಪಲ್ಲವರು ಹುಟ್ಟಿದರೆಂದು ಹರಿವಂಶ–ರಾಮಾಯಣಗಳಲ್ಲಿಯೂ, ಪಲ್ಲವರ ಪೂರ್ವಜನು ಪಲ್ಲವ (ಚಿಗುರು) ಪಾಲಕಿಯಲ್ಲಿ ಅಕಸ್ಮಾತ್ ಅಶ್ವತ್ಥಾಮನಿಗೆ ಹುಟ್ಟಿದ್ದರಿಂದ ಆ ಹೆಸರು ಬಂದಿತೆಂದು ಕಾಸಕುಡಿ ತಾಮ್ರಶಾಸನದಲ್ಲಿಯೂ ಹೇಳಿದೆ.[1]

ವೇದಕಾಲದ ಆರ್ಯರಲ್ಲಿ ಕೆಲವರು ನಾಗಪಕ್ಷವನ್ನವಲಂಬಿಸಿ ನಾಗಮತವನ್ನೇ ಸ್ವೀಕರಿಸಿದ್ದರು. ಇದರಿಂದ ಅವರನ್ನು ಆರ್ಯರು ಕಿರಾತ ಜಾತಿಗಳಲ್ಲಿ ಪರಿಗಣಿಸಿರುವುದಾಗಿ ಐತರೇಯ ಬ್ರಾಹ್ಮಣದಲ್ಲಿ ಹೇಳಿದೆ. ಆರ್ಯರೊಂದಿಗೆ ಹೋರಾಡಿ ದಕ್ಷಿಣದೇಶಕ್ಕೆ ಆಗಮಿಸಿದ ನಾಗರನ್ನೇ ಸ್ಮೃತಿಕಾರರು ಯವನರು, ಪಲ್ಲವರು, ಕಿರಾತರು, ದ್ರಾವಿಡರು ಮುಂತಾಗಿ ಹೆಸರಿಸಿದರು.[2] ಕ್ರಿ. ಶ. ೨ನೇ ಶತಮಾನದಿಂದ ಪಲ್ಲವರಾಜರು ಆಂಧ್ರದೇಶವನ್ನಾಳುತ್ತಿದ್ದರೆಂದು ಅವರ ಶಾಸನಗಳಿಂದ ತಿಳಿದು ಬರುತ್ತದೆ.[3]

ಪಲ್ಲವರು ಬಹಳ ಪ್ರಾಚೀನಕಾಲದಲ್ಲಿಯೇ ಸಿಂಧೂತೀರದಲ್ಲಿದ್ದಂತೆ ಹಿಂದೆ ನಿವೇದಿಸಿದೆ. ಇವರು ಆದಿನಿವಾಸಿಗಳಾದ ಭರತ ಸಂತತಿಯವರು. ಕಲಾ ಪ್ರಚಾರಕ್ಕಾಗಿ ಪರದೇಶಗಳಿಗೆ ತೆರಳಿ ಆ ದೇಶಗಳಲ್ಲಿ ಬಹಳಕಾಲ ವಾಸಿಸಿ ಆಯಾ ದೇಶದ ವೇಷಭೂಷಣಗಳನ್ನು ಒಗ್ಗಿಸಿಕೊಂಡು ಸ್ವದೇಶಾಭಿಮುಖಿಗಳಾಗಿ ಬಂದು ಇಲ್ಲಿ ರಾಜ್ಯಪರಿಪಾಲಕರಾದರೆಂಬ ಇತಿಹಾಸವು ಪ್ರಕೃತ ವಿಮರ್ಶನೀಯ.[4]

ಪಲ್ಲವರಾಜರು ಭರತಶಾಸ್ತ್ರ ಪ್ರವೀಣರಾಗಿದ್ದರು. ಕ್ರಿ.ಶ. ಏಳನೆಯ ಶತಮಾನದವನೆಂದು ತಿಳಿದುಬಂದಿರುವ ಪಲ್ಲವ ಮಹೇಂದ್ರ ವಿಕ್ರಮನು "ಭರತ ಕೋಶ"ವೆಂಬ ಮೌಲಿಕ ಗ್ರಂಥವನ್ನು ರಚಿಸಿದ್ದಾನೆ. ಮಹೇಂದ್ರ ವಿಕ್ರಮ ಅಥವಾ ಮಹೇಂದ್ರ ವಿಕ್ರಮನ್ ಎಂಬುವನು ಕಂಚಿಯ ಪಲ್ಲವರಾಜನಾದ ಸಿಂಹವಿಷ್ಣುವಿನ

---

[1] "ಆಂಧ್ರುಲ ಚರಿತ್ರ–ಸಂಸ್ಕೃತಿ" ಕರ್ತೃ–ಖಂಡವಲ್ಲಿ ಲಕ್ಷ್ಮೀರಂಜನಂ ಮತ್ತು ಬಾಲೇಂದು ಶೇಖರಂ (೧೯೫೧).

[2] ಆಂಧ್ರುಲ ಚರಿತ್ರ, ಭಾಗ I. ಪು. ೭೧.

[3] ಆಂಧ್ರುಲ ಚರಿತ್ರ, ಭಾಗ I. ಪು. ೨೦೭.

[4] ವೀರಶೈವಚರಿತ್ರ ಸಂಗ್ರಹ (ಲಿಂ॥ ಅಕ್ಕುಲಯ್ಯದೀಕ್ಷಿತ) ವೀರಶೈವ ತ್ರೈಮಾಸಿಕ, ೧೯೬೩, ಸೆಪ್ಟೆಂಬರ್.

ಮಗ. ಆತನು "ಮತ್ತವಿಲಾಸ" ಎಂಬ ಒಂದು ಪ್ರಹಸನವನ್ನು ರಚಿಸಿದ್ದನು. ಆದರಲ್ಲಿ ತತ್ಕಾಲೀನ ಸಂಪ್ರದಾಯಗಳ ಪ್ರತಿಸ್ಪರ್ಧೆಯನ್ನು ಮನಮುಟ್ಟುವಂತೆ ವರ್ಣಿಸಿದೆ.[1] ಇದರಿಂದ ಕಂಚಿಯ ಪಲ್ಲವರಾಜನ್ಯರು ಭರತವಂಶೀಯರೆಂದೂ, ಆದ್ದರಿಂದಲೇ ಅವರು ನಾಟ್ಯಶಾಸ್ತ್ರ ಹಾಗೂ ಕಾವ್ಯೇತಿಹಾಸಗಳಲ್ಲಿ ಅಭಿರುಚಿಯುಳ್ಳವರೆಂದೂ ವೇದ್ಯವಾಗುತ್ತದೆ.

## ಪಲ್ಲವರು–ಶ್ರೀಶೈಲ

ಪಲ್ಲವರಾಜನ್ಯರು ಲಿಂಗಧಾರಿಗಳು. ಅವರು ಶ್ರೀಶೈಲ ಶಿವಾಚಾರ್ಯರ ಪರಮಭಕ್ತರಾಗಿದ್ದರು ಎಂಬುದಕ್ಕೆ ಆಧಾರಗಳಿವೆ. ಪಾಲ್ಕುರಿಕೆ ಸೋಮನಾಥನು ರಚಿಸಿರುವ ಮಲ್ಲಿಕಾರ್ಜುನ ಪಂಡಿತಾಧ್ಯಚರಿತ್ರ ಪರ್ವತಪ್ರಕರಣದಲ್ಲಿ ಬರುವ "ಕರ್ಮಹರಿ ಮಹಿಮ" (ಪು. ೪೭೨–೪೮೯) ಎಂಬ ಭಾಗದಲ್ಲಿ—

"ಶ್ರೀಶೈಲದ ಕರ್ಮಹರ ತೀರ್ಥದಲ್ಲಿ ಆಕಸ್ಮಾತ್ ಬಿದ್ದು ಮೃತಿಹೊಂದಿದ ಎರಡು ಕ್ರಿಮಿಗಳು ಆ ಪುಣ್ಯವಿಶೇಷದ ಫಲವಾಗಿ ಪಲ್ಲವ ರಾಜವಂಶದಲ್ಲಿ ಹುಟ್ಟಿ ರಾಜದಂಪತಿಗಳಾಗಿ ಶ್ರೀಶೈಲದ ಗುರುಮಠ ಮತ್ತು ದೇವಾಲಯಗಳ ಜೀರ್ಣೋದ್ಧಾರಮಾಡಿದ ವರ್ಣನವು ಹೃದಯಂಗಮವಾಗಿದೆ:

> "ಬುನಿ ಬಲ್ಲಹುನಿ ವಂಶಮುನ ಬುಟ್ಟುಯುನು
> ಜಾತಿಸ್ಮರತ್ವಾನುಸಂಧಿಗಾಜೇಸಿ
> ಯೀತೆರಂ ಗಂತಯು ನಿದ್ದರು ನೆರುಗಿ
> ವೇಗಂಬ ಸಕಲ ನಿಯೋಗಂಬು ಗೊಲುವ
> ಶ್ರೀಗಿರಿಕೇತೆಂಚಿ ಚೆಲುವಯುನುದಾನು
> ಬಲ್ಲಹುಡತ್ಯಂತ ಭಕ್ತಿ ಸಂಯುಕ್ತಿ
> ಮಲ್ಲಿಕಾರ್ಜುನು ಮಹಾಮಹುನಿ ದರ್ಶಿಂಚಿ
> ಭಾಸುರ ದಿವ್ಯಪ್ರಭಾ ಭಾಸುರಮುಗ
> ಪ್ರಾಸಾದಮುನು ಮಂಟಪಂಬುನು ಬಾನಸಮು
> ಮಠಮು ತದಂತಿಕ ಮಠಮುಗಾನೊಕ್ಕ
> ಮಠಮು ಗಲ್ಪಿಂಚಿ ಯಾ ಮಠಮು ನಿಂಡಂಗ
> ಮರಕತ ಮೌಕ್ತಿ. . .

ಈ ವರ್ಣನದಿಂದ ಶ್ರೀ ಶೈಲಮಲ್ಲಿಕಾರ್ಜುನ ಮತ್ತು ಶ್ರೀಶೈಲ ಮಠಗಳ ಬಗ್ಗೆ ಪಲ್ಲವ ಸಾರ್ವಭೌಮರಿಗಿದ್ದ ಧಾರ್ಮಿಕ ಸಂಬಂಧವು ವೇದ್ಯವಾಗುತ್ತದೆ.

---

[1] 'ನಾಟ್ಯಪರಂಪರಾ ಔರ್ ಅಭಿನಯದರ್ಪಣ' (ಪು. ೩೩), ವಾಚಸ್ಪತಿ ಗೌರೋಲಾ, ಅಲಹಾಬಾದ್.

ಪಲ್ಲವರಾಜನ್ಯರಿಗೆ ಶ್ರೀಶೈಲ ಪೀಠಾಚಾರ್ಯರು ಗುರುವರ್ಯರಾಗಿದ್ದುದರ ಫಲವಾಗಿಯೇ ಪಲ್ಲವರು ಲಿಂಗಧಾರಿಗಳಾಗಿದ್ದರು. ಪಲ್ಲವರ ಶಾಸನಗಳಲ್ಲಿ ಅವರು ಲಿಂಗಾಂಗಿಗಳೆಂಬ ಬಗೆಗೆ ಉಲ್ಲೇಖಗಳಿವೆ.

ಕ್ರಿ.ಶ. ೧೮೮೭ರಲ್ಲಿ ಪಲ್ಲವರ ಅನೇಕ ಶಾಸನಗಳು ಬೆಳಕಿಗೆ ಬಂದವು. ಅವುಗಳನ್ನು ಮದರಾಸು ಶಾಸನ ಇಲಾಖೆಯ ಅಧಿಕಾರಿಗಳಾಗಿದ್ದ ಡಾ|| ಹುಲ್‌ಷ್, (E. Hultzsch) ಅವರು 'ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್' ಸಂಪುಟIರಲ್ಲಿ ಪ್ರಕಟಿಸಿದ್ದಾರೆ. ಮದರಾಸಿಗೆ ಸುಮಾರು ೩೨ ಮೈಲಿ ದೂರದಲ್ಲಿರುವ ಮಾಮಲ್ಲಪುರ ಸಾಲುನ ಕುಪ್ಪಂ ಎಂಬಲ್ಲಿ ಪಲ್ಲವ "ಅತ್ಯಂತ ಕಾಮ"ನ ಶಾಸನಗಳೂ, ತಿರುಚನಾಪಲ್ಲಿಯಲ್ಲಿ "ಗುಣಭರ"ನ ಶಾಸನವೂ, ಕಂಚಿ ವಾಯಲೂರು ಗ್ರಾಮಗಳಲ್ಲಿ "ರಾಜಸಿಂಹನ" ಶಾಸನಗಳೂ ದೊರೆತಿವೆ. ವಾಯಲೂರು ಶಾಸನದಲ್ಲಿ ಪಲ್ಲವ ರಾಜಸಿಂಹನನ್ನು "ಮಹೇಶ್ವರ ಶಿಖಾಮಣಿ ದೀಪ್ತಮೌಲಿಃ" ಎಂದು ವರ್ಣಿಸಿರುವುದಲ್ಲದೆ, ಅವನಿಗೆ "ಶಿವಚೂಡಾಮಣಿ" ಎಂಬ ಬಿರುದು ಸಹ ಇದೆ. ಈತನು ಶಿರಸ್ಸಿನಲ್ಲಿ ಲಿಂಗಧಾರಣ ಮಾಡಿದ್ದುದರಿಂದ ಈ ಹೆಸರು ಬಂದಿರಬೇಕು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಶಾಸನಗಳ ಕಾಲ ಕ್ರಿ.ಶ.೩೫೦–೩೭೭ ಎಂದು ತಿಳಿದುಬಂದಿದೆ.[1]

## ಶ್ರೀಶೈಲ–ನಂದಿಕೇಶ್ವರ

ಶ್ರೀಶೈಲಪರ್ವತದ ಪೂರ್ವೇತಿಹಾಸವನ್ನು ಪರಿಶೀಲಿಸುವಾಗ ಶ್ರೀಶೈಲ ಪರ್ವತಕ್ಕೂ ನಂದಿಕೇಶ್ವರನಿಗೂ ಇರುವ ನಿಕಟ ಸಂಬಂಧವು ವೇದ್ಯವಾಗುತ್ತದೆ.

ಭಾರತದ ಉತ್ತರಗಡಿಯೆನಿಸಿರುವ ಹಿಮಾಲಯ (ರಜತಗಿರಿ–ಗೌರೀಶಂಕರ) ಪರ್ವತವು ಭಾರತ ಧಾರ್ಮಿಕ ಪರಂಪರೆಯಲ್ಲಿ ಕೈಲಾಸವೆಂದು ಪ್ರಸಿದ್ಧವಾಗಿರುವಂತೆ ದಕ್ಷಿಣ ಭಾರತಕ್ಕೆ ಶ್ರೀಶೈಲವೇ ಭೂಕೈಲಾಸವೆನಿಸಿದೆ. ಶ್ರೀಶೈಲದ ಬಗೆಗೆ ಉಕ್ತವಾಗಿರುವ ಐತಿಹ್ಯದ ಪ್ರಕಾರ "ಶಿಲಾದ" ಎಂಬ ಮಹರ್ಷಿಯ ತಪಸ್ಸಿನ ಫಲವಾಗಿ ಪರಶಿವನ ಕೃಪೆಯಿಂದ ಆತನಿಗೆ ಪರ್ವತ ಮತ್ತು ನಂದಿ ಎಂಬ ಇಬ್ಬರು ಮಕ್ಕಳು ಜನಿಸಿದರು. ಇವರಲ್ಲಿ ಪರ್ವತನ ತಪಸ್ಸಿಗೆ ಒಲಿದ ಶಿವ ಈ ಪರ್ವತದಲ್ಲಿಯೇ ನೆಲೆಸುವಂತಾಯಿತು. ನಂದಿಯು ಪರಮೇಶ್ವರನ ಆಜ್ಞೆಯ ಪ್ರಕಾರ ಶ್ರೀಶೈಲ ಪರ್ವತಕ್ಕೆ ಕಾವಲುಗಾರನಾದ.[1] ಇದರ ಫಲವಾಗಿಯೇ ಇರಬೇಕು, ಪ್ರಾಯಃ ಶ್ರೀಶೈಲ ಮತ್ತು ಸುತ್ತುಮುತ್ತು ಪ್ರದೇಶಗಳಲ್ಲಿ ಇಂದಿಗೂ ಪ್ರಖ್ಯಾತವಾಗಿರುವ

---

[1] South Indian Inscriptions Vol. i. No. ೨೩, ೨೪ (೧೮೯೦), Epigraphia Indica, Vol. xviii.

[1] ಶ್ರೀ ಶೈಲ ಇತಿಹಾಸ (ಪು. ೬. ೧೮–೧೯೩)— ಪಿ.ಎಂ. ನಂಜುಂಡಯ್ಯ.

ಪ್ರಥಮನಂದಿ, ಮಹಾನಂದಿ (ನಂದ್ಯಾಲ ತಾಲೂಕು), ನಾಗಲೂಟನಂದಿ, ಪಂಚನಂದಿ (ಶಿವಾಜಿಗೋಪುರದ ಹತ್ತಿರ), ನಂದಿಕೇಶ್ವರ ಮಠ (ಶ್ರೀಶೈಲಮಠಗಳಲ್ಲೊಂದು) ಮುಂತಾದ ಸ್ಮಾರಕಗಳು ಆ ಭಾಗದಲ್ಲಿ ಸುಪ್ರಸಿದ್ಧವಾಗಿವೆ.

ಸುಮಾರು ಮೂರುಸಾವಿರ ವರ್ಷಗಳಷ್ಟು ಪುರಾತನವಾದ ಧಾರ್ಮಿಕ ಇತಿಹಾಸವುಳ್ಳ ಶ್ರೀಶೈಲವು ಮಹಾಭಾರತದಲ್ಲಿ ಉಲ್ಲೇಖಿಸಲ್ಪಟ್ಟಿರುವುದಲ್ಲದೆ ಪುರಾಣ ಹಾಗೂ ಶೈವಾಗಮಗಳಲ್ಲಿಯೂ ಅಂಕಿತವಾಗಿದೆ. ಕ್ರಿ.ಶ. ೧ನೆಯ ಶತಮಾನದಲ್ಲಿಯೇ ಶ್ರೀಶೈಲದಲ್ಲಿ ಶೈವಮಠವೊಂದಿದ್ದುದಾಗಿ ವಿದ್ವಾಂಸರು ತರ್ಕಿಸಿದ್ದಾರೆ. ಸುಪ್ರಸಿದ್ಧ ಆಚಾರ್ಯನಾದ ಸಿದ್ಧನಾಗಾರ್ಜುನನು "ದ್ಯಾಪಲ್-ಗ್ಯಿಲಿ" (ಶ್ರೀಪರ್ವತ)ಯ ಮೇಲಿದ್ದ ಬೌದ್ಧಾರಾಮದಲ್ಲಿ ನಿರ್ವಾಣಹೊಂದಿದನೆಂದು ಟಿಬೆಟ್‌ನಲ್ಲಿಯ ಬೌದ್ಧ ಗ್ರಂಥಗಳಲ್ಲಿ ಬರೆದಿದೆ. ಅದೇ ಸಮಯಕ್ಕೆ ಅಲ್ಲಿ ಬೌದ್ಧಾರಾಮದ ಜೊತೆಗೆ ಒಂದು "ಶೈವಮಠ"ವೂ ಇದ್ದಂತೆ ತಿಳಿದುಬಂದಿದೆ.[1] ಚೀನಾದೇಶದ ಯಾತ್ರಿಕರಲ್ಲೊಬ್ಬನಾದ ಫಾಹಿಯಾನ್ (ಕ್ರಿ.ಶ. ೪೦೫) ಶ್ರೀಶೈಲದ ಮೇಲೆ "ಪಾರಾವತ" ಎಂಬ ಹೆಸರಿನ ಮಠವಿದ್ದುದಾಗಿ ಉಲ್ಲೇಖಿಸಿದ್ದಾನೆ.[2]

ಈ ಮೇಲಿನ ಉಲ್ಲೇಖಗಳಿಂದ ಶ್ರೀಶೈಲದಲ್ಲಿ ಚಾರಿತ್ರಕವಾಗಿಯೇ ಶೈವಮಠವೊಂದರ ಅಸ್ತಿತ್ವವು ಸಿದ್ಧವಾಗುತ್ತದೆ. ಸ್ಕಾಂದಪುರಾಣಾಂತರ್ಗತ ಶಂಕರ ಸಂಹಿತೆಯಲ್ಲಿ ಉಕ್ತರಾಗಿರುವ ಸದಾನಂದ ಶಿವಾಚಾರ್ಯರು "ಲಿಂಗಾಂಗ ಸಂಬಂಧಿ"ಯೂ "ಜಗದ್ಗುರು"ವೂ ಆಗಿದ್ದ ಅಂಶವು ವ್ಯಕ್ತಪಡುತ್ತದೆ. ಮೇಲಾಗಿ ಶಿವಾಗಮೋಕ್ತರಾದ ಧೇನುಕರ್ಣ, ಗೋಕರ್ಣ ಎಂಬ ಆಚಾರ್ಯರು ಈ ಪೀಠದ ದ್ವಾಪರಾಚಾರ್ಯರೆಂದು ಹೇಳಲಾಗಿದೆ. ಶ್ರೀಶೈಲ ಶಾಖೆಯ ಗೋತ್ರಪುರುಷ ವೃಷಭ. ನಂದಿ, ವೃಷಭರು ಯುಗಭೇದದಿಂದ ಅವತರಿಸಿದವರೆಂದು ಪೌರಾಣಿಕ ಪರಿಭಾಷೆ. ಈ ಕಾರಣದಿಂದ ಶ್ರೀಶೈಲದಲ್ಲಿ ಧೇನುಕರ್ಣ, ನಂದಿಕೇಶ್ವರ ಮುಂತಾದ ಪರ್ಯಾಯ ನಾಮಗಳಿಂದ ಕೂಡಿದ ಅನೇಕ ಆಚಾರ್ಯರು ರಾಜಪೂಜಿತರಾಗಿರುವುದು ಸಹಜ. ಆ ಕಾರಣವಾಗಿಯೇ ಕ್ರಿ.ಶ. ೧ನೆಯ ಶತಮಾನದಿಂದ ಭಾರಶಿವ, ವಾಕಾಟಕ ಮತ್ತು ಪಲ್ಲವ ಮುಂತಾದ ರಾಜವಂಶೀಯರು ಅವರ ಅನುಗ್ರಹಕ್ಕೆ ಪಾತ್ರರಾಗಿದ್ದುದು ಸೂಕ್ತ.

**'ಅಭಿನಯದರ್ಪಣ'-ಲಿಂಗವಂತ ಸಂಸ್ಕೃತಿ**

ನಂದಿಕೇಶ್ವರನ ಕಾಲಕ್ಕೆ ವೀರಶೈವಧರ್ಮವು ತುಂಬಾ ಪ್ರಚಾರದಲ್ಲಿದ್ದಂತೆ

---

1 ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರ, ಪೀಠಿಕೆ (ಪು. ೩೪೪)-ಡಾ॥ ಚಿಲಕೂರಿ ನಾರಾಯಣರಾವ್.

2 ಆಂಧ್ರುಲ ಚರಿತ್ರ. ಭಾ I. ಪು. ೧೫೦.

'ಅಭಿನಯದರ್ಪಣ'ದಿಂದ ವೇದ್ಯವಾಗುತ್ತದೆ. ಪಲ್ಲವರಾಜರಿಗೆ ಕೊಟ್ಟಿರುವ ಬಿರುದಾವಳಿಗಳಲ್ಲಿ "ಶಿವಚೂಡಾಮಣಿ" ಎಂದೂ, ವರ್ಣನೆಗಳಲ್ಲಿ "ಮಹೇಶ್ವರ ಶಿಖಾಮಣಿದೀಪ್ತಮೌಲಿಃ" ಎಂದೂ, ಭಾರಶಿವರಿಗೆ "ಅಂಸಭಾರ ಸನ್ನಿವೇಶಿತ ಶಿವಲಿಂಗೋದ್ವಹನ" ಎಂದೂ ಕೊಟ್ಟಿರುವ ವಿಶೇಷಣಗಳಿಂದ ಅವರು ಶಿರಸ್ಸಿನಲ್ಲಿ, ಭುಜಗಳ ಮೇಲೆ, ಲಿಂಗಧಾರಣಮಾಡಿಕೊಳ್ಳುತ್ತಿದ್ದರಾದರೂ ಅವರೆಲ್ಲರೂ ಶಿವಲಿಂಗವನ್ನು ಎಡಹಸ್ತದಲ್ಲಿಟ್ಟು ಪೂಜಿಸುತ್ತಿದ್ದವರು. ವೀರಶೈವ ಧರ್ಮದ ಮುಖ್ಯ ಲಕ್ಷಣ

> ಯೋ ಹಸ್ತ ಪೀಠೇ ನಿಜಲಿಂಗಮಿಷ್ಟಂ
> ವಿನ್ಯಸ್ಯ ತಲ್ಲೀನ ಮನಃಪ್ರಸಾರಃ।
> ಬಾಹ್ಯಕ್ರಿಯಾ ಸಂಕುಲ ನಿಸ್ಪೃಹಾತ್ಮಾ
> ಸಂಪೂಜಯತ್ಯಂಗ ಸ ವೀರಶೈವಃ॥
>
> (ಸ್ಕಾಂದ–ಶಂಕರಸಂಹಿತಾ)

ಎಂಬುದರಿಂದ ವೇದ್ಯವಾಗುತ್ತದೆ. ಅಂದರೆ ವಾಮಕರತಲದಲ್ಲಿ ಇಷ್ಟಲಿಂಗವನ್ನಿಟ್ಟು ಪೂಜಿಸಿ ಬಾಹ್ಯಕ್ರಿಯೆಗಳನ್ನು ಮರೆತು ತನ್ಮಯನಾಗುವವನೇ ವೀರಶೈವ. ಈ ಆಚಾರದಲ್ಲಿ ಬಲ್ಲಿದರಾದ ಜನಾಂಗದ ಸಂಪರ್ಕ ಹೇರಳವಾಗಿದ್ದುದರ ಫಲವಾಗಿಯೇ ಈ ಸಂಸ್ಕೃತಿಯ ಅನುಕರಣವು ಅಭಿನಯದರ್ಪಣದಲ್ಲಿ ನಿರ್ದೇಶಿಸಲ್ಪಟ್ಟಿದೆ. ಮಾತ್ರವಲ್ಲದೆ ಈ ಸಂಸ್ಕೃತಿಯನ್ನು ಚೆನ್ನಾಗಿ ಬಲ್ಲ ಜನಾಂಗದಲ್ಲಿಯೇ ಇದರ ಪ್ರಚಾರವೂ ಅಧಿಕವಾಗಿದ್ದಿರಬೇಕು. ಆದ್ದರಿಂದಲೇ ನಂದಿಕೇಶ್ವರನು ಅಭಿನಯದರ್ಪಣದಲ್ಲಿ "ಶಿವಲಿಂಗಹಸ್ತ" ಎಂಬ ಹಸ್ತಾಭಿನಯವನ್ನು ಬಹು ಮನೋಜ್ಞವಾಗಿ ಪ್ರದರ್ಶಿಸಿದ್ದಾನೆ—

ಹಸ್ತಾಭಿನಯವು ಅಸಂಯುತ (ಏಕ) ಹಸ್ತ ಮತ್ತು ಸಂಯುತ (ಹಸ್ತದ್ವಯ) ಹಸ್ತವೆಂದು ಎರಡು ವಿಧ. ಅವುಗಳಲ್ಲಿ ಅಸಂಯುತ ಹಸ್ತಾಭಿನಯವು ೨೮ ವಿಧ. ಅವುಗಳಲ್ಲಿ ಪತಾಕ, ತ್ರಿಪತಾಕ, ಶಿಖರ ಮತ್ತು ಅರ್ಧಚಂದ್ರಹಸ್ತ ಮುಂತಾದವು ಮುಖ್ಯ.

**ಅರ್ಧಚಂದ್ರ ಹಸ್ತ—**

> ಅರ್ಧಚಂದ್ರಕರಃ ಸೋಽಯಂ ಪತಾಕೇಂಗುಷ್ಠಸಾರಣಾತ್ ॥೧೦॥

ಹಸ್ತವನ್ನು ಪತಾಕಾಕಾರವಾಗಿ ಹರಡಿ ಹೆಬ್ಬೆರಲನ್ನು ಹೊರಗೆ ಬಿಡುವುದು.

**ಶಿಖರಹಸ್ತ—**

> "ಚೆ ಸ್ಮುಷ್ಟಿರುನ್ನತಾಂಗುಷ್ಠಃ ಸ ಏವ ಶಿಖರ ಸ್ಮೃತಃ ॥೧೮॥

ಮುಷ್ಟಿಯನ್ನುಮಾಡಿ ಹೆಬ್ಬೆರಲನ್ನು ಮೇಲಕ್ಕೆ ಬಿಡುವುದು.

ಸಂಯುಕ್ತ ಹಸ್ತಾಭಿನಯವು ೨೩ ವಿಧ. ಇವುಗಳಲ್ಲಿ "ಶಿವಲಿಂಗಹಸ್ತ"ವೂ ಒಂದು. ಅದರ ಲಕ್ಷಣವು ಹೀಗಿದೆ—

"ವಾಮೇಽರ್ಧ ಹಸ್ತೇ ವಿನ್ಯಸ್ತ ಶಿಖರಶ್ಶಿವಲಿಂಗಕಃ" ॥ ೧೭೬ ॥

ಎಂದರೆ ಎಡ ಅರ್ಧಚಂದ್ರಹಸ್ತದಲ್ಲಿ ಬಲಶಿಖರಹಸ್ತವನ್ನು ಸ್ಥಾಪಿಸಿದರೆ ಶಿವಲಿಂಗ ಹಸ್ತವಾಗುತ್ತದೆ. ಇದು ಹಿಂದೆ ಹೇಳಿದ "ವಾಮ ಹಸ್ತದಲ್ಲಿ ಇಷ್ಟ ಲಿಂಗವನ್ನು ಇಟ್ಟು ಪೂಜಿಸುವ ವೀರಶೈವ" (ಸ್ಕಾಂದ–ಶಂಕರಸಂಹಿತೆ) ಸಂಸ್ಕೃತಿಯನ್ನೇ ಸೂಚಿಸುತ್ತದೆ. ನಟನ ಈ ಅಭಿನಯವು ಜನತೆಗೆ ವೇದ್ಯವಾಗಬೇಕಾದರೆ ತತ್ಸಂಬಂಧವಾದ ಕರಪೀಠಾರ್ಚನ ಸಂಸ್ಕಾರವು ಅವರಿಗೆ ಮೊದಲು ಅನುಭವದಲ್ಲಿರ ಬೇಕು. ಇದರಿಂದ ಆಚಾರ್ಯ ನಂದಿಕೇಶ್ವರನು ವೀರಶೈವ ಸಂಸ್ಕೃತಿಯು ವಿಪುಲ ಪ್ರಚಾರದಲ್ಲಿದ್ದ ಶ್ರೀಶೈಲ ಪ್ರಾಂತದವನೇ ಆಗಿರಬೇಕೆಂದು ಊಹಿಸುವುದು ಸೂಕ್ತ.

### ಭರತ-ನಂದಿಕೇಶ್ವರ

ನಾಟ್ಯಶಾಸ್ತ್ರಕ್ಕೆ ಭರತನೇ ಮೊದಲಿಗನಲ್ಲ. ಭರತನಿಗಿಂತಲೂ ಹಿಂದೆ ಇದ್ದ ಶಿಲಾಲಿ, ಕೃಶಾಶ್ವ, ಧೂರ್ತಿಲ, ಶಾಂಡಿಲ್ಯ, ವಾತ್ಸ್ಯ, ಕೋಹಲ ಮುಂತಾದ ನಟ ಶಾಸ್ತ್ರಕಾರರನ್ನು ನಾಟ್ಯಶಾಸ್ತ್ರದಲ್ಲಿ ಉಲ್ಲೇಖಿಸಲಾಗಿದೆ. ಇದಲ್ಲದೆ ಸದಾಶಿವ ಮತ್ತು ಪದ್ಮಭೂ ಎಂಬುವರನ್ನು ನಾಟ್ಯಶಾಸ್ತ್ರದ ವ್ಯಾಖ್ಯಾಕಾರನಾದ ಅಭಿನವ ಗುಪ್ತ(ಕ್ರಿ.ಶ. ೧೦ನೇ ಶತಮಾನ)ನೂ ದ್ರೌಹಿಣೀ, ವ್ಯಾಸರ ಹೆಸರುಗಳನ್ನು ದಶರೂಪಕ ಕರ್ತೃ ಧನಂಜಯ(ಕ್ರಿ.ಶ. ೧೦)ನೂ, ಆಂಜನೇಯನ ಹೆಸರನ್ನು ಶಾರದಾತನಯ(ಕ್ರಿ.ಶ. ೧೨ನೇ ಶತಮಾನ)ನೂ ಉಲ್ಲೇಖಿಸಿದ್ದಾರೆ.

ಮೇಲೆ ನಿರ್ದೇಶಿಸಿದವರಲ್ಲಿ ಶಿಲಾಲಿ, ಕೃಶಾಶ್ವರ ಹೆಸರುಗಳನ್ನು ಪಾಣಿನಿ (ಕ್ರಿ. ಪೂ. ೫೦೦) ಯು ತನ್ನ 'ಅಷ್ಟಾಧ್ಯಾಯಿ'ಯಲ್ಲಿಯೂ, ವ್ಯಾಕರಣ ಮಹಾಭಾಷ್ಯ (ಕ್ರಿ.ಪೂ. ೨೦೦)ದಲ್ಲಿ ಪತಂಜಲಿಯೂ ಹೆಸರಿಸಿದ್ದಾರೆ.[1] ಪಾಣಿನಿಯ ಈ ಸೂತ್ರಗಳಿಗೆ ಪಾರಾಶರ್ಯ (ಬಾದರಾಯಣ)ನು ಭಿಕ್ಷುಸೂತ್ರ (ವೇದಾಂತ) ಗಳನ್ನೂ, ಶಿಲಾಲಿಯು ನಟಸೂತ್ರಗಳನ್ನೂ ರಚಿಸಿದ್ದರು. ಶಿಲಾಲಿಯ ನಟ ಸೂತ್ರಗಳನ್ನು ಅಧ್ಯಯನ ಮಾಡುವವರು "ಶೈಲೂಷ"ರೆಂದೂ ಕೃಶಾಶ್ವಕೃತ ನಟ ಸೂತ್ರಗಳನ್ನು ಅಧ್ಯಯನ ಮಾಡುವವರು "ಕೃಶಾಶ್ವ"ರೆಂದೂ ಹೆಸರಿಸಲಾಗಿದೆ. ಅಲ್ಲದೆ ನಟರ ಧರ್ಮ ಮತ್ತು ಆಮ್ನಾಯ ಸಹ ನಾಟ್ಯವೆಂದಾಗುವುದೆಂದೂ ರೂಪ ನಿಷ್ಪತ್ತಿಯನ್ನು 'ನಟನೃತ್ತೌ', "ನಟ ಅವಸ್ಯಂದನೇ" ಎಂಬ ಧಾತು

1 "ಪಾರಾಶರ್ಯ ಶಿಲಾಲಿಭ್ಯಾಂ ಭಿಕ್ಷು ನಟಸೂತ್ರಯೋಃ" (ಅಷ್ಟಾ. ೪.೩.೧೧೦);
"ಕರ್ಮಂದ ಕೃಶಾಶ್ವಾದಿನಿಃ" (೪-೩-೧೧೧)
"ಛಂದೋಗೌಕ್ಥಿಕ ಯಾಜ್ಞಿಕ ಬಹ್ವೃಚ ನಟಾ ಞ್ ಞ್ಯಃ" (೪-೩-೧೨೯)

ಪಾಠದಲ್ಲಿ ನಿರೂಪಿಸಲಾಗಿದೆ. ಅಮರ ನಿಘಂಟುಕಾರನು ಮಾತ್ರ "ಭರತಾ ಇತ್ಯಪಿ ನಟಾಃ" (ಕಾಂ. ೨-೧೯೩೩) ಎಂದು ಭರತ ಮತ್ತು ನಟ ಶಬ್ದಗಳು ಪರ್ಯಾಯವಾಚಕಗಳೆಂದು ಹೇಳಿದ್ದಾನೆ.

ಪಾಣಿನಿಯ ತರುವಾಯ ವೃದ್ಧಭರತನು (ಕ್ರಿ. ಪೂ. ಸು. ४೦೦) ಶಿಲಾಲಿ ಕೃಶಾಶ್ವರ ನಟಸೂತ್ರಗಳ ಆಧಾರದ ಮೇಲೆ ಸುಮಾರು ೧೨ ಸಾವಿರ ಗ್ರಂಥ ಪರಿಮಾಣವುಳ್ಳ ನಾಟ್ಯಶಾಸ್ತ್ರವನ್ನು ರಚಿಸಿದನೆಂದೂ, ಆ ತರುವಾಯ (ಕ್ರಿ. ಪೂ. ೩೦೦)ರ ಸುಮಾರಿನಲ್ಲಿ ಭರತ ಮುನಿಯು ವೃದ್ಧಭರತನ ನಾಟ್ಯಶಾಸ್ತ್ರವನ್ನೇ ಸುಮಾರು ೬ ಸಾವಿರ ಗ್ರಂಥಗಳಲ್ಲಿ ಸಂಗ್ರಹಿಸಿದನೆಂದೂ ಪ್ರತೀತಿಯಿದೆ.[1]

ಆಚಾರ್ಯ ಶಾರದಾತನಯನ "ಭಾವಪ್ರಕಾಶ"ದಲ್ಲಿ ಪಿತಾಮಹನು ೧೨ ಸಾವಿರ ಶ್ಲೋಕಗಳುಳ್ಳ ನಾಟ್ಯವೇದವನ್ನು ಭರತನಿಗೆ ಕೊಟ್ಟನೆಂದೂ, ಭರತನು ಅದನ್ನು ೬ ಸಾವಿರ ಶ್ಲೋಕಗಳಲ್ಲಿ ಸಂಗ್ರಹಿಸಿದನೆಂದೂ ಹೇಳಿದೆ.

> ಏವಂ ದ್ವಾದಶಸಾಹಸ್ರೈಃ ಶ್ಲೋಕೈರೇಕಂ ತದರ್ಧತಃ ।
> ಷಡ್ಭಿಃ ಶ್ಲೋಕ ಸಹಸ್ರೈರ್ಯೋ ನಾಟ್ಯವೇದಸ್ಯ ಸಂಗ್ರಹಃ ॥
> ಭರತೈರ್ನಾಮತಸ್ತೇಷಾಂ ಪ್ರಖ್ಯಾತೋ ಭರತಾಹ್ವಯಃ ॥ (ಪು. ೨೮೪)

ಎಂದು ಹೇಳಿದೆ. ಆದರೆ ಈಗ ದೊರೆತಿರುವ ನಾಟ್ಯಶಾಸ್ತ್ರದಲ್ಲಿ ೫ ಸಾವಿರ ಶ್ಲೋಕಗಳಿವೆ. ಇದಲ್ಲದೆ "ಭರತ" ಎಂಬ ಹೆಸರಿನ ವ್ಯಕ್ತಿಗಳು ಅನೇಕರಿರುವಂತೆ ತಿಳಿದುಬರುತ್ತದೆ. ಶಾರದಾತನಯನು—

> "ನಾಟ್ಯವೇದಾಚ್ಚ ಭರತಾಃ ಸಾರಮುದ್ಧೃತ್ಯ ಸರ್ವತಃ ।
> ಸಂಗ್ರಹಂ ಸಂಪ್ರಯೋಗಾರ್ಹಂ ಮನುನಾಪ್ರಾರ್ಥಿತಾವ್ಯಧುಃ ॥
> ಏಕಂ ದ್ವಾದಶ ಸಾಹಸ್ರೈಃ ಶ್ಲೋಕೈರೇಕಂ ತದರ್ಧತಃ ।
> ಷಡ್ಭಿಃ ಶ್ಲೋಕ ಸಹಸ್ರೈರ್ಯೋ ನಾಟ್ಯವೇದಸ್ಯಸಂಭವಃ ॥

ಎಂಬ ಉಕ್ತಿಗಳನ್ನು ಪರಿಶೀಲಿಸಿದಲ್ಲಿ "ಭರತಾಃ" ಎಂಬ ಬಹುವಚನ ಪ್ರಯೋಗ ದಿಂದ "ಭರತ" ಎಂಬ ಹೆಸರಿನ ವ್ಯಕ್ತಿಗಳು ಅನೇಕರೆಂದು ತಿಳಿದುಬರುತ್ತದೆ.

ಈ ಕಾರಣಗಳಿಂದ ನಾಟ್ಯಶಾಸ್ತ್ರವು ಕಾಲಕಾಲಕ್ಕೆ ಜನಾಭಿರುಚಿಯನ್ನು ಅನುಸರಿಸಿ ಬದಲಾವಣೆಗಳನ್ನು ಹೊಂದುತ್ತಾ ಈಗ ಉಪಲಬ್ಧವಿರುವ ನಾಟ್ಯ ಶಾಸ್ತ್ರದ ರೂಪವನ್ನು ತಳೆದಿರಬೇಕೆಂದು ಸ್ಪಷ್ಟವಾಗುತ್ತದೆ. ಏನೇ ಆದರೂ ಪಾಣಿನಿಯು ಭರತನ ಹೆಸರನ್ನು ಎತ್ತದಿರುವುದರಿಂದ ಭರತ ಎಂಬುವನು ಪಾಣಿನಿ ಗಿಂತಲೂ ಈಚಿನವನೆಂಬುದು ನಿರ್ವಿವಾದ. ಭರತನ ಕಾಲವನ್ನು ಕ್ರಿ. ಪೂ. ೩ನೇ ಶತಮಾನದಿಂದ ಕ್ರಿ.ಶ. ೨ನೇ ಶತಮಾನದವರೆಗೂ ವಿದ್ವಾಂಸರು ನಿರ್ಧರಿಸುತ್ತಿದ್ದಾರೆ.[2]

---

[1] ಸಂಸ್ಕೃತ ವಾಙ್ಮಯ ಚರಿತ್ರ, ಭಾ. II (ಪು. ೧೧)
[2] ಸಂಸ್ಕೃತ ನಾಟಕ—ಎ. ಆರ್. ಕೃಷ್ಣಶಾಸ್ತ್ರೀ, (ಪು. ४)

ಕ್ರಿ. ಶ. ೩ ಅಥವಾ ೪ನೇ ಶತಮಾನದವನಾದ ನಂದಿಕೇಶ್ವರನು ಭರತನನ್ನು ಅನೇಕ ಕಡೆ ಉಲ್ಲೇಖಿಸಿದ್ದಾನೆ. 'ಅಭಿನಯದರ್ಪಣ'ದ ಪ್ರಾರಂಭದಲ್ಲಿಯೇ "ನಾಟ್ಯವೇದಂ ದದೌ ಪೂರ್ವಂ ಭರತಾಯ ಚತುರ್ಮುಖಃ" ಎಂದಿದ್ದಾನೆ. "ಭರತಕುಲ ಭಾಗ್ಯಕಲಿಕೇ" (ಶ್ಲೋ. ೩೨) ಎಂದು ರಂಗಭೂಮಿಯ ಅಧಿಷ್ಠಾತ್ರೀ ದೇವಿಯನ್ನು ಸ್ತುತಿಸಲಾಗಿದೆ. ಅನೇಕ ಸಲ ನಾಟ್ಯಶಾಸ್ತ್ರವನ್ನು "ಭರತಾಗಮ"ವೆಂದೂ, ಇತರ ಆಚಾರ್ಯರನ್ನು "ಭರತಾಗಮಕೋವಿದ, ಭರತಾಗಮದರ್ಶೀ, ಭರತಾಗಮವೇದಿ"ಗಳೆಂದೂ ಹೇಳಿರುವುದಲ್ಲದೆ ಆಚಾರ್ಯ ಭರತನನ್ನು ಬುಧೋತ್ತಮ, ನಾಟ್ಯಾಚಾರ್ಯ, ನಾಟ್ಯಶಾಸ್ತ್ರವಿಶಾರದ ಮುಂತಾದ ಅನೇಕ ವಿಶೇಷಣಗಳಿಂದ ಉಲ್ಲೇಖಿಸಿರುವುದನ್ನು ನೋಡಿದರೆ ಅಭಿನಯದರ್ಪಣಕಾರಣನಾದ ನಂದಿಕೇಶ್ವರನು ಭರತನ ತರುವಾಯದವನೆಂದು ವ್ಯಕ್ತವಾಗುತ್ತದೆ. ಮೇಲಾಗಿ ಕ್ರಿ.ಶ. ೫ನೇ ಶತಮಾನದ ಕಾಳಿದಾಸನು 'ವಿಕ್ರಮೋರ್ವಶೀಯ'ದಲ್ಲಿ (೨-೧೭)ಯೂ, ಕ್ರಿ.ಶ. ೭ನೇ ಶತಮಾನದ ಭವಭೂತಿಯು 'ಉತ್ತರ ರಾಮಚರಿತೆ'ಯಲ್ಲಿಯೂ ಭರತನನ್ನು ಹೆಸರಿಸಿರುವುದರಿಂದ ಭರತಮುನಿ ಮತ್ತು ಆತನ ನಾಟ್ಯಶಾಸ್ತ್ರವು ಅವರಿಗಿಂತ ಎಷ್ಟೋ ಪೂರ್ವದ್ದೆಂಬುದು ಸ್ವಸಂವೇದ್ಯ.

ನಂದಿಕೇಶ್ವರನೂ ಸಹ ಭರತರ ಪರಂಪರೆಯಲ್ಲಿಯೇ ಬಂದವನಾದ್ದರಿಂದ ಅವನಿಗೂ "ಭರತ" ಎಂಬ ಪರ್ಯಾಯನಾಮವು ಏರ್ಪಟ್ಟಿರುವುದು ಅಸಂಭವೇನಲ್ಲ.

## ನಾದವೇದಿ ನಂದಿಕೇಶ್ವರ-ನಾಟ್ಯಾಚಾರ್ಯ ನಂದಿಕೇಶ್ವರ

"ಪರಮೇಶ್ವರನು ನೃತ್ಯದ ಕಡೆಯಲ್ಲಿ ಸನಕಾದಿಸಿದ್ಧರ ಪ್ರಾರ್ಥನೆಯಂತೆ ಡಮರುಗವನ್ನು ಬಾರಿಸಿ "ಅ ಇ ಉ (ಣ್) ಋಲೃ (ಕ್)" ಮುಂತಾದ ೧೪ ಮಾಹೇಶ್ವರ ಸೂತ್ರಗಳನ್ನು ನುಡಿಸಿ ವೇದಾಂತ ಮತ್ತು ಶಬ್ದಶಾಸ್ತ್ರ (ವ್ಯಾಕರಣ) ಭೂಮಿಕೆಯನ್ನು ರಚಿಸಿದನು."[1] ಎಂಬ ಮಾತು ಬಹು ಪುರಾತನವಾದುದು. ಏಕೆಂದರೆ ಮಹರ್ಷಿ ಪಾಣಿನಿಯು (ಕ್ರಿ.ಪೂ. ೫೦೦) ಇದೇ ಪ್ರತ್ಯಾಹಾರ ಸೂತ್ರಗಳ ಆಧಾರದ ಮೇಲೆಯೇ ತನ್ನ ಅಷ್ಟಾಧ್ಯಾಯೀ ಸೂತ್ರಗಳನ್ನು ರಚಿಸಿ ವ್ಯಾಕರಣ ಶಾಸ್ತ್ರಕ್ಕೆ ಪ್ರವರ್ತಕನಾದನು. ಆದಕ್ಕೆ ಕಾತ್ಯಾಯನನು (ವರರುಚಿ) ರಚಿಸಿದ ವಾರ್ತಿಕ, ಪತಂಜಲಿಯು (ಕ್ರಿ.ಪೂ. ೨೦೦) ಬರೆದ ಮಹಾಭಾಷ್ಯಗಳು ಸುಪ್ರಸಿದ್ಧ. ಇದೇ ಮಾಹೇಶ್ವರ ಸೂತ್ರಗಳಿಗೆ ಸನಕಾದಿ ಸಿದ್ಧರ ಪ್ರಾರ್ಥನೆಯಂತೆ ಶಿವಭಕ್ತಾ

---

1 ನೃತ್ತಾವಸಾನೇ ನಟರಾಜರಾಜೋ
ನನಾದ ಢಕ್ಕಾಂ ನವಪಂಚವಾರಂ
ಉದ್ಧರ್ತುಕಾಮಸ್ಸನಕಾದಿಸಿದ್ಧಾನ್
ಏತದ್ವಿಮರ್ಶೇ ಶಿವಸೂತ್ರಜಾಲಂ

ಗ್ರೇಸರನಾದ ಆಚಾರ್ಯ ನಂದಿಕೇಶ್ವರನು ಶಕ್ತಿವಿಶಿಷ್ಟಾದ್ವೈತ ಪರವಾಗಿ ಕಾರಿಕೆಗಳನ್ನು ಬರೆದಿರುವುದನ್ನು ಮತ್ತು ಈ ನಂದಿಕೇಶ್ವರಕಾರಿಕೆಗಳಿಗೆ ಉಪಮನ್ಯು ಶಿವಾಚಾರ್ಯನು "ತತ್ತ್ವವಿಮರ್ಶಿನೀ" ಎಂಬ ವ್ಯಾಖ್ಯಾನವನ್ನು ಬರೆದು ನಂದಿಕೇಶ್ವರನ ಆಶಯವನ್ನು ಅಭಿವ್ಯಕ್ತಗೊಳಿಸಿರುವುದನ್ನು "ನಾದವೇದಿ ನಂದಿಕೇಶ್ವರ" ಎಂಬ ಪ್ರಬಂಧದಲ್ಲಿ ಸ್ಪಷ್ಟಪಡಿಸಲಾಗಿದೆ.[1]

ಕಾರಿಕಾಕರ್ತೃ ನಂದಿಕೇಶ್ವರ ಮತ್ತು ನಾಟ್ಯಾಚಾರ್ಯ ನಂದಿಕೇಶ್ವರರ ಕಾಲ ದೇಶಾದಿಗಳನ್ನು ಪರಿಶೀಲಿಸುವುದು ಇಲ್ಲಿ ಅಪ್ರಕೃತವಾಗಲಾರದು. ನಾವು ಹಿಂದೆಯೇ ನಿವೇದಿಸಿರುವಂತೆ ನಾದವೇದಿ ನಂದಿಕೇಶ್ವರನು ಔತ್ತರೇಯನು, ನಾಟ್ಯಾಚಾರ್ಯ ನಂದಿಕೇಶ್ವರನು ದಕ್ಷಿಣದವನು. ಏಕೆಂದರೆ ಕಾರಿಕಾಕರ್ತೃ ನಂದಿಕೇಶ್ವರ ಮತ್ತು ಉಪಮನ್ಯು ಆಚಾರ್ಯರು ಪ್ರಾಯಃ ಪಾಣಿನಿಗಿಂತ ಹಿಂದಿನವರು ಇಲ್ಲವೆ ಸಮಕಾಲೀನರು. ಕ್ರಿ.ಶ. ೧೦ನೆಯ ಶತಮಾನದವನೆಂದು ಹೇಳಲಾಗಿರುವ ರಾಜಶೇಖರನು ತನ್ನ 'ಕಾವ್ಯಮೀಮಾಂಸೆ'ಯಲ್ಲಿ ನಂದಿಕೇಶ್ವರ ಮತ್ತು ಉಪಮನ್ಯು ಇವರನ್ನು ಸಮಕಾಲೀನರೆಂದು ಹೇಳಿದ್ದಾನೆ. ಅಲ್ಲಿ ಪರಮೇಶ್ವರನು ಕಾವ್ಯವಿದ್ಯೆಯನ್ನು ತನ್ನ ೬೪ ಮಂದಿ ಶಿಷ್ಯರಿಗೆ ಉಪದೇಶಿಸಿದಾಗ ನಂದಿಕೇಶ್ವರನಿಗೆ 'ರಸನಿರೂಪಣ'ವನ್ನೂ ಉಪಮನ್ಯುನಿಗೆ 'ಗುಣೌಪಾದಾನಿಕ'ವನ್ನೂ ನೀಡಿದ್ದಾನೆ. ಇಲ್ಲಿ ನಂದಿಕೇಶ್ವರನ ಜೊತೆಗೆ ಉಪಮನ್ಯುವನ್ನು ನಿರ್ದೇಶಿಸಿರುವುದರಿಂದ ಇವರು "ನಂದಿಕೇಶ್ವರಕಾರಿಕೆ" ಮತ್ತು ಅದರ ವ್ಯಾಖ್ಯೆ "ತತ್ತ್ವವಿಮರ್ಶಿನೀ" ಕರ್ತೃಗಳೆಂದು ಹೇಳುವುದು ಸೂಕ್ತ. ಈ ನಂದಿಕೇಶ್ವರನು ಔತ್ತರೇಯನು. ಏಕೆಂದರೆ ಸ್ಕಾಂದಪುರಾಣದ ಉತ್ತರಾರ್ಧ (ಕಾಶೀಖಂಡ) ೯೫ನೆಯ ಅಧ್ಯಾಯದಲ್ಲಿ—ವೇದವ್ಯಾಸನು ವಾರಾಣಸಿಯಲ್ಲಿ ದೇವತೆಗಳಲ್ಲಿ ವಿಷ್ಣುವೇ ಸರ್ವೋತ್ತಮನೆಂದು ಕೈ ಎತ್ತಿದಾಗ—

ತಸ್ತಂಭ ತಾವತ್ತದ್ಬಾಹುಂ ಸ ಶೈಲಾದಿಃ ಸ್ವಲೀಲಯಾ ।
ವಾಕ್ಸ್ತಂಭಶ್ಚಾಪಿ ತಸ್ಯಾಸೀನ್ಮುನೇರ್ವ್ಯಾಸಸ್ಯ ಸನ್ಮುನೇಃ ॥ ೪೭ ॥ (ಸ್ಕಾಂದ)
ಪಶ್ಯತಾಂ ಕುತ್ರ ವಿಷ್ಣುಃ ಸ್ಯಾತ್ ಕಿಂ ಜಲ್ಪಸಿ ನರಾಧಮ ।
ತಸ್ತಂಭೇತ್ಥಂ ವದನ್ ಹಸ್ತಂ ತಸ್ಯ ನಂದೀಶ್ವರೋ ಮಹಾನ್ ॥ ೫ ॥
(—ವ್ಯಾಸಭುಜಸ್ತಂಭನಮುಕ್ತಿ)

ನಂದಿಕೇಶ್ವರನು ದೃಷ್ಟಿಮಾತ್ರದಿಂದ ಆತನ ಕೈಯನ್ನು ಸ್ತಂಭನಗೊಳಿಸಿದನು. ಎಂದು ಹೇಳಿದೆ. ಇದನ್ನೇ ಶ್ರೀ ಶಂಕರಾಚಾರ್ಯರು

ಗೋವಿಂದಾದಧಿಕಂ ನ ದೈವತಮಿತಿ ಪ್ರೋಚ್ಚಾರ್ಯ ಹಸ್ತಾವುಭೌ
ಉದ್ಧೃತ್ಯಾಥ ಶಿವಸ್ಯ ಸನ್ನಿಧಿಗತೋ ವ್ಯಾಸೋ ಮುನೀನಾಂ ವರಃ ।

---

[1] ಸಿದ್ಧಗಂಗಾ, ತ್ರೈಮಾಸಿಕ ಸಂ. ೪. (೧೯೬೮).

ಯಸ್ಯ ಸ್ತಂಭಿತ ಪಾಣಿರಾನತಿಕೃತಾ ನಂದೀಶ್ವರೇಣಾ ಭವತ್।
ತಸ್ಮಿನ್ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ॥

ಎಂಬ ಸ್ತುತಿಯಲ್ಲಿ ನಿರ್ದೇಶಿಸಿದ್ದಾರೆ. ಶ್ರೀಪತಿಪಂಡಿತಾರಾಧ್ಯರು ಸಹ ಇದನ್ನು ಉಲ್ಲೇಖಿಸಿದ್ದಾರೆ.[1]

ಇದರಂತೆ ಪಾಣಿನಿಯು ಇಂದು ಲಾಹೋರ್ ಎಂದು ಕರೆಯಲ್ಪಡುವ 'ಶಲಾತುರ' ಎಂಬ ಗ್ರಾಮದಲ್ಲಿ ಜನ್ಮತಳೆದನು. 'ದಾಕ್ಷೀ–ಶಲಂಕು' ಎಂಬವರು ತಂದೆತಾಯಿಯರು. ಆತನ ಹೆಸರು 'ಆಹಿಕ' ಎಂದು. ಪಾಣಿನಿ ಎಂಬುದು ಗೋತ್ರದ ಹೆಸರು. ಈತನು ನಂದರ ರಾಜಧಾನಿಯಾಗಿದ್ದ ಪಾಟಲೀಪುತ್ರದಲ್ಲಿ ವಾಸಿಸುತ್ತಿದ್ದನು.[2] ಇನ್ನು ವರರುಚಿ ಕೌಶಾಂಬಿಯ ನಿವಾಸಿ, ವಸುದತ್ತಾ–ಸೋಮ ದತ್ತರ ಮಗ. ಈ ವಿವರಗಳಿಂದ ಪಾಣಿನಿ, ವರರುಚಿ, ನಂದಿಕೇಶ್ವರ ಮತ್ತು ಉಪಮನ್ಯು ಮುಂತಾದವರು ಉತ್ತರ ಭಾರತದಲ್ಲಿದ್ದು ಶಬ್ದಶಾಸ್ತ್ರ ಪ್ರವರ್ತಕ ರಾಗಿರುವುದು ಕಂಡುಬರುತ್ತದೆ.

ಯದ್ಯಪಿ ಈ ನಂದಿಕೇಶ್ವರನು ನಟರಾಜನ "ನೃತ್ತಾವಸಾನ"ದಲ್ಲಿ ಉದಿಸಿದ ಮಾಹೇಶ್ವರ ಸೂತ್ರಗಳಿಗೆ ಕಾರಿಕೆಗಳನ್ನು ಬರೆದವನೆಂಬುದರಿಂದ, ಧವಳಗಿರಿ (ಹಿಮಾಲಯ)ವಾಸ, ಗಿರಿಜಾಧವ ಮುಂತಾದ ಲೀಲೆಗಳಿಂದ ಪ್ರಸಿದ್ಧನಾದ ನಟರಾಜನ ೬೪ ಲೀಲೆಗಳಲ್ಲಿ ಅನೇಕ ಲೀಲೆಗಳು ರಜತಗಿರಿ ಪ್ರಧಾನವಾದ ಉತ್ತರ ಭಾರತದಲ್ಲಿ ನಡೆದವುಗಳೆಂದೂ, ಅಲ್ಲಿಂದ ಮುಂದೆ ಪೌರಾಣಿಕ ಪ್ರಜ್ಞೆಯಂತೆ ಶಿವನು ಶಿಲಾದ ಮುನಿಪುತ್ರ ಪರ್ವತನ ಪ್ರಾರ್ಥನೆಯ ಫಲವಾಗಿ ಶ್ರೀಶೈಲದಲ್ಲಿ ನೆಲೆಸಿದ ಮೇಲೆ ಶ್ರೀಕಂಠ (ವಿಷಪಾನಲೀಲೆ–ನಂಜುಂಡ) ಮುಂತಾದವು ದಕ್ಷಿಣ ಭಾರತದಲ್ಲಿ ನಡೆದಂತೆಯೂ ತೋರುತ್ತದೆ. ಮಹಾಮಹಿಮರೆನಿಸಿದ ಪುರಾತನ ಶಿವಭಕ್ತರ ಇಂತಹ ಪ್ರಭಾವಗಳು ಕಾಲಕ್ರಮದಲ್ಲಿ ಶಿವಲೀಲೆಗಳಲ್ಲಿ ಪರಿಗಣಿಸಲ್ಪಟ್ಟು ದೇವತ್ವವನ್ನು ಪಡೆದಿರಬೇಕು ಎಂಬ ನಮ್ಮ ಹಿಂದಿನ ಊಹೆಯು ಇದರಿಂದಲೂ ದೃಢವಾಗುತ್ತದೆ.

ಮಹಾಭಾರತ ಕಾಲದಿಂದೀಚೆಗೆ ಪ್ರಾಧಾನ್ಯವನ್ನು ಪಡೆದಿರುವ ಶ್ರೀಶೈಲವು ಶೈವಾಚಾರ್ಯರ ಪ್ರಭಾವದಿಂದಾಗಿ ಭರತರ ವಿದ್ಯಾಕೇಂದ್ರವೂ ಆಧ್ಯಾತ್ಮ ನಿಕೇತನವೂ ಆಗಿ ಪೆರ್ಮೆವಡೆದಿರಬೇಕು. ಅದೇ ಪರಂಪರೆಗೆ ಸೇರಿದ ನಂದೀಶ್ವರ ಎಂಬ ಹೆಸರಿನ ಅನೇಕ ಆಚಾರ್ಯರು ಶ್ರೀಶೈಲದಲ್ಲಿ ಆಗಿ ಹೋಗಿರಬೇಕು. ಆದ್ದರಿಂದಲೇ ಶ್ರೀಶೈಲ ಪ್ರದೇಶಗಳಲ್ಲಿ ಏರ್ಪಟ್ಟಿರುವ ಪ್ರಥಮ ನಂದಿ, ಮಹಾನಂದಿ ಮುಂತಾದ ಸ್ಮಾರಕಗಳು ಪೂರ್ವೋಕ್ತ ಆಚಾರ್ಯರ ಪವಿತ್ರನಾಮಗಳಿಂದ

---

1 ಶ್ರೀಕರಭಾಷ್ಯ (ಪು. ೨೪೩).

2 ಸಂಸ್ಕೃತಸಾಹಿತ್ಯ ಚರಿತ್ರ (ಪು. ೧೪೧).

ನೆಗಳ್ತೆವಡೆದಿರಬೇಕೆಂದು ಸಿದ್ಧವಾಗುತ್ತದೆ. ಪ್ರಕೃತ ಅಭಿನಯದರ್ಪಣ ಕರ್ತೃ ನಂದಿಕೇಶ್ವರನು ಆಚಾರ್ಯ ಭರತನ ಹೆಸರನ್ನು ಎತ್ತಿರುವುದರಿಂದಲೂ, ತನ್ನ ಕೃತಿಯಲ್ಲಿ 'ಶಿವಲಿಂಗಹಸ್ತ' ಎಂಬ ಮುದ್ರೆಯನ್ನು ಸೂಚಿಸಿರುವುದರಿಂದಲೂ, ಪ್ರಾಯಃ ಅದೇ ಪರಿಸರದಲ್ಲಿ ಕಂಚಿಯ ಕಲಾವಿದರೂ, ಕಾವ್ಯಪ್ರೇಮಿಗಳೂ ಆದ ಪಲ್ಲವ ಅರಸರು ಲಿಂಗಧಾರಿಗಳೆನಿಸಿರುವುದರಿಂದಲೂ, ಪಲ್ಲವರಿಗೂ ಶ್ರೀಶೈಲ ಕ್ಷೇತ್ರಕ್ಕೂ ನಿಕಟಸಂಬಂಧವಿರುವುದು ಇಂದಿಗೂ ಅಲ್ಲಿಯ ವಾಸ್ತುಶಿಲ್ಪದಲ್ಲಿ ಅಭಿವ್ಯಕ್ತವಾಗಿರುವುದರಿಂದಲೂ ಆಚಾರ್ಯ ನಂದಿಕೇಶ್ವರನ ಸಂಬಂಧವು ಶಿಲಾದನ ಕಾಲದಿಂದ ಆರಂಭವಾಗಿ ಇಂದಿಗೂ ಅಲ್ಲಿಯ ಅನೇಕ ಕ್ಷೇತ್ರಗಳ ಸ್ಮಾರಕವಾಗಿ ಕಂಡುಬರುತ್ತಿರುವುದರಿಂದಲೂ ಆಚಾರ್ಯ ನಂದಿಕೇಶ್ವರನು ಕ್ರಿ.ಶ. ಸುಮಾರು ೩೦೦ರಿಂದ ೬೦೦ರ ಅವಧಿಯಲ್ಲಿ ಶ್ರೀಶೈಲದಲ್ಲಿದ್ದು "ಅಭಿನಯದರ್ಪಣ" ಮುಂತಾದ ಕೃತಿಗಳ ಕರ್ತನಾಗಿರಬೇಕೆಂದು ಊಹಿಸಬಹುದಾಗಿದೆ.

## ಮೈಲಾರಗೌಡ ಪಾಟೀಲ

# ಕೆಲವು ಸುಭಾಷಿತಗಳು

ಅಂಬಾಸುತನಂ ಕರಿವದ
ನಾಂಬುಜನಂ ಶೂರ್ಪಕರ್ಣನಿಲಿದೇರನ ಹೇ
ರಂಬನ ಗಣನಾಯಕನಂ
ಲಂಬೋದರನನ್ನು ನಮಿಸಿ ಸೂಕ್ತಿಯ ಪೇಳ್ವೆಂ ॥ ೧ ॥

ಕ್ರತುಪುರ ತಹಶೀಲಿನೊಳಂ
ಕ್ರತುಕೋಟಿಯ ಗೌಡ ಶಾನುಭೋಗರ ಮನೆಯೊಳ್
ಗತಿಸಿದ ರಾಯಪ್ಪನ ಸಂ
ಸ್ಮೃತಿಗೀ ಕಂದಗಳ ರಚಿಸಿ ಪ್ರಕಟಿಸುತಿರುವೆಂ ॥ ೨ ॥

ಸನ್ನುತ ಸಂಸ್ಕೃತ ಸೂಕ್ತಿಗ
ಳನ್ನರೆ ಮೈಲಾರಗೌಡನನುವಾದಿಸಿದಂ
ಕನ್ನಡ ಬಾಂಧವರೆಲ್ಲರ್
ಮನ್ನಿಪ ತೆರದಿಂದೆ ಮಾಲತೇಶನ ಕೃಪೆಯೊಳ್ ॥ ೩ ॥

ಹಿಸೆಗೊಳ್ಳದು ಬಾಂಧವರಿಂ
ಕಸಿಯಲ್ಬರದೆಂದು ಚೋರವಂಚಕರಿಂದಂ
ಒಸೆದು ಕೊಡಲ್ಸಲೆ ಪೆರ್ಚುವು
ದೆಸೆಯುವ ಸದ್ವಿದ್ಯೆಯೆಂಬ ಬಹು ದೊಡ್ಡ ಧನಂ ॥ ೪ ॥

ಭವವೆಂಬ ಗರಲತರುವಿಗೆ
ತವೆ ಮಧುರ ಫಲಗಳೆರಡು ಪೀಯೂಷಸಮಂ
ಸವಿಯಲು ಸುಖವನು ಕೊಡುತಿರು
ವವು ಸಜ್ಜನಸಂಗವುಂ ಸುಭಾಷಿತಗೀತಂ ॥ ೫ ॥

ಜಗದೊಳು ರತ್ನವು ಮೂರೇ
ಬಗೆಯುವು ಜಲಮುಂ ಸುಭಾಷಿತಂ ಮೇಣನ್ನಂ
ಬಗೆಯಲು ಕಲ್ಲಿನ ತುಂಡನು
ಜಗಜಗಿಸುವ ರತ್ನವೆಂದು ತಿಳಿವಮೂರ್ಖರ್ ॥ ೬ ॥

ವಿರಚಿಸುವನು ಕವಿ ಪದ್ಯವ
ನೆರೆಯುತ್ತಮ ಜನರುಮುದರ ಲಾಲನೆಗೆಯ್ವರ್
ತರುಗಳ್ಕೊಡುವವು ಪುಷ್ಪವ
ಮರುತಂ ತಾನೊಯ್ವನದರ ಸೌರಭವನ್ನು ॥ ೭ ॥

ಸುಂದರತರ ಕಾವ್ಯದೊಳಂ
ಕುಂದನೆ ಹುಡುಕಲ್ಕಪೇಕ್ಷೆಗೆಯ್ವಂ ಮೂರ್ಖಂ
ಸುಂದರ ತನುವಿನೊಳಂ ವ್ರಣ
ವೊಂದನೆ ಶೋಧಿಸುತಲಿರುವ ಮಕ್ಷಿಕ ತೆರದಿಂ ॥ ೮ ॥

ಸರಸೆಯು ಸಾಲಂಕಾರೆಯು
ಸುರುವರ್ಣದಿ ಮೆರೆವ ಸುಪದಳಾರ್ಯೆಯು ತೆರದಿಂ
ಮೆರೆಯುವ ಕಂದಗಳಂ ಮೇ
ಣುರೆ ಭಾರ್ಯೆಯು ಹೀನಸುಕೃತಿ ಪಡೆಯಲ್ಕಾರಂ ॥ ೯ ॥

ಪ್ರಿಯವಾಕ್ಯಸಹಿತ ದಾನಂ
ವ್ಯಯವನ್ನೊಳಗೊಂಡ ವಿತ್ತ ಕ್ಷಮೆಯುತ ಶೌರ್ಯಂ
ನಿಯತಜ್ಞಾನಮುಗರ್ವಂ
ಕ್ಷಯಿಸದವಿವು ನಾಲ್ಕು ಮಂಗಲಪ್ರದವಕ್ಕುಂ ॥ ೧೦ ॥

ಎಲ್ಲಿಯ ಧರ್ಮವು ಕಳ್ಳನಿ
ಗೆಲ್ಲಿಯದೈ ಕ್ಷಮೆಯ ಗುಣವು ದುರ್ಜನನಿಂಗೆ
ಎಲ್ಲಿಯ ನೇಹವು ವೇಶ್ಯೆಗ
ದೆಲ್ಲಿಯದೈ ಸತ್ಯವಾಣಿ ಕಾಮಾತುರಗೆ ॥ ೧೧ ॥

ಗುರುಶುಶ್ರೂಷೆಯೊಳಥವಾ
ಗುರು ಶುಲ್ಕದ ಬಹಳ ಧನದೊಳಥವಾ ವಿದ್ಯಾ
ವರ ವಿನಿಮಯದಿಂದಲ್ಲದೆ
ಯಿರದೈ ನಾಲ್ಕನೆಯ ದಾರಿ ವಿದ್ಯಾರ್ಜನೆಗೆ ॥ ೧೨ ॥

ಅತಿಪರಿಚಯದಿಂದಂ ಸಲೆ
ಯತಿಶಯ ತಾತ್ಸಾರಮುಪ್ಪುದೆಂಬುದು ಸಟೆಯೈ
ಅತಿಪರಿಚಿತಮಾದೀ ಸಂ
ಸೃತಿಯೊಳ್ತಾತ್ಸಾರಭಾವಮಾಗದುಮೆಂದುಂ ॥ ೧೩ ॥

ಅನುಚಿತ ಕಾರ್ಯಾರಂಭಂ
ತನಗಿಂ ಬಲ್ಲಿದರೊಳೀರ್ಷೆ ಸ್ವಜನ ವಿರೋಧಂ
ವನಿತಾಜನದೊಳ್ನಂಬುಗೆ
ತನಗೇ ಮರಣಕ್ಕೆ ಮಾರ್ಗಗಳುಮಿಾ ನಾಲ್ಕುಂ ॥ ೧೪ ॥

ಪರರಿಗೆ ಬೋಧಿಸುವೆಡೆಯೊ
ಳ್ಪರಮ ಸುಶೀಲತೆಯ ತೋರ್ಪುದೈ ಜನವೆಲ್ಲಂ
ಮರೆಯುವರಾ ಶಿಷ್ಟತೆಯಂ
ನೆರೆ ತಮ್ಮಯ ಕಾರ್ಯವನ್ನು ಸಾಧಿಸುವೆಡೆಯೊಳ್ ॥ ೧೫ ॥

ಪೊಡವೀ ತಲದೊಳಗೀರ್ವರು
ಪಡೆಯರುಮೆಂದೆಂದು ಸೌಮನಸ್ಯದ ಸುಖಮಂ
ಬಡವನುಮತ್ಯಾಶೆಯವಂ
ಕಡುಮುಳಿಸಿಂ ಕುದಿವ ನಿರಧಿಕಾರಿ ದ್ವಿತೀಯಂ ॥ ೧೬ ॥

ಗೆರೆಗಳ್ತೋರ್ದವು ಮುಖದೊಳ್
ನರೆಗೂದಲಿನಿಂದೆ ತಲೆಯೊಳೆಲ್ಲಂ ಬಿಳಿದೈ
ವರಗಾತ್ರವು ಸಡಿಲಾದುದು
ತರುಣಾವಸ್ಥೆಯಲಿ ನಿಂದುದೊಂದು ದುರಾಶೆ ॥ ೧೭ ॥

ನಾಲಗೆಗೊನೆಯಲಿ ಲಕ್ಷ್ಮಿಯು
ನಾಲಗೆಗೊನೆಯಲ್ಲಿ ಮಿತ್ರರುಂ ಬಾಂಧವರುಂ
ನಾಲಗೆಗೊನೆಯಲಿ ಬಂಧಂ
ನಾಲಗೆಗೊನೆಯಲ್ಲಿ ಪ್ರಾಪ್ತಮುಕ್ಕುಂ ಮರಣಂ ॥ ೧೮ ॥

ತುಂಬಿಯು ಪುನರಪಿ ತುಂಬಿಯು
ತುಂಬದ ವಸ್ತುಗಳುಮೇಳುಮಿರ್ಪವು ಜಗದೊಳ್
ಅಂಬುಧಿಯುಮಗ್ನಿಯಾವಾ
ಸಂ ಬ್ರಾಹ್ಮಣಮುದರಮರಸನುಂ ಯಮನೆಂಬರ್ ॥ ೧೯ ॥

ಗೆಳೆಯರ ಗಳಿಸುವ ಗುಣವುಂ
ತಳೆದಿರುವದು ಶೀಲಶೌರ್ಯ ಪಾಂಡಿತ್ಯವನು
ಅಲಸವ ತೊರೆದಿಹ ಗುಣವುಂ
ಕಳುವಾಗವೈದು ಗುಣಗಳಕ್ಷಯ ನಿಧಿಗಳ್ ॥ ೨೦ ॥

ವರವಿಪ್ರಭೋಜನದಿಂ
ನೆರೆ ಘನಗರ್ಜನೆಯೊಳಂ ಶಿಖಂಡಿಯಷಂಡಂ
ಪರಸಂತೋಷದೆ ಸಂತರು
ಪರಕಷ್ಟದೆ ದುಷ್ಟರೆಲ್ಲ ಸಂತಸಬಡುವರ್ ॥ ೨೧ ॥

ಶರಣಾಗತ ರಕ್ಷಾರ್ಥಂ
ವರಸತಿಯರ ವಿಪ್ರಗೋವುಗಳ ಹಿತಕೆಂದು
ಪೊರೆದವಗಾಗಿಯೆ ಪ್ರಾಣವ
ತೊರೆಯುವರಿಗೆ ಪ್ರಾಪ್ತಮಕ್ಕು ಶಾಶ್ವತಲೋಕಂ ॥ ೨೨ ॥

ಪೇಳುಗು ಮೈತ್ರಿಯ ಪುಳಕಂ
ಪೇಳುವದೈ ತನುವುಮೂಟವೆಷ್ಟೆಂಬುವದಂ
ಪೇಳುಗು ವಂಶವ ವಿನಯಂ
ಪೇಳುವದೈ ದೇಶವನ್ನು ವಾಣೀಸರಣಿ ॥ ೨೩ ॥

ವನಿತೆಯು ಪುಸ್ತಕಗಳು ಲೇ
ಖನಿಯುಂ ಪರಹಸ್ತಕೈದೆ ತಿರುಗುವದಿಲ್ಲಂ
ನೆನೆದೊಮ್ಮೆ ಬಂದೊಡಂ ಚುಂ
ಬನವಡೆದುಂ ಹರಿದುಮುರಿದವಾಗಿಯೆ ಬರ್ಕುಂ ॥ ೨೪ ॥

ಏರುಂಜವ್ವನಮುಂ ಸಿರಿ
ಯೇರುವಿಕೆಯು ಪ್ರಭುತೆ ಮತ್ತೆ ತಿಳಿಗೇಡಿತನಂ
ಓರೊಂದುಮನರ್ಥಂಗಳ
ತೋರುವವೈ ನಾಲ್ಕುಮಿರಲದೇಗೆಯ್ದಪವೋ ॥ ೨೫ ॥

ಭುವಿಯೊಳಗೆ ದುಃಖಿ ಬಡವನು
ಮವನಿಂದಂ ದುಃಖಿ ಸಾಲವಂ ಮಾಡಿದವಂ
ಅವರಿಬ್ಬರಿಂದೆ ರೋಗಿಯು
ತವೆ ದುಃಖಿಯುಮವರಿಗಿಂತ ಕುಸತಿಯ ಪತಿಯೈ ॥ ೨೬ ॥

ಅತಿ ದಾನದಿಂದೆ ಬಲಿ ಬಂ
ಧಿತನಾದಂ ಲಂಕೆ ದರ್ಪದತಿಯಿಂ ಪಾಳಾ
ಯಿತು ಕೌರವರತಿ ಮಾನದೆ
ಹತರಾದರು ಕತದಿನತಿಯುವುತಿಶಯ ಕೇಡೈ ॥ ೨೭ ॥

ವರನಂ ಕನ್ಯೆಯು ಮಾತೆಯು
ನೆರೆಚಿಂತಿಪರರ್ಥವನ್ನು ವಿದ್ಯೆಯ ಪಿತನುಂ
ವರಕುಲವನು ಬಾಂಧವರೆ
ಲ್ಲರು ನೋಳ್ಪರುವುಳಿದ ಜನವು ಮೃಷ್ಟಾನ್ನವನು ॥ ೨೮ ॥

ಅನ್ಯರನೊಲಿವಳು ಲಕ್ಷ್ಮಿಯು
ಮನ್ಯರನನ್ಯರನು ವರಿಸುವಳ್ಭೂದೇವಿ
ಅನ್ಯರನೆಂದುಂ ನೋಡಳ
ನನ್ಯದಿನಿರ್ಪವಳು ಕೀರ್ತಿ ಹದಿಬದೆಯೋರ್ವಳ್ ॥ ೨೯ ॥

ಅರಸನುಮಗ್ನಿಯುಮಂತಕ
ನುರೆಬಾಲಕ ವೇಶ್ಯೆಯತಿಥಿಯುಂ ಯಾಚಕನುಂ
ಪರರಾಪತ್ತನು ತಿಳಿಯರ್
ಪುರಕಂಟಕನೆಂಬುವವನು ಮೇಣಷ್ಟಮನೈ ॥ ೩೦ ॥

ಗಳಿಸುತಲುಣ್ಣುವುದುತ್ತಮ
ಗಳಿಸಿದ್ದುಣ್ಣುವದು ಮಧ್ಯಮಂ ಪಿತೃಗಳದಂ
ಬಳಸುವದಧಮವು ಭ್ರಾತನ
ಗಳಿಕೆಯ ಸ್ತ್ರೀಧನದ ಬಳಕೆಯಧಮಾಧಮವೈ ॥ ೩೧ ॥

ಮತಿಯುತಗೆ ಪೋಕು ಕಾಲಂ
ನುತಶಾಸ್ತ್ರದಿ ಗೀತದಿಂ ವಿನೋದದಿ ಸತತಂ
ಶತಮೂರ್ಖನಿಗಾ ಕಾಲಂ
ಗತಮಪ್ಪುದು ವ್ಯಸನ ನಿದ್ರೆ ಕಲಹಂಗಳೊಳು ॥ ೩೨ ॥

ಎಲ್ಲಿಯು ವಿದ್ಯೆಯುಮಲಸಿಗ
ದೆಲ್ಲಿಯು ಸಂಪತ್ತು ವಿದ್ಯೆಯಂ ಪಡೆಯದಗೆ
ಎಲ್ಲಿಯು ಗೆಳೆತನ ಬಡವಗ
ದೆಲ್ಲಿಯದ್ಧೆ ಸುಖವು ಗೆಳೆಯನಿಲ್ಲದವಂಗೆ ॥ ೩೩ ॥

ಕೊಡುವದು ಪಡೆಕೊಳ್ಳುವದುಂ
ಕಡುಗುಪಿತವ ಪೇಳಿಕೇಳಿ ತಾನರಿಯುವದುಂ
ಒಡನೂಟವು ಮೇಣುಣಿಪುದು
ಕಡುನೇಹದ ಲಕ್ಷಣಂಗಳೆನಿತುಮಿವಾರುಂ || ೩೪ ||

ದುರ್ಲಭ ಸಂಸ್ಕೃತ ವಾಣಿಯು
ದುರ್ಲಭರ್ಕೈ ಪಿತರ ಹಿತವ ಬಯಸುವ ಸುತರುಂ
ದುರ್ಲಭರುಂ ಪ್ರಿಯರಾಪ್ತರು
ದುರ್ಲಭೆಯೈ ಪತಿಯ ಹಿತವ ಬಯಸುವ ಸತಿಯೈ || ೩೫ ||

ಸ್ಥಿರಳೇನಾರಲಿ ಲಕ್ಷ್ಮಿಯು
ಸ್ಥಿರವೇನಿರ್ದಪುದೆ ರಾಜರೊಳ್ಗೆಳೆತನವುಂ
ಪರತನುವಾರಿಗೆ ಸ್ಥಿರವೈ
ಸ್ಥಿರವೇನ್ಯೆಯೋರ್ವನಲ್ಲಿ ವೇಶ್ಯೆಯ ಪ್ರಣಯಂ || ೩೬ ||

ಎಲ್ಲಿಯ ಕಾಮವು ಗತವಯ
ಕೆಲ್ಲಿಯ ಪರಿವಾರವಳಿಯೆ ಸಂಪದವೆಲ್ಲಂ
ಎಲ್ಲಿಯ ಕೆರೆ ನೀರೊಣಗಲಿ
ಕೆಲ್ಲಿಯ ಸಂಸಾರದೊಡಕು ತತ್ವಜ್ಞನಿಗೆ || ೩೭ ||

ತಿಳಿವರು ಮೋಹಿತ ಜನರೆದೆ
ಯೊಳು ನಾಂಟಿದ ಶೂಲಮೆಂದು ಪ್ರಿಯನಾಶನವಂ
ತಿಳಿಯುವರದನೇ ಧೀರರು
ಸಲೆದಾಂಟುವ ಹಾದಿಯೆಂದು ಸುಖಸಮ್ಮುಖಕೆ || ೩೮ ||

ನೆರೆ ಪಿತ್ತವಾತಕಫಮೆಂ
ಬರು ವೈದ್ಯರು ಗ್ರಹದ ಕಾಟವೆಂಬರ್ ಜೋಯ್ಸರ್
ಮರುಳಾಟವೆಂದು ಮೇತಾ
ಳರು ಪ್ರಾಕ್ತನ ಕರ್ಮಭೋಗವೆಂಬರು ಮುನಿಗಳ್ || ೩೯ ||

ಎಲ್ಲಿಯ ಗಳಿಕೆ ಕುದೇಶದೊ
ಳೆಲ್ಲಿಯ ತಿಲಜಲವು ಪ್ರಾಪ್ತನಾಗೆ ಕುಪುತ್ರಂ
ಎಲ್ಲಿಯ ಸುಖಮಿರೆ ಕುಸತಿಯು
ಮೆಲ್ಲಿಯ ಕೀರ್ತಿಯು ಕುಶಿಷ್ಯ ಪಾಠನದಿಂದಂ || ೪೦ ||

ಖ್ಯಾತಿಯುಂ ಗಳಿಸಿದ್ದುತ್ತಮ<br>
ಖ್ಯಾತಿಯುಂ ತಂದೆಯದು ತನಗೆ ಮಧ್ಯಮಮುಕ್ಕುಂ<br>
ಖ್ಯಾತಿಯುಮಧಮಮೆನಿಪ್ಪುದು<br>
ಮಾತುಲನಿಂ ಶ್ವಶುರನಿಂದಲಧಮಾಧಮಮೈ ॥ ೪೧ ॥

ಮಕ್ಕಳು ಸೊಸೆಯರಿಂ ಮೊ<br>
ಮ್ಮಕ್ಕಳು ಭೃತ್ಯರೊಳು ತುಂಬಿತುಳುಕುವ ಮನೆಯುಂ<br>
ಅಕ್ಕರದ ಸತಿಯುಮಿರದಿರ<br>
ಲಕ್ಕು ಗೃಹಸ್ಥನಿಗೆ ಸರ್ವವುಂ ಬರಿದೆಂಬೋಲ್ ॥ ೪೨ ॥

ಧನವನು ದಡ್ಡನೊಳೀಕ್ಷಿಸಿ<br>
ಘನ ವಿದ್ಯೆಯ ಹೀನವೆಂದು ಬಗೆಯರು ವಿದುಷರ್<br>
ಕನಕವ ಕುಲಟೆಯೊಳೀಕ್ಷಿಸಿ<br>
ನೆನೆಯುವರೇಂ ಕುಲಟೆಯಾಗಲಾರ್ಯಾಂಗನೆಯರ್ ॥ ೪೩ ॥

ಆಶ್ರಯಿಪವು ನದಿ ವಾರ್ಧಿಯ<br>
ಆಶ್ರಯಿಪವು ವಿಹಗವೆಲ್ಲ ಪಾದಪಗಳನು<br>
ಆಶ್ರಯಿಪಳು ಸತಿಪತಿಯಂ<br>
ಆಶ್ರಯಿಪವು ಗುಣಗಳೆಲ್ಲ ಕಾಂಚನವನ್ನು ॥ ೪೪ ॥

ಎರಳೆಗಳೆರಳೆಗಳಂ ಮೇಣ್<br>
ತುರಗಂ ತುರಗಗಳ ಪಶುವು ಪಶುಗಳ ಕೂಡೆ<br>
ಬೆರೆವವು ಮೇಣ್ಜಾಣರು ಜಾ<br>
ಣರ ಬೆರೆವರ್ಶೀಲಗುಣ ಸಮಾನರು ಗೆಳೆಯರ್ ॥ ೪೫ ॥

ಪರಿಣಯ ಸಮಯದೆ ರತಿಯೊ<br>
ಳ್ಪರ ವಿಪ್ರನ ಕತದಿ ಪ್ರಾಣಸಂಕಟದೆಡೆಯೊಳ್<br>
ನೆರೆ ವಿತ್ತ ಹರಣದೆಡೆಯೋ<br>
ಳುರೆ ಪೇಳುವ ಸಟೆಗಳೈದು ಪಾತಕವಲ್ಲಂ ॥ ೪೬ ॥

ತುರಗಕ್ಕೋಟವು ದ್ವಿಜರಿಗೆ<br>
ವರ ವಿದ್ಯೆಯುಂ ಸ್ತ್ರೀಗೆ ಲಜ್ಜೆ ರಾಜಗೆ ಕ್ಷಮೆಯುಂ<br>
ಸೊರಗುವಿಕೆ ತಪಸಿಗೈವರಿ<br>
ಗುರೆ ಶೌರ್ಯಂ ಸೈನಿಕಂಗೆ ಪರಮವಿಭೂಷಂ ॥ ೪೭ ॥

" ಕನ್ನಡಕುವರ "

# ಹೆಣ್ಣು

ಸೃಷ್ಟಿಯಿಂದಲೇ ಬೊಮ್ಮ ಕಂತೆ ಭಿಕ್ಷವ ಮಾಡಿ
ನಾದಿ ಹದವಾಗಿ,
ಕಾದ ಹಂಚಿನ ಮೇಲೆ ತಟ್ಟಿ ತೆಗೆದು
ತಿಂದ ಕಮ್ಮನೆಯ ರೊಟ್ಟಿ!

ಕಬ್ಬಿಗನ ಕಣ್ಣೆದುರು ಮಾರು ಹೊಳೆಯಾಗಿ
ಮೊರೆದು ನೊರೆಗಟ್ಟಿ,
ನೂರೆಂಟು ಬಿಂಬಗಳನದರೊಳಗೆ
ಬಿಂಬಿಸುತ ನಕ್ಕಿದ್ದು!

ಹರೆಯ ಹುರಿ ಹೊಸೆಯ ತೊಡಗಿದಾ ಗಳಿಗೆ
ಕೌತುಕದ ಕಡಲೆದ್ದು
ಉಬ್ಬುತಗ್ಗುಗಳ ಹೊಸ ಅರ್ಥದಲೆ ಮೈಮರೆಸಿ
ಸ್ವರ್ಗವನೆ ಕಟ್ಟಿಸಿದ್ದು!

ಗಜಾನನ ಈಶ್ವರ ಹೆಗಡೆ

# 'ಮಲೆಗಳಲ್ಲಿ ಮದುಮಗಳು'
## ಕಾದಂಬರಿಯಲ್ಲಿ ಕೆಲವು ಪ್ರತೀಕ-ಪ್ರತಿಮೆಗಳು

ಓದಿ ಮಾರ್ಗದರ್ಶನ, ಸ್ಫೂರ್ತಿ, ತಾರತಮ್ಯ ವಿವೇಕ ಮತ್ತು ಇವೆಲ್ಲಕ್ಕಿಂತ ಮುಖ್ಯವಾಗಿ ರಸಾನುಭವ ಪಡೆವ ಹಿಂದಿನ ಮಹಾಕಾವ್ಯಗಳು ವಿಷಯ ವೈವಿಧ್ಯ ಮತ್ತು ವಿಸ್ತಾರಗಳಿಂದ ಇಂದೂ ನಮ್ಮನ್ನು ದಂಗುಬಡಿಸುತ್ತವೆ; ವಿಸ್ಮಯವನ್ನೂ, ವಿನಮ್ರತೆಯನ್ನೂ ಉಕ್ಕಿಸುತ್ತವೆ. ಇದಕ್ಕೆ ಇನ್ನೊಂದು ಕಾರಣ- ಇವುಗಳ ವ್ಯಾಪ್ತಿ ಒಂದು ಪ್ರಾಂತ ಅಥವಾ ಒಂದು ಜನಾಂಗದ ಕೇವಲ ಚರಿತ್ರೆಯಲ್ಲ, ಸಮಗ್ರ ಜೀವಿತದ ಬಾಹ್ಯಾಂತರಂಗಗಳ ಸುಸಂಬದ್ಧ ಕಲಾತ್ಮಕ ಸಾಂದ್ರಚಿತ್ರಣವಾಗಿರುವುದು. ಇಂದು ಜಗತ್ತಿನ ವಿಸ್ತಾರ, ರಾಷ್ಟ್ರ-ರಾಷ್ಟ್ರಗಳ ಮೇಲೆ ಅತಿ ವೇಗದಿಂದ ಗಮಿಸುವ ವಾಹನಕಂಪಿತ ಶಬ್ದೋತ್ಸಾಹದಿಂದ ಸಂಕುಚಿತವಾಗಿ ಹೊಸ ಸಂಬಂಧ ಜಲ, ನೆಲ, ಗಗನಗಳಲ್ಲಿ ಉಂಟಾಗುತ್ತಿದೆ. ಸಾಹಿತ್ಯ ಈ ಪ್ರಭಾವಗಳಿಂದ ತಪ್ಪಿಸಿ ಕೊಳ್ಳಲಾರದು. ಛಂದೋಗಂಧಿಯಾದ ಕಾವ್ಯಸಿಂಹಾಸನಾಲಂಕೃತ ಮಹಾಕಾವ್ಯ ಕನ್ನಿಕೆ ಸರಳ, ಸುಸಂಬದ್ಧ, ಪೂರ್ವಾಪರ ಸನ್ನಿವೇಶಾಲಂಕೃತ ಪ್ರತೀಕ-ಪ್ರತಿಮೆಗಳ ಮೂಲಕ ಜನಸಾಮಾನ್ಯರ ಮಾತು ರೀತಿಗಳ ಮಡಿಲಲ್ಲಿ ಮುಗುಳುನಗುತ್ತಿದ್ದಾಳೆ. ವಸ್ತು ಮತ್ತು ಅಭಿವ್ಯಕ್ತಿಯ ಪ್ರಕ್ರಿಯೆಗಳ ಮಧ್ಯೆ ವಿಭಿನ್ನತೆ ಅಸಾಧ್ಯವಾದ ಮಾಧ್ಯಮ ಅವಳನ್ನು ರಸಾವಿಷ್ಟಳನ್ನಾಗಿ ಮಾಡುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕಥಾಭಿತ್ತಿಯಲ್ಲಿ ಮಲೆಯ ಉತ್ತುಂಗ ಶಿಖರಶ್ರೇಣಿಗಳ ತಲಪ್ರದೇಶಗಳಲ್ಲಿ ಬದುಕುತ್ತಿರುವ ಪಾತ್ರಗಳ ಪರಸ್ಪರ ಸಂಬಂಧಸೂತ್ರ ನಾಡಿಯ ಮಿಡಿತದಷ್ಟು ಸ್ಪಷ್ಟವಾಗಿ, ಬಿಚ್ಚಿ ನೋಡಲಾರದಷ್ಟು ಸಜೀವವಾಗಿದೆ. ಇಂತಹ ಕಾದಂಬರಿಗಳಲ್ಲಿ ಸಾಮಾನ್ಯ ಕ್ರಿಯೆಗಳೂ ಕೂಡ ಹೇಗೆ ಅರ್ಥ ಶ್ರೀಮಂತಿಕೆಯಿಂದ ಮೈತುಂಬಿಕೊಳ್ಳುವವು ಎಂಬುದನ್ನು ಇದರ ಕೆಲವು ಸಂಗತಿ-ಸಂದರ್ಭಗಳಲ್ಲಿ ಗುರುತಿಸಲಾಗಿದೆ.

### ನೋಡ-ಮಳೆ

'ಬರ್‍ಲಿ, ಮಾರಾಯಾ, ನಮ್ಮ ಅಗೋಡಿಗೆ ನೀರು ಕಾಣದೆ ಕಂಗಾಲಾಗಿದ್ದೆ ನಾನು-'

ಕಳ್ಳಬಸಿರನ್ನು ಕೀಳಿಸಿಕೊಂಡಿದ್ದ ಕಾಡಿ ನೊರೆಗಳ್ಳನ್ನು ಮೋಗೆಯು ತುಂಬ ಮುಂದಿಟ್ಟು ಮಿಂಚಿ ನೋಡಿ ಒಳಗೆ ಹೋದಮೇಲೆ ಹೆಂಡತಿ ಇಲ್ಲದ ತಿಮ್ಮನಾಯ್ಕ ಖಾಲಿಯಾದ ಗರಟ ಕೆಳಗಿಟ್ಟು ಲಕ್ಕುಂದದಲ್ಲಿ ಆಡಿದ ಮಾತಿದು. ಮಳೆಯಿಲ್ಲದಿದ್ದರೆ ಮಲೆಯೆಲ್ಲಿ ಉಳಿದೀತು? ಗಗನದೆತ್ತರಕ್ಕೆ ಮುಖವೆತ್ತಿ ಮುಗಿಲಿಗೆ ಬಾಯೊಡ್ಡಿದ ವೃಕ್ಷಗಳು, ಸಾಗರಜಲ ಮೊಗೆಮೊಗೆದು ಸೋರುವ ಆ ಜೋಲು ನೀರದಗಳು ಪರಸ್ಪರಾನುರಕ್ತಿಯುಳ್ಳವು. ಹಸಿರಿಲ್ಲದಲ್ಲಿ ಮಳೆಯಿಲ್ಲ, ಮಳೆಯಿಲ್ಲದಲ್ಲಿ ಹಸಿರೂ ಇಲ್ಲ.

ಸಿಂಭಾವಿ ಭರಮೈಹೆಗ್ಗಡೆಯವರ ಆಳು ಗುತ್ತಿ 'ಈ ಸಾರಿ . . . ಅವಳನ್ನು ಹಾರಿಸಿಕೊಂಡು ಬರದಿದ್ದರೆ ನಮ್ಮಪ್ಪಂಗೆ ಹುಟ್ಟಿದ ಗಂಡೇ ಅಲ್ಲ ನಾನು' ಎಂದು ಹೊರಟಾಗ ಆಕಾಶ ಮೇಘಾಚ್ಛಾದಿತವಾಗಿತ್ತು. ಮೋಡ ಮತ್ತು ಮಳೆ ಪ್ರಣಯಿಗಳ ಉತ್ಕಟ ಮನೋಭಾವದ ಹೋರಾಟದ ಭೂಮಿಕೆಯಾಗಿ ಇಡೀ ಕೃತಿಯ ಹಿನ್ನೆಲೆಯಲ್ಲಿ ವ್ಯಾಪಿಸಿವೆ. ಗುತ್ತಿ ಸಿಂಭಾವಿಯಿಂದ ಹೊರಟವನು ಪ್ರತಿಯೊಂದೆಡೆ ಮಳೆಯಿಂದ ಸಂಭವಿಸಿದ ಸಂಗತಿಗಳನ್ನು ಗಮನಿಸುತ್ತಾನೆ. ಮೋಡ ಮಳೆಯಾಗಿ ಹಳ್ಳತುಂಬಿ ಹರಿದರೆ, ಅದು ಗುತ್ತಿಗೆ ತಾನು ಏನೋ ಕಳೆದುಕೊಳ್ಳುತ್ತಿದ್ದಂತೆ ಎನ್ನಿಸಿ 'ಹೆಣಾಕಾಯ್ತಾ' ಕುಳಿತಿದ್ದ ಅನುಭವ ಉಂಟಾಗುತ್ತದೆ. ಕಣ್ಣಾ ಪಂಡಿತರ ಮನೆಯ ಮುಂದೆ ಮಳೆಯಿಂದ ನೆನೆದ ಸೆಗಣಿಯನ್ನು ಸೆಗಣಿಯ ಹುಳು ಉಂಡೆಕಟ್ಟಿ ಉರುಳಿಸುತ್ತಿದ್ದರೆ ಅದನ್ನು ನೋಡಿದ ಗುತ್ತಿಗೆ ತನ್ನಲ್ಲಿ ತನಗೇ ಭರವಸೆ ಉಂಟಾಗುತ್ತದೆ. ಗುತ್ತಿಗೆ ತಿಮ್ಮಕ್ಕನ ಮನೆಯ ಮಾಡು ಹಾರಿಹೋದದ್ದು ಕಂಡರೂ ಸರಿಮಾಡಲು ಸಮಯವಿಲ್ಲ. ಸುಬ್ಬಣ್ಣ ಹೆಗ್ಗಡೆ ವೆಂಕಟಪ್ಪಗೌಡನಿಗೆ ಕೊಟ್ಟ ಮರಿಸಲಗ ತಪ್ಪಿಸಿಕೊಂಡು ಓಡಿದ್ದನ್ನು ಹಿಡಿಯಲು ಸಹಕರಿಸುತ್ತಾನೆ. ನಾಗಕ್ಕ ನಾಗತ್ತೆಯರೊಂದಿಗೆ ಗುಡ್ಡದಲ್ಲಿ ಸ್ವಲ್ಪ ದೂರ ಸಂಗಾತಿಯಾಗುತ್ತಾನೆ. ಗುತ್ತಿ ಹೊರಟಾಗ ಕವಿದಿದ್ದ ಕರ್ಮೋಡ ಮಳೆಯಾದ ಪರಿಣಾಮ ಗುತ್ತಿಯ ಪ್ರಯಾಣದೊಂದಿಗೇ ವೇದ್ಯವಾಗುತ್ತದೆ. ಅದರ ಫಲ ವ್ಯಕ್ತಿವ್ಯಕ್ತಿಗೂ ಬೇರೆ ಬೇರೆಯಾಗಿದ್ದರೂ ಅದು ಆ ಆ ವ್ಯಕ್ತಿಗಳ ಪ್ರಣಯ ಭಾವದ ಹದವನ್ನೂ ಪ್ರತಿಬಿಂಬಿಸುತ್ತದೆ. ವ್ಯಕ್ತಿವ್ಯಕ್ತಿಯ ಸಂಬಂಧಸೂತ್ರ ಕಾದಂಬರಿಯಲ್ಲಿ ಹೆಣೆದುಕೊಂಡು ಪರಿಚಯವಾಗುವುದು ಮೋಡ–ಮಳೆಗಳ ಹಿನ್ನೆಲೆಯಲ್ಲಿಯೆ. ಮರ ಕಡಿಯುವುದನ್ನು ಬಿಟ್ಟು ಐತ, ಪೀಂಚಲು ಮತ್ತು ಮುಕುಂದಯ್ಯ ಏಡಿ ಹಿಡಿಯಲು ಹಳ್ಳದೆಡೆಗೆ ಹೋಗುವುದು ಮಳೆಯ ಕಾರಣದಿಂದ. ಮುಕುಂದಯ್ಯ ಮತ್ತು ಪೀಂಚಲು ಇವರ ಮಧ್ಯ ಚಿನ್ನಮ್ಮನ ವಿಷಯದ ಮಾತುಕತೆ ಆರಂಭವಾಗುವುದು ಅಲ್ಲೆ.

ಚಿನ್ನಮ್ಮನನ್ನು ಭರಮೈಹೆಗ್ಗಡೆ ವರಿಸುತ್ತಾನೆ ಎಂದು ನಿಶ್ಚಯವಾಗಿದೆ. ದೇವಯ್ಯನಿಗೆ, ತಿಮ್ಮಪ್ಪಹೆಗ್ಗಡೆಗೆ, ವೆಂಕಟಪ್ಪಗೌಡನಿಗೆ, ಸುಬ್ಬಣ್ಣಹೆಗ್ಗಡೆಗೆ,

ಚಿನ್ನಕ್ಕನಿಗೆ ಮತ್ತು ಮುಕುಂದಯ್ಯನಿಗೆ ಇದು ಸುತರಾಂ ಬೇಕಾಗಿಲ್ಲ. ವೆಂಕಟಪ್ಪ ಗೌಡ ನಿಸ್ಸಹಾಯಕ. ಅವನನ್ನುಳಿದು ಉಳಿದವರ ತಂತ್ರ ಮದುವೆಯ ವಿರುದ್ಧ ನಡೆಯುತ್ತಿದೆ. ಈಗಾಗಲೆ ದೊಡ್ಡಯ್ಯ ಮತ್ತು ರಂಗಮ್ಮರ ಸಾವೂ ಸಂಭವಿಸಿ ಆಗಿದೆ. ' ಯಾರು ಬದುಕಲಿ, ಯಾರು ಸಾಯಲಿ, ಯಾರು ಹುಟ್ಟಲಿ, ಹುಟ್ಟದೇ ಹೋಗಲಿ, ಮಳೆಗಾಲ ನಿಲ್ಲುತ್ತದೆಯೇ, ಮಳೆ ಹಿಡಿದು ಕೂತಿತ್ತು, ನಾಲ್ಕು ಪಾದ ಗಳನ್ನು ಬಲವಾಗಿ ಊರಿ'. ಇದೇ ಮಳೆ ಸುಬ್ಬಣ್ಣಹೆಗ್ಗಡೆಗೆ ಕೊಡಲು ಪೀಂಚಲು ತಂದ ಕಾಗದ ಒದ್ದೆ ಮಾಡಿತು; ಪೀಂಚಲು ಮುಕುಂದಯ್ಯನ ದೂತಿ ಯಾದದ್ದು ಈ ಮಳೆಯಿಂದಲೆ. ಭರಮೈಹೆಗ್ಗಡೆ ಚಿನ್ನಮ್ಮನನ್ನು ಕೈಹಿಡಿಯಲು ಪಲ್ಲಕ್ಕಿಯಲ್ಲಿ ಮೆರವಣಿಗೆ ಹೊರಟರೆ ಈ ಮಳೆಯು ದೆಸೆಯಿಂದ ಜಾರಿಬಿದ್ದ ಪಲ್ಲಕ್ಕಿ ಹೆಗ್ಗಡೆಯ ಟೊಂಕದ ನೋವಿಗೆ ಕಾರಣವಾಯಿತು. ಆತ ನೋವು ಅನುಭವಿಸುತ್ತ ಬಂದ ಹಾದಿಯಲ್ಲಿಯೇ ಮುಸುಕು ತಿರುಗಿಸಿ ಹೋಗುತ್ತಿದ್ದಾಗಲೇ—ಇತ್ತ ಮುಕುಂದಯ್ಯ ತುಂಬಿ ಹರಿವ ಹಳ್ಳದಾಟಿಸುವ ನೆವದಲ್ಲಿ ಚಿನ್ನಮ್ಮನ ಸ್ತನಸ್ಪರ್ಶ ದಿಂದ ಸುಖಿಸುತ್ತಾನೆ. ಈ ಮಳೆಯು ಅವಾಂತರ ವೆಂಕಟಪ್ಪಗೌಡನ ಸಾವಿಗೆ ಕಾರಣವಾಗಿದ್ದು, ಅದೇ ಸಮಯ ಮುಕುಂದಯ್ಯನ ಪ್ರೇಮಬೀಜಕ್ಕೆ ತಂಪೆರೆಯು ತ್ತದೆ.

ಮೋಡ ಮತ್ತು ಮಳೆಯ ವಿಶಿಷ್ಟ ಅರ್ಥ ಸ್ಪಷ್ಟವಾಗುವುದು ಅದರ ಇನ್ನೊಂದು ಮುಖ ದರ್ಶನವಾದಾಗ. ಅಗೋಚರ ಸಂಬಂಧಸೂತ್ರ ಪ್ರಕೃತಿ ಮತ್ತು ಮಾನವನ ಮಧ್ಯ ಹೆಣೆದಿದೆ. ಮಾನವ ಪ್ರಕೃತಿಯ ಕೇವಲ ಅಂಗವೂ ಹೌದು. ದೊಡ್ಡಯ್ಯನ ಹೆಣ ಸುಡಲು ಕಟ್ಟಿಗೆ ಕಡಿಯುತ್ತಿದ್ದ ಅಪೂರ್ವ ಸಂದರ್ಭವದು. ' ಚೆನ್ನಾಗಿ ಒಣಗಿದ ಸೌದೇನೆ ಕಡಿಬೇಕ್ರೋ ' ಎಂದು ಮುಗಿಲ ಕಡೆ ನೋಡಿ ಒಬ್ಬ ಹೇಳಿದರೆ ಇನ್ನೊಬ್ಬ ' . . . . ಮಳೆ ಹೇಗೋ ಹೊಳವಾಗೋ ಹಾಂಗೆ ಕಾಣ್ತದೆ . . . ಇನ್ ಸತ್ತೋರ ಪುಣ್ಯಾ ಹ್ಯಾಂಗಿದೆಯೋ ನೋಡಬೇಕು ? . . . ಸ್ವಲ್ಪ ಹೊತ್ತಿನಲ್ಲಿ ಹೊಳವಾಗಿದ್ದ ಮಳೆ ಬರುಬರುತ್ತಾ ಬಿಸಿಲಿಗೆ ತಾವು ಬಿಡುವಂತೆ ಮೋಡಗಳನ್ನ ಸರಿಸತೊಡಗಿದವು. ಆಗೊಮ್ಮೆ ಈಗೊಮ್ಮೆ ಹೂಬಿಸಿಲು ಆಡತೊಡಗಿತು. ಕ್ರಮೇಣ ಆಕಾಶ ನಿರ್ಮಲವೂ ಆಯಿತು. ಬಿಸಿಲು ಚೆನ್ನಾಗಿಯೇ ಕಾಯ ತೊಡಗಿತು.'

ಯಾತ್ರೆಗೆ ಹೋದ ಗಂಡನನ್ನು ಹಲವು ವರ್ಷಗಳಿಂದ ಬರುಹಾಯುತ್ತಿದ್ದ ರಂಗಮ್ಮ ಗಂಡನ ಹೆಣವನ್ನು ಚಿತೆಯ ಮೇಲಿಟ್ಟಾಗ ಆ ಹೆಣದ ಪಾದ ಹಿಡಿದು ಪುರಾಣ ಪುಣ್ಯಕತೆಗಳಲ್ಲಿ ಕೇಳುತ್ತಿದ್ದ ಸಂಗತಿಯನ್ನು ಪ್ರಮಾಣೀಕರಿಸಿ ಅಲ್ಲೇ ಸ್ವರ್ಗಸ್ಥಳಾದಳು. ಆ ಪ್ರೇಮಮಯಿಗೆ ಸುಸ್ವಾಗತ ಕೋರಲು ' ಆಕಾಶ ನಿರ್ಮಲ ' ವಾಯಿತು. ಶುದ್ಧ ಪ್ರೇಮದ ಹಾದಿಯಲ್ಲಿ ಮೋಡವೂ ಇಲ್ಲ, ಮಳೆಯೂ ಇಲ್ಲ; ಆತಂಕವೂ ಇಲ್ಲ.

ಮಳೆಯ ಪ್ರಭಾವ ವ್ಯಕ್ತಿವ್ಯಕ್ತಿಗೂ ಭಿನ್ನವಾಗುವುದನ್ನು ಇನ್ನೊಂದೆಡೆ ನೋಡಬಹುದು. ಹಲವು ಮಳೆಗಾಲ ಕಂಡು ಉಂಡು ಜೀವನ ಸಾಕು, ದೊಡ್ಡಣ್ಣ ಇದ್ದಾನೋ ಇಲ್ಲವೋ ಎಂದು ತಿಳಿದರೆ ಇನ್ನೇನನ್ನೂ ಮಾಡಬೇಕಾದದ್ದಿಲ್ಲವೆನ್ನುವ ಸ್ಥಿತಿಯಲ್ಲಿದ್ದ ಸುಬ್ಬಣ್ಣ ಹೆಗ್ಗಡೆಗೆ ಗಾಡಿಯಲ್ಲಿ ಬೆಟ್ಟಳ್ಳಿಗೆ ಹೋಗುತ್ತಿದ್ದಾಗ "....ಗುಡುಗು ಮಿಂಚಾಗಲಿ, ಭೋರೆಂದು ಸುರಿದಿದ್ದ ಮಳೆಯಾಗಲಿ ಪ್ರಜ್ಞಾಗೋಚರವಾಗಲಿಲ್ಲ.' ಅದು ಕಾವೇರಿಯನ್ನು ನೆನೆಯುತ್ತಿದ್ದ ದೇವಯ್ಯನಿಗೆ, ತಿಮ್ಮಿಯನ್ನು ಹಂಬಲಿಸುತ್ತಿದ್ದ ಬಚ್ಚನಿಗೆ ಕಿರಿಕಿರಿ ಎನ್ನಿಸಿತು. ಸುಬ್ಬಣ್ಣ ಹೆಗ್ಗಡೆ ಬೆಟ್ಟಳ್ಳಿಯಲ್ಲಿ ಮಗುವಾಗಿ ಹುಟ್ಟಿದ್ದ ದೊಡ್ಡಣ್ಣ ಹೆಗ್ಗಡೆಯನ್ನು ನೋಡಿ ಆನಂದಿಸುವ ಮನಃಸ್ಥಿತಿಯನ್ನೂ ಅದೇ ದಾರಿಯಲ್ಲಿ ಆತ ಮಳೆಯ ವಿಷಯದಲ್ಲಿ ಪ್ರಜ್ಞಾಹೀನನಾಗಿರುವುದನ್ನೂ ಗಮನಿಸಬೇಕು. ಹೀಗೆ ಮೋಡ-ಮಳೆ ಕಾದಂಬರಿಯ ವಿವಿಧ ಸ್ತರಗಳಲ್ಲಿ ಹಾಸುಹೊಕ್ಕಾಗಿ ಸಜೀವವಾಗಿ ನಿಂತು ಅಲ್ಲಿ ನಡೆಯುವ ಕ್ರಿಯೆಗಳಿಗೆ ಬಲವನ್ನೋ, ವಿಘ್ನವನ್ನೋ ತಂದೊಡ್ಡುವ, ಮಳೆಗೆ ಮೀರಿದ ಜೀವನವನ್ನು ಗಗನ ಮಾರ್ಗದಲ್ಲಿ ಸ್ವಾಗತಿಸಿ ಸನ್ಮಾನಿಸುವ ಕ್ರಿಯಾಶಕ್ತಿಯಾಗಿದೆ.

### ಕಜ್ಜಿ–ಹುಣ್ಣು

ಗುತ್ತಿ ಕನ್ಯಾಪಹರಣಕ್ಕೆ ಹೊರಟಾಗ—"ಮತ್ತೆ ಶುರು ಆಯ್ತಪ್ಪಾ, ಈ ಹೆಗ್ಗಡ್ತೀರಿಂದ ಸುಖಾ ಇಲ್ಲಾ, ಮೂರ್ಹೊತ್ತೂ ಜಗಳಾ! ಜಗಳಾ! ಜಗಳಾ! ಜಟ್ಟಮ್ಮ ಲಕ್ಕಮ್ಮ! ಲಕ್ಕಮ್ಮ ಜಟ್ಟಮ್ಮ! ನೀ ಮುಂಡೆ ನೀ ಮುಂಡೆ! ನೀರಂಡೆ ನೀ ರಂಡೆ!........ಈ ಜಗಳ ಭರಮೈ ಹೆಗ್ಗಡೆಯ ಮನೆಯಲ್ಲಿ ಆರಂಭವಾಗಿಯೇ ಇತ್ತು. ಭರಮೈ ಹೆಗ್ಗಡೆಗೆ ತನಗೆ ಮಕ್ಕಳಾಗಲಿಲ್ಲ, ಮತ್ತೊಂದು ಮದುವೆ ಆಗಬೇಕು ಎಂಬ ಚಿಂತೆ ತುರಿಗಜ್ಜಿಯಂತೆ ಕಾಡುತ್ತಿತ್ತು. ಮನೆಯಲ್ಲಿ ನಡೆಯುತ್ತಿದ್ದ ಜಗಳದ ಹಿಂದೆ ಈ ಕಾರಣವೂ ಪಾತ್ರಧಾರಿಯೆ. ಪತ್ರಕೊಟ್ಟು ಕಳಿಸಿದ ಗುತ್ತಿ ಉತ್ತರವನ್ನು ಇನ್ನೂ ತಂದಿರಲಿಲ್ಲ. ಏಕೆಂದು ತಿಳಿಯುವ ಕುತೂಹಲದಿಂದ ಅವನ ಮನೆಗೂ ಕರೆ ಕಳಿಸಿರುತ್ತಾನೆ. ಇನ್ನೂ ಹಾಸಿಗೆಯಿಂದ ಎದ್ದಿರದ ಹೆಗ್ಗಡೆಯು "ವಸ್ತುವಿನಿಂದ ವಸ್ತುವಿಗೆ ನಿರ್ಲಕ್ಷ್ಯವಾಗಿ ಅಲೆದುಹೋಗುತ್ತಿದ್ದ ಕಣ್ಣು ಆ ಗಳುವನ್ನೂ, ಅದಕ್ಕೆ ಸುತ್ತಿದ್ದ ಹಗ್ಗವನ್ನೂ ತಲುಪಿದೊಡನೆಯೆ ಮುಗ್ಗರಿಸಿದಂತೆ, ಯಾರೋ ಹಿಡಿದು ಬಿಟ್ಟಂತೆ ಪಕ್ಕನೆ ನಿಂತುಬಿಟ್ಟಿತು! ತೊಟ್ಟಿಲ ನೇಣು ಸುತ್ತಿದ್ದ ಆ ಗಳು ಅವರನ್ನು ತಮ್ಮ ಸಮಸ್ಯೆಯ ಕೇಂದ್ರಕ್ಕೆ ತಂದುಬಿಟ್ಟಿತ್ತು."

"ಕತ್ತಲಲ್ಲೂ ಸಂಕೋಚದಿಂದ ಮರ್ಮಸ್ಥಾನದ ವ್ರಣಗಳಿಗೆ ಔಷಧಿ ಲೇಪಿಸಿಕೊಂಡು ಅನ್ಯೆಚ್ಛಿಕವಾಗಿ ಕೆಮ್ಮುತ್ತ ಜಗಲಿಗೆ ನಡೆದರು." ಅಡಿಗೆ ಮನೆಯ ದಿಕ್ಕಿನಿಂದ ಮಜ್ಜಿಗೆ ಕಡೆಯುವ ಕಡೆಗೋಲಿನ ಸದ್ದು ಕೇಳುತ್ತಿತ್ತು....... ಬೆಳಗಿನ ಪ್ರಶಾಂತ ವಾತಾವರಣ ಪ್ರತಿ ಜೀವಿಯಮೇಲೂ ಮುದ್ರೆಯೊತ್ತುತ್ತಿತ್ತು. ಆದರೆ

ಹೆಗ್ಗಡೆಯವರು ' ಹಾಳು ತುರಿಕಜ್ಜಿಯನ್ನು ಕಡಿಮೆ ಮಾಡಿಕೊಳ್ಳಲು ಹೆಂಡದ ಸೇವನೆಗೆ ' ಬಾಯಿ ಚಾಚುತ್ತಾರೆ. ಅಷ್ಟರಲ್ಲಿ ಗುತ್ತಿಯ ಆಗಮನವೂ ಆಗುತ್ತದೆ.

"ಹಿಂದಿನ ದಿನವೇ ಕಾಗದ ತೆಗೆದುಕೊಂಡು ಬರಬೇಕಾಗಿದ್ದ ಗುತ್ತಿ ಒಂದು ದಿನ ತಡವಾಗಿ ಬಂದಿದ್ದು ಮಾತ್ರವಲ್ಲದೆ ಹೊತ್ತಾಗಿಯೂ ಬಂದಿದ್ದಕ್ಕೆ............"

"ಮತ್ತ್ಯಾಕೆ ನಿಂತಿರೋದು ಹೋಗಬಹುದು ತಳವಾರನ ಸವಾರಿ!"

"......................................"

"ಯಾಕೋ ಕಲ್ಲು ನಿಂತಹಾಂಗ ನಿಂತೀಯಾ?"

"ನಿಮ್ಮಹತ್ರ ಒಂದು ವಿಷಯ ಕೇಳನಾ ಅಂತ"

"ಏನೋ ಅದು, ಬೊಗಳೋ!"

"ನನ್ನ ಸ್ವಾದರಮಾವನ ಮಗಳು ತಿಮ್ಮೀನ—"

"ಭರಮೈ ಹೆಗ್ಗಡೆ ಕೈಯಲ್ಲಿ ಹಿಡಿದಿದ್ದ ಲೆಕ್ಕದ ಪುಸ್ತಕ ದೂರ ನೂಕಿ, ತಾಟಸ್ಥ್ಯವನ್ನೆಲ್ಲ ಆಚೆಗೆ ತಳ್ಳಿ"........

"ನಿನಗೇನು ಸೊಕ್ಕೇನೋ? ತಲೆಗಿಲೆ ಕೆಟ್ಟದೆಯೇನೊ?........" ಮುಂತಾಗಿ ಬೈದು ಬೆಟ್ಟಳ್ಳಿ ಗೌಡರಿಗೂ ತಮಗೂ ಇದ್ದ ವೈರವನ್ನು ಸ್ಮರಿಸಿಕೊಳ್ಳುತ್ತಾ "ಸಿಟ್ಟಿಗೆ ಮೈಕೆರೆದುಕೊಳ್ಳುವಂತೆ ಕಾಲಿನೊಳಗೆ ಕೈಹಾಕಿಕೊಂಡು ತುರುಗಜ್ಜಿಯ ದೇಹ ಭಾಗವನ್ನು ಪರಪರನೆ ತುರಿಸಿಕೊಳ್ಳಲಾರಂಭಿಸಿದರು."

ಒಡತಿಯನ್ನು ನೋಡಹೋದ ನೆವದಲ್ಲಿ ಹೋಗಿ ಆಳತಿಯನ್ನೇ ಹಾರಿಸಿಕೊಂಡು ಬಂದಿದ್ದ ಗುತ್ತಿಗೆ "ತಟಕ್ಕನೆ ದಿಕ್ಕುಗೆಟ್ಟಂತಾಯಿತು................ನನ್ನ ಅಪ್ಪನಿಗೆ ಹುಟ್ಟಿದ್ದರೆ" ಎಂದೆಲ್ಲ ಪ್ರತಿಜ್ಞೆಮಾಡಿರುವ ಬೆಟ್ಟಳ್ಳಿ ಗೌಡರು ತಾನು ಸಿಕ್ಕರೆ ಜೀವಸಹಿತ ಬಿಟ್ಟಾರೆಯೇ ಎಂಬ ಶಂಕೆ ಮೂಡಿತು. "ಹೆಗ್ಗಡೆಗೆ ಇನ್ನೂ ಕಜ್ಜಿ ತುರಿಸಿ ಮುಗಿದಿರಲಿಲ್ಲ."

"ಅಯ್ಯಾ, ನಿಮ್ಮ ದಮ್ಮಯ್ಯ....ಕೈಯ ಬಿಡಬ್ಯಾಡಿ, ಎಂದು ಉದ್ದಂಡ ನಮಸ್ಕಾರ ಮಾಡಿದ್ದನು ಗುತ್ತಿ!" "ಒಂದುಕಡೆ ತುರಿಕೆ ಶುರುವಾಯಿತು ಅಂದರೆ ಅದನ್ನು ತುರಿಸಿ ತುರಿಸಿ ನವೆಯನ್ನು ಸಮಾಧಾನಸ್ಥಿತಿಗೆ ತರುವಷ್ಟರಲ್ಲಿಯೇ ಪಕ್ಕದ ಸೀಮೆಯಲ್ಲಿ ಆಂದೋಳನಕ್ಕೆ ಪ್ರಾರಂಭ" ಮಾಡುತ್ತಿದ್ದ ತುರಿಗಜ್ಜಿ "ತಟಕ್ಕನೆ ನಿಂತಿತು."

"..................ಗುತ್ತಿಯನ್ನು ಎವೆಯಿಕ್ಕದೆ ನೋಡುತ್ತ ಅವನ ಮಾತಿಗೆ ಕಿವಿಗೊಟ್ಟರು"

ಮಕ್ಕಳಿಲ್ಲ, ಎರಡನೆಯ ಮದುವೆ ಆಗಬೇಕು, ಗುತ್ತಿ ಏನು ಉತ್ತರ ತಂದಾನು ಇವೇ ಮೊದಲಾದ ವಿಚಾರದ ತುಮುಲದಲ್ಲಿ ಸಿಕ್ಕಿಕೊಂಡಿದ್ದ ಹೆಗ್ಗಡೆಯವರಿಗೆ ಗುತ್ತಿ ಆಡುವ ಮೊದಲ ಮಾತುಗಳು ಮರ್ಮಕ್ಕೇ ತಾಗಿರಲಿಲ್ಲ. ಅವೆಲ್ಲ ' ಹೊಲೇರ ಮುಂಡೇಮಗನ ' ಮಾತುಗಳು. ಆದರೆ ಉದ್ದಂಡ ನಮಸ್ಕಾರ

ಹಾಕಿ ಗುತ್ತಿ ಅವರ ಸ್ವಾಭಿಮಾನ ಕೆರಳಿಸಿರುತ್ತಾನೆ. ಅವರ ವಿಚಾರ ಒಂದು ವಿಷಯದಿಂದ ಇನ್ನೊಂದು ವಿಷಯದಲ್ಲಿ ಹೇಗೆ ಬೇರು ಬಿಟ್ಟಿತು, ಗಟ್ಟಿಯಾಯಿತು ಎಂಬುದು ಈ ತುರಿಗಜ್ಜಿಯ ತುರಿಕೆ ಮತ್ತು ನಿಲ್ಲುವಿಕೆಯಲ್ಲಿ ಒಡಗೂಡಿ ವ್ಯಕ್ತವಾಗುತ್ತದೆ.

ಕಜ್ಜಿ ಚರ್ಮವ್ಯಾಧಿ, ಹುಣ್ಣು ನರಮಂಡಲವನ್ನು ಆಕ್ರಮಿಸಿ ಆಧಿಪತ್ಯ ನಡೆಸುವ ಜಾತಿ. ಕಾಲಹುಣ್ಣಿನ ದೆಸೆಯಿಂದ ಕುಂಟುತ್ತ ಗುಡ್ಡ ಇಳಿಯುವಾಗ ಕಾದಂಬರಿಯಲ್ಲಿ ಮೊದಲು ಕಾಣಿಸಿಕೊಳ್ಳುತ್ತಾನೆ—ವೆಂಕಟಪ್ಪಗೌಡ. ಆತ ನಾಗಕ್ಕನನ್ನು ಸೀರುಡಿಕೆಮಾಡಿಸಿಕೊಳ್ಳಲು ಹಂದಿಮಾಂಸದ ಸಮಾರಾಧನೆಯ ತಯಾರಿಯಲ್ಲಿ ಬರುತ್ತಿದ್ದಾನೆ. ಅವನಿಗೆ ಬೇಕಾದ ಹಂದಿ ಸುಬ್ಬಣ್ಣ ಹೆಗ್ಗಡೆಯ ಹತ್ತಿರ ಸಾಲಕ್ಕೆ ಸಿಕ್ಕೀತೆನ್ನುವ ಭರವಸೆ ಆತನಿಗಿದೆ. ನಾಗಕ್ಕನೊಂದಿಗೆ ಸೀರುಡಿಕೆ ಯೇನೋ ಆಗುತ್ತದೆ, ಸಂಗಡ ಸಾಲದ ಭಾರ ಇನ್ನೂ ಹೆಚ್ಚಾಗುತ್ತದೆ. ಕಾಲ ಹುಣ್ಣು ಮಾಯದೆ ಜ್ವರವೂ ಬರತೊಡಗುವುದು. ಸಾಲತೀರಿಸಲು "........ ಮುಕುಂದನ ಅಣ್ಣ ಒಂದು ಕಾಸನ್ನೂ ಕೊಡಾಕೆ ಅಗಾದಿಲ್ಲ ಅಂದಬಿಟ್ಟ"ದ್ದರಿಂದ "ಇನ್ನೇನು ಮಾಡ್ಲಿ? ನನ್ನ ಕಳ್ಳನ ನಾನು ಕಿತ್ತುಕೊಂಡೆ, ಬ್ಯಾರೆ ಯಾವ ದಾರೀನೂ ತೋರ್ದ್ದೆ, ತಿಮ್ಮಾ!" ಎನ್ನುವ ಸ್ಥಿತಿಗೆ ಬರುತ್ತಾನೆ. ಚಿನ್ನಮ್ಮನ ಮದುವೆ ಸಿದ್ಧತೆಯಲ್ಲಿ ಹೊರಗಿನವರ ಅವಜ್ಞೆಗೆ, ತಿರಸ್ಕಾರಕ್ಕೆ ಆತ ಎಷ್ಟು ಒಳಗಾಗಿದ್ದಾನೆ ಅಂದರೆ "ಅಯ್ಯೋ ನಮಗ್ಯಾಕೆ ಬಿಡೇ ದೊಡ್ಡೋರ ಮಾತು! ಸಾಲತೀರ್ಸಾಕೆ ತೆರ ತಗೊಂಡು ಹೆತ್ತ ಮಗಳ್ನೀ ಬಾಂವಿಗೆ ಹಾಕ್ತಿದಾರೆ! ಇಸ್ಸೀ! ಎಂಥದ್ನ ತಿಂದ್ಬಿಡ್ತೋ ಏನೋ ಈ ಹಾಳು ಸೋಸಲು? ಕೆಟ್ಟ ವಾಸ್ನೆ ಪಚ್ಚಿ ತುಂಬಾ" ಎಂದು ಪ್ರಾಣಿಯೊಂದನ್ನೂ ಅವನನ್ನೂ ಸಮೀಕರಿಸಿ ಬೈಯುವಷ್ಟು ಸಾಧಾರಣ ವಾಗುತ್ತದೆ ಆತನ ಜಯದ್ರಥ ಬದುಕು! ಮದುವೆಯ ವೈಭವದ ಬಾಜಾ ಬಜಂತ್ರಿಯೂ, ಗರ್ನಾಲಿನ ದಡಂಕಾರವೂ "ಕುಂಟನ ಹುಣ್ಣು ಜಾಸ್ತಿಯಾಗಿ ಜರದಾಗೆ ನರಳ್ತಾ" ಇದ್ದ ವೆಂಕಣ್ಣಹೆಗ್ಗಡೆಗೆ ಸಹಿಸಲಸಾಧ್ಯವಾಗುತ್ತದೆ. ನಾಗಕ್ಕನನ್ನು ಸೀರುಡಿಕೆಮಾಡಿಸಿಕೊಳ್ಳುವ ಮೊದಲು ಸುಬ್ಬಣ್ಣಹೆಗ್ಗಡೆಯ ಹತ್ತಿರ ಹಂದಿ ತರಲು ಹೋದಾಗ ಶಂಕರಹೆಗ್ಗಡೆಯ ಮನೆಯ ಮುಂದೆ ತಿಮ್ಮಪ್ಪಹೆಗ್ಗಡೆ ಅಟ್ಟಿಸಿಕೊಂಡು ಬಂದ ಹಂದಿಯನ್ನು ಸಾಲದ ಮೇಲೆ ಸಾಲ ಮಾಡಿ ಬಂದಿದ್ದ—ಅದೇ ಹಂದಿಯನ್ನು ಸಾಲವಾಗಿ ಕೊಂಡಿದ್ದ—ವೆಂಕಣ್ಣ ಹೆಗ್ಗಡೆ ತಡೆಯಲು ಹೋಗಿ ಬಿದ್ದು ಗಾಯದ ಮೇಲೆ ಗಾಯವಾದ ಹುಣ್ಣು, ಮಗಳು ಸೀರುಡಿಕೆ ಮಾಡಿಕೊಂಡಿದ್ದ ನಾಗಕ್ಕನ ಬೆಂಬಲದಿಂದಲೇ ಓಡಿಹೋದ ಳೆಂದು ತಿಳಿದಾಗ ಆತನ ಪ್ರಾಣವನ್ನೇ ಹೀರುತ್ತದೆ. ವೆಂಕಣ್ಣಗೌಡರಿಗೆ ಸಾಲದ ಭಾರವಾದ ಬಂಡೆಯಡಿಯಲ್ಲಿ ತಲೆಯೆತ್ತಿದ್ದ ಪುತ್ರಾಪೇಕ್ಷೆ ಬರಿ ಕಜ್ಜಿಯಲ್ಲ, ಕುಂಟನ ಹುಣ್ಣಾಗಿ ಕಾಡಿಸಿ, ಪೀಡಿಸಿ ಕೊನೆಯಲ್ಲಿ ಅವರನ್ನೇ ಮುಗಿಸುತ್ತದೆ. ಇವೆರಡು-

ಕಜ್ಜಿ ಮತ್ತು ಹುಣ್ಣುಗಳಾಗಿರದೆ ವ್ಯಕ್ತಿಸಮಸ್ಯೆಯ ಹಿನ್ನೆಲೆಯಲ್ಲಿ ಹಾಸುಹೊಕ್ಕಾಗಿ ವ್ಯಾಪಿಸಿವೆ. ಆ ಮೂಲಕ ಕೇವಲ ಸಾಂದರ್ಭಿಕವಾಗಿರಬಹುದಾದುದು ಅರ್ಥವ್ಯಂಜಕತೆಗೆ ಕಾರಣವಾಗುತ್ತದೆ.

## ಬಾಗಿಲು--ಬೆಳಕು

ಹೊರಜಗತ್ತಿನೊಂದಿಗೆ ಉಪದೇಶಿ ಜೀವರತ್ನಯ್ಯನ ಮೂಲಕ ಹೆಚ್ಚು ಸಂಪರ್ಕ ಸೌಭಾಗ್ಯಹೊಂದಿದ್ದ ದೇವಯ್ಯನ ಮನಃಸ್ಥಿತಿ ಕಾದಂಬರಿಯ ಉದ್ದಕ್ಕೂ ತೊಯ್ದಾಡುತ್ತಲೇ ಇರುತ್ತದೆ. ಆತನ ಮಾತು, ಆಡಿದ ಆಟ ಇವು ಆತನನ್ನು ಮಲೆಯ ಬಹಿರ್ದೆಶೆಗೆ ಪರಿಚಯಿಸಿ ಕುರುಡಾಡಿಸುತ್ತದೆ. ಅವನ ವಿವೇಕವನ್ನು ಒಂದು ಹೊಸ ಹೊಲಿಗೆಯ ಮಾದರಿ, ಒಂದು ಗೋಡೆಯ ಗಡಿಯಾರ, ಸೈಕಲ್ಲು, ದಕ್ಷಿಣ ಕನ್ನಡ ಜಿಲ್ಲೆಯ ಒಕ್ಕಲು ಯಕ್ಷಗಾನದಲ್ಲಿ ಆಡುವ ಮಾತಿಗಿಂತ ಸಾಮಾನ್ಯವಾದ ಕ್ರಿಶ್ಚನ್ನರ ಅಂತರಂಗ ಸ್ಪರ್ಶಿಸದ ಪ್ರಾರ್ಥನೆ ಮತ್ತು ಹೊರಜಗತ್ತಿನೊಂದಿಗೆ ಉಂಟಾದ ಸಂಪರ್ಕದ ಮೂಲಕ ತಿಳಿದ ಬ್ರಾಹ್ಮಣ ಮತ್ತು ಇತರ ಜಾತಿ ಪಂಗಡಗಳ ಮಧ್ಯ ಇರುವ ಬಾಂಧವ್ಯ-ವ್ಯಾಪಾರದ ಬಾಹ್ಯಲಕ್ಷಣ ಪರಿಜ್ಞಾನ ತೊನೆದಾಡಿಸ ಬಲ್ಲುದು. ಈ ತೊನೆದಾಟದ ದೇವಯ್ಯನ ಅಂತರಂಗ ತನ್ನ ಮನೆ, ಜನ, ತಂದೆ–ತಾಯಿ, ಹೆಂಡತಿ–ಮಗು ಇವನ್ನೆಲ್ಲ ದೂರಮಾಡಿ ಹೋಗುವಷ್ಟು ಪ್ರಬಲವಾದುದಲ್ಲ. ಕೇವಲ ಧರಿಸಿದ ಭೂಷಣ ಅವನ ಆಚಾರ ಮತ್ತು ವಿಚಾರ.

ಕಾವೇರಿಯಿಂದ ಉಪದೇಶಿಯ ಮಗಳ ತನಕ ದೈಹಿಕ ಆಮಿಷಕ್ಕೆ ಬಲಿಯಾದ, ಅಲ್ಲಿ ಕಲಿತ ಹೊಸ ಮಾತನ್ನು ತನ್ನ ಮನೆಯಲ್ಲಿ ಪ್ರಯೋಗಮಾಡಲು, ಆ ಮೂಲಕ ಮಲೆನಾಡಿಗೆ ಹೊಸರೂಪು ಕೊಡಲು ಉತ್ಸುಕನಾಗಿದ್ದ ದೇವಯ್ಯ, ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ಕಿಡಕಿಯ ಬಾಗಿಲನ್ನು ಹಾಕಿ ಮಧ್ಯಾಹ್ನ ಉಂಡು ಮಲಗಿದ್ದ ದೇವಮ್ಮನ ಕೋಣೆಯನ್ನು "ಯಾಕೆ ಬೆಳಕಿಂಡಿ ಬಾಗಿಲೆಲ್ಲ ಹಾಕಿಬಿಟ್ಟೀಯಾ? ಒಂದು ಚೂರು ಗಾಳಿ ಬೆಳಕು ಓಡ್ಯಾಡಬಾರದೇನೆ?" ಎನ್ನುತ್ತ ಒಳಪ್ರವೇಶಿಸಿ ಬಾಗಿಲು ತೆರೆಯುತ್ತಾನೆ. ಅಲ್ಲಿ ಮಲಗಿದ್ದವರೋ ಚೆಲುವಯ್ಯನ ತಾಯಿ ದೇವಮ್ಮ, ಮಲೆನಾಡಿನ ಸಕಲ ಮೂಢನಂಬಿಕೆಗಳನ್ನೂ ಅಕ್ಷರಶಃ ಒಪ್ಪಿಕೊಂಡ, ಯಾವುದನ್ನೂ ಪ್ರಶ್ನಿಸಬಹುದೆಂಬ ಅರಿವಿಲ್ಲದ ಗರತಿ. ಆತನಿಗೆ ತೆರೆದ ಕಿಡಕಿಯಲ್ಲಿ ನುಗ್ಗಿದ ಬೆಳಕಿನಲ್ಲಿ 'ಮೊದಲು ಕಂಡದ್ದು ಕೊಲ್ಲಾರ ಜೋಯಿಸರ ಅಂತ್ರ' 'ಕಣ್ಣಾ ಪಂಡಿತರ ಅಂತ್ರ' 'ದೇವರು ದಿಂಡರಿಗೆ ಹೇಳಿಕೊಂಡು ಕಾಣಿಕೆ ಕೊಟ್ಟದ್ದು'; ಇದಕ್ಕೆ ಆತನ ಪ್ರತಿಕ್ರಿಯೆ "—ಸರಸರನೆ ತೆಂಗಿನಕಾಯಿ, ಅಂತ್ರ, ಕಾಣಿಕೆಗಳನ್ನೆಲ್ಲ ಕಿತ್ತು ಕಸದ ಮೂಲೆಗೆ ಎಸೆದು ಬಿಟ್ಟದ್ದು." "ಅಯ್ಯೋ" ಎಂದು ತಡೆಯಲು ಎದ್ದುನಿಂತ ಬಾಣಂತಿ ಅವನ ಕೈಯ ನೂಕಿಗೆ ಹಾಸಿಗೆಯಮೇಲೆ ಕುಸಿದು ಬಿಕ್ಕಿ ಬಿಕ್ಕಿ ಅಳತೊಡಗುವಳು!

ಸ್ವಲ್ಪ ಹೊತ್ತಿನಲ್ಲೆ ದೇವಯ್ಯ ಮಂಚದ ಮೇಲೆ ಪವಡಿಸುತ್ತಾನೆ. ಅವನನ್ನು ಕಣ್ಣೆತ್ತಿಯೂ ನೋಡದೆ, ನಡೆದ ಗದ್ದಲದಲ್ಲಿಯೂ ಎಚ್ಚರಗೊಳ್ಳದಿದ್ದ, ಸುಖನಿದ್ರಾ ರಸದಲ್ಲಿ ಸಕ್ಕರೆಯಾಗಿದ್ದ ಮುದ್ದು ಮಗು ಚೆಲುವಯ್ಯನನ್ನು ನೋಡುತ್ತ—ಹೊರಗೆ ಚೆಲ್ಲಿದವನ್ನೆಲ್ಲ ಒಳಗಿಟ್ಟು, ಕ್ಷಣದ ಹಿಂದೆ ಆದುದನ್ನು ನೆನೆದು ಮಗುವಿಗೆ ಶುಭ ಹಾರೈಸುತ್ತ ಕುಳಿತುಕೊಳ್ಳುವಳು. ದೇವಯ್ಯ ದೇವಮ್ಮನೆಡೆಗೆ ನೋಡಿ "ಮಲ್ಕೊಳ್ಳೋದಿಲ್ಲೇನೆ?" ಎಂದು ಕೇಳಿದಾಗ 'ತುಸು ತಿರುಗಿ ತಲೆಬಾಗಿದಳು, ಮಲಗಲಿಲ್ಲ' ಅವಳು!

ತೊಟ್ಟಿಲಲ್ಲಿ ಬಾಹ್ಯಜಗತ್ತಿನ ಅರಿವಿಲ್ಲದ ಪ್ರೇಮದ ಮುದ್ದೆ ಒಂದೆಡೆ, ಪ್ರೇಮ ಮಯ ಮೌನಕಾಸಾರದಲ್ಲಿ ಅದ್ದಿದ ಪತ್ನಿ ಇನ್ನೊಂದೆಡೆ! ತನ್ನ ಇರುವಿಕೆಯ ರೀತಿ ಹೊಂದಿಕೆ ಅಲ್ಲದ್ದು ಎನ್ನಿಸುತ್ತದೆ ದೇವಯ್ಯನಿಗೆ. "ಏನು ಬಿಸಿಲ ಝಳ ಹೆಚ್ಚಾಯಿತೆ?....' "ತಾನೆ ಸ್ವಲ್ಪಹೊತ್ತಿಗೆ ತೆಗೆದಿದ್ದ ಗವಾಕ್ಷದ ರೆಕ್ಕೆಗಳನ್ನು ಮುಚ್ಚಿದನು. ಕೋಣೆಯಲ್ಲಿ ಮೊದಲು ಇದ್ದಂತಹ ಕರ್ವೆಳಗು ಕವಿದು ಕಣ್ಣಿಗೆ ಹಿತವಾಯಿತು".

"ಇನ್ನೆಷ್ಟು ದಿವಸ ನೆಲದವ್ಯಾಲೆ ಹಾಸಿಗೆ?" "... ಮುಖಕ್ಕೆ ನಸುಗೆಂಪೇರಿ ತುಟಿಯ ತುದಿಗಳಲ್ಲಿ ಕಿರುನಗೆಯ ಮೊಗ್ಗೆ ಮಲರುತ್ತಿದ್ದುದು.... ನಾಚಿ 'ಚೆಲುವಯ್ಯನ' ತಾಯಿ ಮೊಗದಿರುಹಿದಳು." ಅದು ಇದೂ ಮಾತು. ಗಂಡನ ಒತ್ತಾಯ ಹೆಚ್ಚಾಗಲು ಗಣಪತಿ ದೇವಸ್ಥಾನದ ಮಾತು ತೆಗೆದು ಅದೂ ಪ್ರಯೋಜನಕ್ಕೆ ಬಾರದೆ "ನನ್ನ ಬಟ್ಟೆ ಕೊಳಕಾಗದೆ—" ಎಂದು ತನ್ನ ಇರುವಿಕೆಗೆ ಸಂಕೋಚಪಟ್ಟುಕೊಳ್ಳುವ ದೇವಮ್ಮನಿಗೆ 'ಕರ್ವೆಳಗಲ್ಲಿ' ಕುಳಿತಿದ್ದ ದೇವಯ್ಯ "ಆದರೆ ಆಗಲಿ, ಬಾ" ಎನ್ನುವನು. ಅವನು ಈಗಾಗಲೆ ತನ್ನತನಕ್ಕೆ ತಿರುಗಿ ಉಪದೇಶಿಯ ಮಗಳ ಉಡಿಗೆ ತೊಡಿಗೆಯ ಗುಣಾಧಿಕ್ಯವನ್ನೆಲ್ಲ ಮರೆತುಬಿಟ್ಟಿದ್ದಾನೆ.

ದೇವಯ್ಯಗೌಡ ಉಪದೇಶಿಗೆ ಕಿವಿಗೊಟ್ಟ, ಬದಲಾಗ ಬಯಸಿದ. ಉಪದೇಶ 'ಬಿಸಿಲ ಝಳದಲ್ಲಿ' ಆ ಮಲೆಯ ಮಗನನ್ನು ತಂದು ನಿಲ್ಲಿಸಿ, ಹೊಂದಿಕೊಳ್ಳಲಾರದೆ ಕರ್ವೆಳಗಿಗೇ ತಿರುಗಿದ. ಕರ್ವೆಳಗಿದ್ದ ಕೋಣೆ ಕರ್ವೆಳಗಿನಲ್ಲಿಯೆ ನಿಂದಿತು.

ಭರಮೈಹೆಗ್ಗಡೆ ಚಿನ್ನಮ್ಮನನ್ನು ಲಗ್ನವಾಗುವ ವಿಚಾರದಲ್ಲಿ ಮುಳುಗಿ, ಹೆಂಡತಿ ಜಟ್ಟಮ್ಮ 'ಹಾರಹೊಡೆದು ಹೋಗಿದ್ದ ಬಾಗಿಲಲ್ಲಿ' ಎದ್ದು ಹೊರ ಬಂದವನು ಅನರ್ಥ ಪರಂಪರೆಗೂ, ಅವಮರ‍್ಯಾದೆಗೂ ಗುರಿಯಾಗುತ್ತಾನೆ. ಹಾರ ಹೊಡೆದಿದ್ದ ಬಾಗಿಲು ಮುಚ್ಚುವುದೂ ಇಲ್ಲ, ಅವನ ಆಶೆ ಈಡೇರುವುದೂ ಇಲ್ಲ.

ಕಾವೇರಿಯ ವಿಷಯ ಮತ್ತೂ ದುರಂತಮಯ. ತಾನು ಕಳೆದುಕೊಂಡಿದ್ದ ಉಂಗುರವನ್ನು "ಅಷ್ಟು ಚೆಂದಾಗಿರೋದನ್ನ ನಾನೆಲ್ಲು ನೋಡಿಲ್ಲೋ ಚೀಂಕ್ರಾ!" ಎಂದು ಉದ್ಗಾರ ತೆಗೆದಿದ್ದ ಪುಡಿಸಾಬಿಯ ಕೈಯಿಂದ ಪಡೆಯಲು 'ಮಳೆಗಾಲದ ಚಳಿಗಾಳಿ ಸುಯ್ಯನೆ ಬೀಸುತ್ತಿರುವಾಗ' "ಬೇಗಬೇಗನೆ ಬಾಗಿಲು ಹಾಕಿಕೊಂಡು

ಹೊರಗಿನ ಜಿಲಕವಿಕ್ಕಿ " ಹೋದವಳು ಬಾಗಿಲ ಹೊರಗೇ ಆಗಿ ಬಾವಿಯ ಅಂತ ರಾಳವನ್ನು ಕಚ್ಚುತ್ತಾಳೆ. ಇಲ್ಲಿ ಒಳಗೂ ಕತ್ತಲೆ, ಹೊರಗೂ ಕತ್ತಲೆ! ಬೆಳಕೋ ಕಮಟುವಾಸನೆಯ ಬೀಡಿಯದು.

ಇಲ್ಲೆಲ್ಲ ಬಾಗಿಲು ನಿತ್ಯ ಮುಚ್ಚಿತೆರೆವ ಬಾಗಿಲೆ, ಅದಕ್ಕೆ ಸಮಯ ಮತ್ತು ಆ ಪಾತ್ರಗಳು ಬೆಳೆದುಬಂದ ಸನ್ನಿವೇಶ ವಿಶಿಷ್ಟ ಅರ್ಥಪರಂಪರೆಯನ್ನು ಒದಗಿಸು ತ್ತದೆ.

## ಸ್ವಪ್ನ–ಭವಿಷ್ಯ

ಚಿನ್ನಮ್ಮ ದೆವ್ವಭೂತಗಳ ಕತೆಯನ್ನೂ, ರಾಮಾಯಣ ಮಹಾಭಾರತ ಕತೆಯನ್ನೂ, ಗಡ್ಡದಯ್ಯನ ಮಹಿಮೆಯನ್ನೂ, ದೊಡ್ಡಣ್ಣ ರಂಗಮ್ಮರ ಅವಿ ಸ್ಮರಣೀಯ ವಾರ್ತೆಯನ್ನೂ ಕೇಳಿದ್ದವಳು. ತಾಯಿಸತ್ತು ಅಜ್ಜಿ ಸಾಕಿದ ಇವಳು ತಂದೆಗಿಂತಲೂ ಅಜ್ಜಿಯಲ್ಲಿ ಮಮತೆ ಬೇರುಬಿಟ್ಟದ್ದವಳು. ಈಗ ನಾಗಕ್ಕನ ನೆರವಿನಿಂದ ಮದುವೆಯಾಗುವ ಗಂಡಿನೊಂದಿಗೆ ಕಾಯಿಲೆ ಮಲಗಿದ ಅಪ್ಪನನ್ನೂ, ಬಂಧುಬಳಗವನ್ನೂ ಬಿಟ್ಟು ಮನೆಯಿಂದ ಓಡಿಬಂದು ಹುಲೀಕಲ್ಲು ನೆತ್ತಿಯಲ್ಲಿ ಮಲಗಿದ್ದಾಳೆ. ಅವಳ ಕನಸು: "........ಅಜ್ಜಿ ಅಳುತ್ತಾ ಕುಳಿತಿದ್ದಾಳೆ.... ....ನಾಗಕ್ಕ ಎಲ್ಲಿಯೂ ಕಾಣಿಸುತ್ತಿಲ್ಲ!....ಆದರೆ ಅಪ್ಪಯ್ಯ........ಕುಂಟನ ಹುಣ್ಣಿಲ್ಲ, ಸಂಪೂರ್ಣ ಆರೋಗ್ಯದಿಂದಿದ್ದಾರೆ, ಅಜ್ಜಿಯನ್ನು ಮುಚ್ಚಿರುವ ಆ ಸೌದೆರಾಶಿಗೆ ಬೆಂಕಿಯನ್ನಿಟ್ಟರು! ಓ............".

ಸಂಪೂರ್ಣ ಆರೋಗ್ಯವಂತರಾದ ವೆಂಕಟಪ್ಪಗೌಡರು ಕನಸಿನಲ್ಲಿ ಕಂಡರು— ಅವರು ಭವರೋಗದಿಂದ ಮುಕ್ತರಾದುದು ಎಷ್ಟು ಸೂಚ್ಯವಾಗಿ, ಕಲಾತ್ಮಕವಾಗಿ, ವಿರೋಧಾಭಾಸಗಳ ಮಧ್ಯ ವ್ಯಕ್ತವಾಗಿದೆ ಎಂಬುದನ್ನು ಗಮನಿಸಬೇಕು. ವ್ಯಕ್ತಿಗಳ ಅಂತಃ ಸಂಸ್ಕಾರಗಳೂ ಈ ಸ್ವಪ್ನಗಳ ಹಿನ್ನೆಲೆಯಲ್ಲಿ ಕೆಲಸಮಾಡುತ್ತವೆ; ಅವರು ಕಾಣುವ ಕನಸು ಅದನ್ನೇ ಅವಲಂಬಿಸಿರುವುದು.

ತಿಮ್ಮ ಎಚ್ಚರವಿದ್ದಾಗಲೆ ಕಾಣುವ ಕುದುರೇಸವಾರ, ಕಾವೇರಿ ಕನಸಿನಲ್ಲಿ ಕಾಣುವ ಭ್ರಾಮಕ ಚಿತ್ರಗಳು, ಆಗಲೆ ಇಲಿ ಕತ್ತರಿಯಲ್ಲಿ ಸಿಕ್ಕಿ ಸಾಯುವುದು, ಸುಬ್ಬಣ್ಣಹೆಗ್ಗಡೆಯ ಸ್ವಪ್ನ ಇವೆಲ್ಲ ಆ ಸನ್ನಿವೇಶಗಳ ಮಧ್ಯ ಅರ್ಥಪೂರ್ಣವಾದವು, ಕಾದಂಬರಿಯ ಕ್ರಿಯೆ ಮುಂದರಿದಂತೆಲ್ಲ ಅರ್ಥಶಕ್ತಿಯಿಂದ ಮೈತುಂಬಿಕೊಳ್ಳುವವು.

## ಸವಾಲು–ಉತ್ತರ

ಹುಲೀಕಲ್ಲುಮಲೆಯ ನೆತ್ತಿ. ಘೋರಾರಣ್ಯ ಬಿರಿಯುವ ಹಾಗೆ ವ್ಯಾಘ್ರ ಗರ್ಜಿಸುವ ಸ್ಥಾನ. ಅದನ್ನು ಹತ್ತಿಳಿಯುವುದು ಮಲೆಯ ಜನಕ್ಕೆ ಒಂದು ಸವಾಲು. ಯಾವ ಗಂಡೂ ತಾನು ಏರಿಲ್ಲ, ಏರಲಾರೆ ಎನ್ನಲು ನಾಚುತ್ತಾನೆ ಅದನ್ನ.

ಸುಬ್ಬಣ್ಣಹೆಗ್ಗಡೆಯಂತಹ ಮುಪ್ಪಿನ ಮುದುಕನೂ "ಹುಲೀಕಲ್‌ನೆತ್ತಿ ಎಷ್ಟು ಎತ್ತರ ಆಗ್ಯಾದೆ? ನೋಡಾನ ಬನ್ನಿ!" ಎಂದು ಅದನ್ನೇರಿ, ಅಲ್ಲಿ ನಿಂತು ತನ್ನ ಬಾಲ್ಯದ ದಿನಗಳ ನೆನಪನ್ನು ಅಲ್ಲಿರುವ ಮುಸೆಗಲ್ಲಿನಲ್ಲಿ ಉಜ್ಜಿ ಹೊಸ ಉಲ್ಲಾಸವನ್ನು ಪಡೆಯುತ್ತಾನೆ—ಕೈನೀಡಲು ಬಂದ ಅಯ್ಯನವರನ್ನು ನಿರಾಕರಿಸುವಷ್ಟು.

ಕಾಡಿನ ಜೀವವಾಗಿದ್ದ ಗುತ್ತಿಗೂ ಹುಲೀಕಲ್ಲು ಎಂದರೆ ಭಯ. ಊರೆಲ್ಲ ತಿರುಗುವ ನಾಗತ್ತೆ, ನಾಗಕ್ಕರಿಗೂ ಗುತ್ತಿಯಂತಹ ಆಳು ಸಂಗಡವಿರಲಿ ಎನ್ನಿಸುತ್ತದೆ, ಅಲ್ಲಿ ಹಾದುಹೋಗುವಾಗ. ಐತ, ಪೀಂಚಲು, ಗುತ್ತಿ, ತಿಮ್ಮಿ, ಚಿನ್ನಮ್ಮ, ಮುಕುಂದಯ್ಯ ಇವರೆಲ್ಲಿ ಇಲ್ಲಿ ತಂಗಿದ್ದಾರೆ—ತಮ್ಮ ತಮ್ಮ ಕಾರ್ಯದ್ವಾರದಲ್ಲಿ ಮುಂದರಿದಿದ್ದಾರೆ.

ತಿಮ್ಮಿಯನ್ನು ಹಾರಿಸಿಕೊಂಡು ಬಂದ ಗುತ್ತಿ ಹುಲೀಕಲ್ಲು ನೆತ್ತಿಯನ್ನು ಮೆಟ್ಟುತ್ತಿದ್ದಂತೆ ಒಂದು ಭಯಂಕರ ಪರೀಕ್ಷೆಗೆ ಗುರಿಯಾಗುತ್ತಾನೆ. ಶ್ರೀರಾಮಚಂದ್ರ ಸೀತಾಲಕ್ಷ್ಮಣರೊಂದಿಗೆ ಕಾನನದಲ್ಲಿರುವಾಗ ಮುತ್ತಿದ ಸಹಸ್ರಾರು ದಾನವರೊಡನೆ—ಸಹಚರಿಯನ್ನು ಗುಹೆಯಲ್ಲಿ ನಿಲ್ಲಿಸಿ—ಏಕಾಕಿಯಾಗಿ ಹೋರಾಡಿದನೆಂಬ ಮಾತು ನೆನಪಾಗುವಂತಹದು. ಓರ್ವ ಸ್ತ್ರೀ ತನ್ನ ಅನುರಕ್ತಿಯಿಂದ ಪುರುಷನೋರ್ವನ ಜೀವಶಕ್ತಿಯನ್ನು ಉಜ್ವಲಗೊಳಿಸಿದಾಗ ಆತನ ಸತ್ವ ಎಷ್ಟು ಸ್ಥಿರವಾಗಿರುತ್ತದೆ ಎಂಬುದರ ಉಜ್ವಲ ರಮಣೀಯ ಸನ್ನಿವೇಶವಿದು.

ತಂದೆತಾಯಿ, ಬೆಳೆದ ಹಳ್ಳಿ ಇವನ್ನೆಲ್ಲ ಬಿಟ್ಟು ಕಾಡಕತ್ತಲಲ್ಲಿ ಮಿಣುಕುಸೂಡಿ ಹಿಡಿದ ಗಂಡಿನೊಂದಿಗೆ ಏಕಾಕಿಯಾಗಿ ಬಂದ ತಿಮ್ಮಿ ಹುಲಿಯ ಭಯಂಕರ ಆರ್ಭಟೆಗೆ ಹೆದರಿ ಮಾಂಸದ ಮುದ್ದೆಯಾಗಿಹೋಗಿದ್ದಳು. ಗುತ್ತಿ ಅಲಾತ ಚಕ್ರದಂತೆ ಬೆಂಕಿಗರಿ ಎಳೆಯುತ್ತ ಹಿಂಬದಿಯ ವೃಕ್ಷ ರಕ್ಷೆಯಾಗಿ ನಿಲ್ಲುತ್ತಾನೆ.

ಆ ಭೀಮ ಗರ್ಜನೆಗೆ "ದೊಡ್ಡ ಹಿಂಡು ನುಗ್ಗಿ ಧಾವಿಸಿ ಬರುತ್ತಿದ್ದ ಮಹಾ ಸದ್ದು,........ಅಲ್ಲಿಯೇ ಸಿಡಿಲು ಬಿದ್ದಿದ್ದರೆ ಆಗಬಹುದಾಗಿದ್ದ ಅನುಭವ............ ಭಯಂಕರ ರಾವದ ಇದಿರು ನಾಯಿಯ ಬೊಗಳು ನಗಣ್ಯ ನಾಣ್ಯವಾಗಿ ಬಿಟ್ಟಿತ್ತು."

ಆ ಮಹಾಸದ್ದು ಹತ್ತಿರ ಹತ್ತಿರ ಬಂದಂತೆ ಇವರ ಕರ್ಣೇಂದ್ರಿಯ ಮೂರ್ಛೆ ಹೋಗಿತ್ತು. "ಹುಲಿಯನ ನಾಲಿಗೆ ಅದರ ಗಂಟಲಲ್ಲಿ ಹುದುಗಿ ಮೌನವಾಗಿತ್ತು."

ಇದು ನಡೆದ ಸ್ವಲ್ಪ ಹೊತ್ತಿನಲ್ಲಿಯೇ ಕಾಡು ಅಸ್ವಾಭಾವಿಕ ಎನ್ನುವಷ್ಟು ಶಾಂತವಾಗಿಬಿಡುತ್ತದೆ. ಗುತ್ತಿ ಆಗ ತನ್ನ ಬಿಗಿದ ನರವನ್ನು ಸರಿಮಾಡಿಕೊಂಡು ಮೂರ್ಛೆ ಹೋದಂತಿದ್ದ ತಿಮ್ಮಿಯನ್ನು ಎಚ್ಚರಿಸಿ ಮುಂದೆ ಕರೆತರುತ್ತಾನೆ. ಅಲ್ಲೆ ಇರುಳುಕಳೆದು ಬೆಳಗಿನ ಉದಯ ಸೌಂದರ್ಯದಲ್ಲಿ ತಿಮ್ಮಿಯೊಡನೆ ಪಾಲುದಾರ ನಾಗುತ್ತಾನೆ.

ಹಗಲೆಲ್ಲ ಉಪವಾಸ, ಭವಿಷ್ಯದ ವಿಷಯದಲ್ಲಿ ಚಿಂತಿಸಿದಷ್ಟೂ ಗಹನವೆನ್ನಿಸುತ್ತಿದ್ದ ಸಮಸ್ಯೆ, ಮತ್ತೆ ಅಖಂಡ ಮಳೆ, ತಂಪೆಯ ರೋಗಾಧಿಕ್ಯ—ಇಂತಹ ಸನ್ನಿ

ವೇಶದಲ್ಲಿಯೆ ಮದುಮಗಳಾಗಿದ್ದ ಚಿನ್ನಮ್ಮ ಮನೆ ಬಿಟ್ಟಿದ್ದಳು—ಅವಳ ಸಂಗಡ ಇದ್ದವಳು ಬಸುರಿ ಪೀಂಚಲು. ಬೆಳಕಿಲ್ಲದ ಕಾಲುದಾರಿ, ದನಗೋಳ ಮಳೆ. ಇಬ್ಬರೂ ಕಾಡಿನಲ್ಲಿ ಸಾಗುತ್ತಾರೆ. ಹೋಗಬೇಕಾದದ್ದು ಹುಲಿಕಲ್ಲು ನೆತ್ತಿಗೇ. ಮುಕುಂದಯ್ಯ ಮಧ್ಯ ಸಿಗುತ್ತಾನೆ. ಚಿನ್ನಮ್ಮ ಅವನ ಕಂಬಳಿ ಸೇರುವಳು. ಹುಲಿಕಲ್ಲು ನೆತ್ತಿ ಏರಿ ಅಲ್ಲಿ ಅವರು ರಾತ್ರಿ ಕಳೆಯುವರು. ಅಲ್ಲೇ ಚಿನ್ನಮ್ಮ ಕನಸು ಕಂಡದ್ದು. ಗುತ್ತಿ–ತಿಮ್ಮಿ, ಐತ–ಪೀಂಚಲು, ಮುಕುಂದಯ್ಯ–ಚಿನ್ನಮ್ಮ ಈ ಮೂರು ಜೊತೆ ಕಂಡ ಬೆಳಗೂ ಬೇರೆ–ಬೇರೆಯೇ. ಆ ಬೆಳಗು ಆ ಮೂರು ಜೊತೆಗೂ ಭವಿಷ್ಯದ ದ್ವಾರ ತೆರೆದಿತ್ತು. ತಿಮ್ಮಪ್ಪಹೆಗ್ಗಡೆ ವೆಂಕಟಪ್ಪಗೌಡ ಸತ್ತ ಸುದ್ದಿಯನ್ನೂ ಮುಕುಂದಯ್ಯ–ಚಿನ್ನಮ್ಮರ ಲಗ್ನ ನೆರವೇರುವ ಭರವಸೆಯನ್ನೂ ಅಲ್ಲಿಗೇ ತಂದಿರುತ್ತಾನೆ—ಬೆಳಗು. ಐತ ಮತ್ತು ಪೀಂಚಲು ತಾವಿನ್ನು ಎಲ್ಲಿ ಇರಬೇಕು, ಯಾರ ಒಡೆತನದಲ್ಲಿ ಬಾಳಬೇಕು ಎಂಬುದನ್ನು ಅಲ್ಲಿಯೇ ನಿಶ್ಚಯಿಸುವುದು. ಹಾಗೆ ಗುತ್ತಿಯೂ ಸ್ವಲ್ಪದಿನಗಳ ಸಲುವಾಗಿಯಾದರೂ ತಿಮ್ಮಿಯೊಂದಿಗೆ ಊರುಬಿಡುವ ವಿಚಾರಮಾಡುವುದೂ ಅಲ್ಲೆ.

ಹುಲಿಕಲ್ಲುನೆತ್ತಿ ಮಲೆಯ ಉತ್ತುಂಗ ಗಹನ ಪ್ರದೇಶ ಮಾತ್ರವೊಂದೇ ಅಲ್ಲ, ಅದು ಮಲೆಯ ಜೀವನಶಾಲೆಯ ಮುಕ್ತ ಅಧ್ಯಕ್ಷಪೀಠವೂ ಹೌದು. ಆದರಿಂದಲೆ ಅಲ್ಲಿ ಪಡೆದ ಜಯ ಬಾಳಬೆಳಗಿನ ಉತ್ತರವೂ ಆಗುತ್ತದೆ; ರಕ್ಷೆಯೂ ಆಗುತ್ತದೆ.

ರಾಮಚಂದ್ರ

## ನಕ್ಷತ್ರ

ಕಂಡಕಂಡವರಿಗೆಲ್ಲ ಕಣ್ಣು ಹೊಡೆಯುವ
ಇವರಿಗೇನು ಮಾಡಬೇಕು ?
ನೀಲಿಮೆಯ ಮೇಲೆ ನಗುನಗುತಲಿರುವ
ಈ ಸೂಳೆಯರಿಗೆ ತಕ್ಕ ಶಾಸ್ತಿಯಾಗಬೇಕು !
ಇಷ್ಟು ಪಬ್ಲಿಕ್ಕಾಗಿ ; ಬಿಳಿಯ ಹಣ್ಣು ಹಾಗಲವಾಗಿ
ಕಂಡಕಂಡವರ ಲಪಟಾಯಿಸ ಬಯಸುವ
ಈ ರಂಡೆಯರಿಗೇನು ಮಾಡಬೇಕು ?
ಈ ನ್ಯಾಯ ಹೈಕೋರ್ಟಿನಲ್ಲೆ
ತೀರ್ಮಾನವಾಗಬೇಕು !
ಛೆ ! ಅಬಲೆಯರು ;
ಶುದ್ಧ ಅವಿವೇಕಿ ನಾನು.
ಉಂಟೆ !
ಇಂಥ ಶೃಂಗಾರಿಯರ ಮೇಲೆ
ದಾವಾ ಹಾಕಿ
ಕೋರ್ಟಿನಲಿ, ಜೊತೆಯಲ್ಲಿ
ನಿಲ್ಲುವುದೆ
ಒಂದು ತರಹ ಶೋಕಿ !

## ಗುಲಾಬ್‌ದಾಸ್ ಬ್ರೋಕರ್

# ಟಾಂಗಾವಾಲಾ

ಆರೋಗ ದೃಢಕಾಯ, ಗುಂಗುರು ಮೀಸೆಯಿಂದಾಗಿ ಕೊಂಚ ಒರಟಾಗಿ ಕಾಣುವ ಮುಖ, ಪೈಜಾಮ, ವೇಸ್ಟ್‌ಕೋಟು, ತಲೆಯ ಮೇಲೊಂದು ಪೇಟ. ಕೈಯಲ್ಲಿ ಒಂದು ಉದ್ದನೆಯ ಚಾವಟಿ, ಎತ್ತಿದ ಕತ್ತು, ಮಾನವೀಯ ಗಡಸು ಧ್ವನಿ ನೋಡಿದ ಕೂಡಲೆ ಅವನು ತನ್ನ ಇತರ ವೃತ್ತಿಬಾಂಧವರಿಂದ ಬೇರೆಯಾಗಿ ಕಂಡನಾದ್ದರಿಂದ ನಾನು ಅವನ ಟಾಂಗದಲ್ಲಿಯೆ ಹೋಗಲು ತೀರ್ಮಾನಿಸಿದೆ. ನಾನು ಅಂದುಕೊಂಡುದಕ್ಕೆ ಸಾಕ್ಷಿ ದೊರೆಯಲು ಬಹಳ ಕಾಲ ಬೇಕಾಗಲಿಲ್ಲ. ಗಾಡಿ ರಸ್ತೆಗಿಳಿಯುತ್ತಿದ್ದಂತೆಯೆ ನಾನು ಕೇಳಿದೆ :

"ಟಾಂಗವಾಲ, ನೀನು ಹಿಂದುವೊ? ಮುಸ್ಲಿಮನೊ?"

"ನೀವು ಯಾವುದೆಂದು ಊಹಿಸುತ್ತೀರಿ"? ನಗುತ್ತಾ ಮರುಪ್ರಶ್ನೆ.

"ನನಗೆ ಹೇಗೆ ಗೊತ್ತಾಗುತ್ತದೆ? ರಾವಲ್ಪಿಂಡಿಯಲ್ಲಿ ಬಹುಸಂಖ್ಯಾತರು ಮುಸ್ಲಿಮರು ಅಲ್ಲವೆ?"

"ನಿಮ್ಮ ಊಹೆ ಸರಿಯಲ್ಲ. ಇಲ್ಲಿ ನಾವಿರುವುದು ಎರಡೇ ಜಾತಿ–ಬಡವರು ಮತ್ತು ಬಲ್ಲಿದರು. ಹಿಂದುವೂ ಅಲ್ಲ, ಮುಸ್ಲಿಮರೂ ಅಲ್ಲ."

"ಆದರೆ ನೀನು ಯಾವಜಾತಿಗೆ ಸೇರಿದವನು?"

"ಬಡವರ ಜಾತಿ" ಎಂದು ನಕ್ಕು ಕುದುರೆಯ ಬೆನ್ನಮೇಲೆ ಚಾವಟಿ ಆಡಿಸಿ ನಪ್ಪುರಿದ.

ನಾನು ಸ್ವಲ್ಪ ಹೊತ್ತು ಮೌನವಾಗಿದ್ದೆ. "ಟಾಂಗವಾಲ, ನಿನ್ನ ಹೆಸರೇನು?" ನನ್ನ ಪ್ರಶ್ನೆ.

"ಗುಲಾಮುದ್ದೀನ್" ನಗುತ್ತಾ ಹೇಳಿದ.

"ಈ ಪ್ರಶ್ನೆ ನಾನು ಯಾವ ಜಾತಿಗೆ ಸೇರಿದವನೆಂದು ಕಂಡುಹಿಡಿಯಲು ತುಂಬಾ ಸಹಾಯಕ."

ನಾನು ನಕ್ಕು ಆರಂಭಿಸಿದೆ, "ಇಲ್ಲಿ ಆಗಾಗ ಗಲಭೆಗಳು ನಡೆಯುತ್ತಿರುತ್ತವೆಯೇನು?"

"ಆಗಾಗ ಕಾಲ ಬಂದಾಗ ನಡೆಯುತ್ತಿರುತ್ತವೆ."

"ನೀನು ಎಂದಾದರೂ ಗಲಭೆಯಲ್ಲಿ ಸೇರಿದ್ದೆಯೇನು ? "

"ನಾನೇಕೆ ಸೇರಲಿ ? "

ಮತ್ತೆ ನಾವು ಮೌನವಾದೆವು. ಅನಂತರ ಅವನೇ ಕೇಳಿದ.

"ಕಾಶ್ಮೀರದ ಕಡೆಗೆ ಹೋಗುತ್ತಿದ್ದೀರಾ ಸೇಠ್ ಸಾಹೇಬ್ ? "

"ಹೌದು. ನೀನು ಕಾಶ್ಮೀರಾ ನೋಡಿದ್ದೀಯೇನು ?"

"ಓ. ಹೌದು. ಒಂದು ಸಾರಿ."

ಟಾಂಗಾದಲ್ಲಿದ್ದ ನಮ್ಮೆಲ್ಲರ ದೃಷ್ಟಿಯೂ ಅವನಲ್ಲೆ ಕೇಂದ್ರೀಕೃತವಾಗಿದ್ದುವು.

"ಹೇಗಿದೆ ಕಾಶ್ಮೀರ ? ಬಹಳ ಸುಂದರವಾಗಿದೆಯೆ ? " ಎಂದೆ ನಾನು. "ಬಹಳ ಸುಂದರವಾಗಿದೆ. ಬಹುಶಃ ಜಗತ್ತಿನಲ್ಲೆ ಕಾಶ್ಮೀರದಂಥ ಸುಂದರವಾದ ಸ್ಥಳವಿಲ್ಲ ಎಂದುಕೊಂಡಿದ್ದೇನೆ." ಎರಡು ಮೂರು ನಿಮಿಷಗಳ ಕಾಲ ಆತ ಕಾಶ್ಮೀರದ ಸುಂದರವಾದ ಉದ್ಯಾನವನಗಳು, ಅದರ ನದಿಗಳು. ಚಿಲುಮೆಗಳು, ಮತ್ತು ಹಿಮಾವೃತಪರ್ವತ ಶಿಖರಗಳನ್ನು ಕುರಿತು ಮಾತನಾಡಿದ. "ಕಾಶ್ಮೀರದ ಹೆಂಗಸರು....ಅವರು ಅತ್ಯಂತ ಸುಂದರಿಯರು, ಸ್ವರ್ಗದ ರಂಭೆ, ಊರ್ವಶಿಯ ರಂತೆ" ಎಂದು ಹೇಳುವಾಗ ಅವನ ಧ್ವನಿ ಉತ್ಸಾಹದ ಚಿಲುಮೆಯಾಗಿತ್ತು. ಅನಂತರ ಅವನು ನಿಡುಸುಯ್ದ : "ಆದರೆ....ಅಲ್ಲಿನ ಬಡತನ ಬಹಳ ಘೋರ."

ಆತ ತನ್ನ ದೃಷ್ಟಿಯನ್ನು ರಸ್ತೆಯಮೇಲೆ ಹರಿಸುವುದನ್ನು ನಿಲ್ಲಿಸಿದ. ಅದು ಯಾವುದೋ ಒಂದು ಕಡೆ ಕೇಂದ್ರೀಕೃತವಾದಂತಿತ್ತು. ನನ್ನ ದೃಷ್ಟಿಯೂ ಅತ್ತಲೇ ಹರಿಯಿತು. ಸ್ವಲ್ಪ ದೂರದಲ್ಲಿ ಒಬ್ಬ ಹೆಂಗಸು ರಸ್ತೆಯ ಪಕ್ಕದಲ್ಲಿ ನಡೆದು ಹೋಗುತ್ತಿದ್ದಳು. ನಡೆಯುತ್ತಿದ್ದ ಆಕೆಯ ಹಿಂಭಾಗ ಮಾತ್ರ ಕಾಣುತ್ತಿತ್ತಾದರೂ, ಅವಳ ನಡೆಯಲ್ಲಿದ್ದ ಲಯದ ಸೊಗಸು ಆಕೆಯಿಂದ ಕಣ್ಣು ತಿರುಗಿಸದಂತೆ ಯಾರ ನ್ನಾದರೂ ಸೆರೆ ಹಿಡಿಯುವಂತಿತ್ತು. ಸಿಲ್ಕಿನ ಪಾಯಜಾಮ, ಮೇಲೆ ಒಂದು ಅಚ್ಚ ಬಿಳಿಯ ಶರಟು. ಭುಜದ ಎರಡೂ ಪಕ್ಕದಿಂದ ಎದೆಯಮೇಲಿಳಿದು ಹಾರಾಡುತ್ತಿದ್ದ ದುಪಟ್ಟ, ಅವಳ ಆ ಮಂದನಡೆ ಆ ಟಾರು ರಸ್ತೆಯಲ್ಲಿ ಇದ್ದಕ್ಕಿದ್ದಂತೆ ಒಂದು ಸೌಂದರ್ಯ ಮೂರ್ತಿ ಮೈವೆತ್ತಿತೊ ಎಂಬಂತೆ ತೋರುತಿತ್ತು.

ಒಂದೇ ನಿಮಿಷದಲ್ಲಿ ನಮ್ಮ ಟಾಂಗ ಆಕೆಯನ್ನು ಹಿಂದೆ ಹಾಕಿತು. ತನ್ನ ಬಲಗೈಯಿಂದ ಲಗಾಮನ್ನು ಎಡಗೈಗೆ ಬದಲಾಯಿಸಿ ಗುಲಾಮುದ್ದೀನ್ ಬಲಗೈ ಯನ್ನು ಕೆಳಕ್ಕೂ ಮೇಲಕ್ಕೂ ಆಡಿಸಿ ಅತ್ಯಂತ ಮೃದುವಾದ ಧ್ವನಿಯಲ್ಲಿ ಹೇಳಿದ, "ಸಲಾಮಲೇಕುಂ"

"ಸಲಾಮಲೇಕುಂ"–ಆಕೆಯ ಮಧುರ ಕಂಠ ಹಾಡಿದಂತಾಯ್ತು.

ನಾವು ಮುಂದೆ ಹೋದೆವು. ಮತ್ತೆ ರಾವಲ್ಪಿಂಡಿಯ ಕೊಳಕು ರಸ್ತೆಗಳು ನಿರ್ವರ್ಣವಾದುವು. ನನ್ನ ದೃಷ್ಟಿ ಕೆಲವೇ ಸೆಕೆಂಡುಗಳ ಕಾಲ ಅವಳನ್ನು ಕಂಡಿ

ತಾದರೂ, ಆ ಕ್ಷಣದಲ್ಲಿ ಅವಳ ಗುಲಾಬಿ ಕೆನ್ನೆಗಳು, ಮಾಟವಾದ ದೇಹ, ಅವಳ ತುಟಿಗಳ ಕಲಾತ್ಮಕ ವಕ್ರತೆ, ಆ ವಿಶಾಲನಯನಗಳು ಮತ್ತು ಅವಳ ಇಡೀ ವ್ಯಕ್ತಿತ್ವದಲ್ಲಿದ್ದ ಒಂದು ರೀತಿಯ ಮಧುರತೆ ನನ್ನ ಹೃದಯದಲ್ಲಿ ಒಂದು ಅಚ್ಚಳಿಯದ ಸುಂದರ ಚಿತ್ರವನ್ನು ಮೂಡಿಸಿದವು.

ಈ ಟಾಂಗಾವಾಲ ಬಹಳ ರಸಿಕನಿರಬೇಕೆಂದು ಅವನತ್ತ ತಿರುಗಿದೆ. ಆತ ನಾವು ಹಿಂದೆ ಹಾಕಿದ ಆ ಹೆಂಗಸಿನತ್ತಲೇ ಕಳ್ಳನೋಟ ಬೀರುತ್ತಿದ್ದ. ಯಾವುದೋ ತೀರ್ಮಾನಕ್ಕೆ ಬರುವಂತಿತ್ತು ಅವನ ಯೋಚನೆ. ಕೂಡಲೆ ಆತ ಟಾಂಗ ನಿಲ್ಲಿಸಿ, ಗಾಡಿಯಿಂದ ನೆಗೆದು ರಸ್ತೆಯಲ್ಲಿ ಅವಳತ್ತ ಓಡಲಾರಂಭಿಸಿದ.

" ಇವರಿಬ್ಬರ ಮಧ್ಯೆ ಏನೋ ಇರಬೇಕು ? " ನನ್ನ ಪತ್ನಿಯ ಟೀಕೆ.

" ಆಕೆ ತುಂಬಾ ಸುಂದರವಾಗಿದ್ದಾಳೆ " ಎಂದೆ ನಾನು.

" ಅಪ್ಪ, ಅವನೇಕೆ ಆ ಹೆಂಗಸಿನ ಹತ್ತಿರ ಓಡಿದ ? " ನನ್ನ ಮಕ್ಕಳಲ್ಲೊಂದರ ಪ್ರಶ್ನೆ.

ಮತ್ತೆ ಮೌನ. ಹತ್ತಿರವಾಗುತ್ತಿದ್ದ ಅವರತ್ತ ನಾವೆಲ್ಲ ನೋಡುತ್ತಿದ್ದೆವು. ಆಕೆಯ ತುಟಿಯಲ್ಲಿ ನಗೆಮಿಂಚೊಂದು ಮಿಂಚಿ ಮಾಯವಾಯಿತು. ಏನನ್ನೋ ಬೇಡುವಂತಿತ್ತು ಗುಲಾಮುದ್ದೀನನ ನಡತೆ. ನಮ್ಮಗಾಡಿಗೆ ಕೆಲವೇ ಹೆಜ್ಜೆಗಳ ದೂರಕ್ಕೆ ಅವರು ಬಂದಾಗ, ಅವನು ಓಡಿಬಂದು ಗಾಡಿಯ ಮುಂಭಾಗದಲ್ಲಿ ನೆಗೆದು ಕುಳಿತ. ಲಗಾಮನ್ನು ಕೈಗೆ ತೆಗೆದುಕೊಂಡು ಕುದುರೆಯನ್ನು ನಪ್ಪರಿದ. ಗಾಡಿ ಮುಂದುವರಿದಂತೆ ಆಕೆಯತ್ತ ತಿರುಗಿ ಹೇಳಿದ,

" ನಾಳೆ ಸಂಜೆ....ಇದೇ ಜಾಗದಲ್ಲಿ ಖಂಡಿತಾ ಬಾ ". ಉತ್ತರವಾಗಿ ಅವಳ ತುಟಿಯಲ್ಲಿ ಎಳೆನಗೆ ಬಿರಿಯಿತು. ನನ್ನ ಹೃದಯ ಆ ಸೌಂದರ್ಯ ನಿಧಿಯನ್ನು ತುಂಬಿಕೊಂಡಿತು.

ಈಗ ರಸ್ತೆಯ ಮೇಲೆ ಕುದುರೆಯ ಗೊರಸಿನ ಠಪ್ ಠಪ್ ಠಪ್ ಶಬ್ದ ಮಾತ್ರ. ಟಾಂಗಾವಾಲನ ಪಕ್ಕದಲ್ಲಿ ಕುಳಿತಿದ್ದ ನನ್ನ ಮಗ, ಹಿಂದೆ ಕುಳಿತಿದ್ದ ನನ್ನ ಹೆಂಡತಿ ಮತ್ತು ಇತರ ಮಕ್ಕಳು ಎಲ್ಲರೂ ಅವನತ್ತಲೇ ನೋಡುತ್ತಿದ್ದೆವು. ಆ ಮುಖ ತನ್ನ ಮೊದಲಿನ ಗಡುಸುತನವನ್ನು ಕಳೆದುಕೊಂಡು ಮೃದುವಾದಂತಿತ್ತು. ಅವನ ತುಟಿಯಿಂದ ನಗೆಯೊಂದು ಹೊರಚಿಮ್ಮಲು ಹಾತೊರೆಯುತ್ತಿತ್ತು. ಗಾಡಿ ಮುಂದೆ ಹೋದಂತೆಲ್ಲ ಅವನ ಕಣ್ಣುಗಳು ರಸ್ತೆಯನ್ನು ಹಿಂಬಾಲಿಸುತ್ತಿದ್ದುವು. ಯಾವ ಮಾತೂ ಇಲ್ಲದೆ ನಮ್ಮ ದೃಷ್ಟಿಮಾತ್ರ ಅವನಲ್ಲಿ ನೆಟ್ಟಿತ್ತು. ಬಹುಶಃ ಅದೇ ಕೊಂಚ ಕಾಲದನಂತರ ಅವನು ನಮ್ಮತ್ತ ತಿರುಗುವಂತೆ ಮಾಡಿರಬೇಕು.

" ಸೇಠ್‌ಜೀ ಆ ಹೆಂಗಸನ್ನು ನೋಡಿದಿರಾ ? "

" ಹೌದು. ನೋಡಿದೆ. ಏಕೆ ? "

"ಒಂದಾನೊಂದು ಕಾಲದಲ್ಲಿ ಆಕೆ ನನ್ನ ಹೆಂಡತಿಯಾಗಿದ್ದಳು". ಹೀಗೆ ಹೇಳಿದವನೆ ಕುದುರೆಗೆ ಚಾವಟಿಯಿಂದ ಒಂದು ಏಟು ಹಾಕಿದ.

"ಒಂದಾನೊಂದು ಕಾಲದಲ್ಲಿ? ನೀನು ಏನು ಹೇಳಿದ್ದು? ಈಗ ಆಕೆ ನಿನ್ನ ಹೆಂಡತಿಯಲ್ಲವೆ?" ನನ್ನ ಹೆಂಡತಿ ಮಕ್ಕಳು ನೈಯಲ್ಲ ಕಿವಿಯಾಗಿ ಕೇಳುತ್ತಿದ್ದರು.

"ಇಲ್ಲ. ನಾನು ಅವಳನ್ನು ಬಿಟ್ಟುಬಿಟ್ಟೆ" ಆತ ಹೇಳಿದ.

"ಏಕೆ?"

"ಅದೊಂದು ದೊಡ್ಡ ಕಥೆ ಹುಜೂರ್. ನಿಮ್ಮಂಥ ದೊಡ್ಡ ಮನುಷ್ಯರಿಗೆ ನಮ್ಮಂಥ ಬಡವರ ಕಥೆಯಲ್ಲಿ ಆಸಕ್ತಿಯೇನು ಬಂದೀತು?"

"ಬಡವರ ಕಥೆ? ಅವೂ ಮನುಷ್ಯರ ಕಥೆಗಳೇ. ನಾವೆಲ್ಲ ಮನುಷ್ಯರೆ. ಹೌದೋ ಅಲ್ಲವೊ?" ನನ್ನ ಮಾತುಗಳು ಅವನ ಮೇಲೆ ಪರಿಣಾಮವನ್ನುಂಟು ಮಾಡಿದವು.

"ನಿಜ ಸೇಠ್‌ಜೀ, ನಾವೆಲ್ಲ ಮನುಷ್ಯರೆ. ಆದರೆ ನನ್ನದೊಂದು ದೊಡ್ಡ ಕಥೆ. ಬಹುಶಃ ಅದು ನಿಮಗೆ ಬೇಸರ ತರುತ್ತದೆ."

"ನಾವಿನ್ನೂ ನಗರ ಸುತ್ತ ಬೇಕು ತಾನೆ? ಕಡೆಯ ಪಕ್ಷ ಒಂದು ಗಂಟೆ ಯಾದರೂ ಆಗಬಹುದು, ನಿನ್ನ ಕಥೆಯಿಂದ ನಮಗೇಕೆ ಬೇಸರವಾದೀತು, ಅದು ನಮ್ಮ ಸಂತೋಷವನ್ನು ಹೆಚ್ಚಿಸಲೂಬಹುದು. ಹೇಳು."

"ಈ ಟಾಂಗ, ಈ ಕುದುರೆ ನಿಮಗೆ ಇಷ್ಟವಾಯಿತೆ ಹುಜೂರ್?" ಅಪ್ರಕೃತ ಪ್ರಶ್ನೆಯೆಂದು ಕಂಡಿತು. "ತುಂಬಾ ಚನ್ನಾಗಿವೆ. ಆದರೆ ಇವಕ್ಕೂ ನಿನ್ನ ಕಥೆಗೂ ಏನು ಸಂಬಂಧ" ಎಂದೆ ನಾನು.

"ಈಗ ನಾನು ಅದನ್ನೇ ನಿಮಗೆ ಹೇಳಹೊರಟಿದ್ದೇನೆ. ಒಂದು ಸುಂದರವಾದ ಟಾಂಗ ಮತ್ತು ಉತ್ತಮವಾದ ಕುದುರೆಯನ್ನು ಹೊಂದಿರಬೇಕೆಂಬುದು ನನ್ನ ಬಾಲ್ಯದ ಆಸೆ. ಗಾಡಿ ಮತ್ತು ಕುದುರೆ ಹಳೆಯದಾಯಿತೆಂದು ಕಂಡ ಕೂಡಲೇ ನಾನು ಅವನ್ನು ಬೇರೆಯವರಿಗೆ ಬದಲಾಯಿಸಿ ಬಿಡುತ್ತಿದ್ದೆ. ಒಂದು ಸುಂದರವಾದ ಟಾಂಗ, ಒಂದು ಕಟ್ಟುಮಸ್ತಾದ ಕುದುರೆ, ಕೈಯಲ್ಲಿ ಮನೋಹರವಾದ ಒಂದು ಉದ್ದನೆಯ ಚಾವಟಿ ಇವೇ ನನ್ನ ಪ್ರಬಲವಾದ ಆಸೆಗಳು. ನನ್ನ ತಂದೆಯೂ ಅವುಗಳನ್ನು ಅಷ್ಟೇ ಪ್ರೀತಿಸುತ್ತಿದ್ದ. ನನ್ನ ತಂದೆಯಿಂದಲೇ ನಾನು ತರಬೇತಿ ಹೊಂದಿದ್ದು."

ನಮ್ಮ ಆಸಕ್ತಿ ಅವನ ಪೂರ್ವಿಕರ ಬಗ್ಗೆ ಬರಲಿಲ್ಲ. ನಮ್ಮಲ್ಲಿ ಅವನ ಬಗ್ಗೆ ಆಸಕ್ತಿ ಕೆರಳಿಸಿದ್ದು ಆ ಹೆಂಗಸಿನೊಂದಿಗೆ ಅವನಿಗಿದ್ದ ಸಂಬಂಧ. ಆದರೆ ನಾವು ಅವನದೇ ದಾರಿಯಲ್ಲಿ ಕಥೆ ಹೇಳಲು ಬಿಟ್ಟೆವು.

"ಹೌದು," ಅವನು ಮುಂದುವರಿದ, "ನನ್ನ ತಂದೆಗೆ ನಾನು ಓದಿವಿದ್ಯಾವಂತ ನಾಗಬೇಕೆಂಬ ಆಸೆಯಿತ್ತು. ಆದರೆ ನನಗೆ ತರಗತಿಯಲ್ಲಿ ಜಡವಾಗಿ ಕುಳಿತಿರುವು

ದೆಂದರೆ ಆಗದು. ಸುಮಾರು ನನ್ನ ಹದಿನಾರನೆಯ ವಯಸ್ಸಿನಲ್ಲಿ ನಾನೊಬ್ಬ ಅತ್ಯುತ್ತಮ ಟಾಂಗಾ ಡ್ರೈವರ್ ಆಗಿದ್ದೆ. ನನ್ನ ತಂದೆ ನನಗಾಗಿ ಒಂದು ಸುಂದರವಾದ ಟಾಂಗ, ಒಂದು ಉತ್ತಮಜಾತಿಯ ಕುದುರೆಯನ್ನು ತಂದುಕೊಟ್ಟ. ಆ ದಿನಗಳಲ್ಲಿ ಇಡೀ ರಾವಲ್ಪಿಂಡಿಯಲ್ಲಿ ನಾನೇ ಅತ್ಯಂತ ಕಿರಿಯ ಟಾಂಗಾ ಡ್ರೈವರ್, ನನ್ನವೇ ಭರ್ಜರಿಯಾದ ಟಾಂಗಾ ಮತ್ತು ಕುದುರೆ, ನನ್ನ ಉಡುಪೂ ಒಳ್ಳೆ ಶೋಕಿಯಾಗಿತ್ತು "

"ಈಗಲೂ ನೀನು ಚೆನ್ನಾಗಿ ಬಟ್ಟೆ ಹಾಕಿದ್ದೀಯ" ನನ್ನ ಟೀಕೆ. "ಇದು", ಒಂದು ರೀತಿಯ ಅಸಮಾಧಾನದಿಂದ ತನ್ನ ಉಡುಪಿನತ್ತ ನೋಡುತ್ತಾ ಹೇಳಿದ.

"ಇದು ಏನೇನೂ ಇಲ್ಲ. ಆಗ ನಾನು ಬಹಳ ಸೊಗಸಾಗಿ ಬಟ್ಟೆ ಹಾಕುತ್ತಿದ್ದೆ.

"ನೀವು ರಸ್ತೆಯಮೇಲೆ ಆ ಹೆಂಗಸನ್ನು ನೋಡಿದಿರಲ್ಲ? 'ಆಶಾ' ಅವಳ ಹೆಸರು. ಅವಳ ತಂದೆ ಒಬ್ಬ ದೊಡ್ಡ ವ್ಯಾಪಾರಿ. ಮೊದಲು ನಮಗೆ ಪರಸ್ಪರ ಪರಿಚಯವೇನೂ ಇರಲಿಲ್ಲ. ಆಕೆಯ ತಂದೆ ಅವಳನ್ನು ಶಾಲೆಗೆ ಕಳಿಸಲು ನಿರ್ಧರಿಸಿದ. ನಾನು ಹದಿನೇಳು ವರ್ಷದವನಾಗಿದ್ದಾಗ ಅವರು ಆಶಾಳನ್ನು ಬೆಳಗ್ಗೆ ಸ್ಕೂಲಿಗೆ ಕರೆದುಕೊಂಡು ಹೋಗಲು, ಸಂಜೆ ಮನೆಗೆ ಕರೆದುತರಲು ನನ್ನ ಟಾಂಗಾವನ್ನು ಬಾಡಿಗೆಗೆ ಗೊತ್ತುಮಾಡಿದರು. ಆಶಾಳಿಗೆ ಆಗ ಹನ್ನೊಂದು ಅಥವಾ ಹನ್ನೆರಡು ವರ್ಷವಿರಬಹುದು.

ಮೊದಲಿಗೆ ಕೆಲಸದವಳೊಬ್ಬಳು ಅವಳ ಜತೆಗೆ ಬರುತ್ತಿದ್ದಳು. ಅವರು ನನಗೆ ಚೆನ್ನಾಗಿ ಪರಿಚಯವಾದನಂತರ ನನ್ನನ್ನು ಬಹಳವಾಗಿ ನಂಬಿದರು. ಒಂದು ವರ್ಷದೊಳಗೆ ನನ್ನನ್ನು ಮನೆಯವನಂತೆಯೇ ಕಂಡರು. ಆಮೇಲೆ ಆಶಾಳೊಂದಿಗೆ ಕೆಲಸದವಳನ್ನು ಕಳಿಸುವುದನ್ನು ನಿಲ್ಲಿಸಿ ಅವಳನ್ನು ಸ್ಕೂಲಿಗೆ ಬಿಡುವ ಮತ್ತು ಕರೆದುತರುವ ಸಂಪೂರ್ಣ ಜವಾಬ್ದಾರಿಯನ್ನು ನನಗೇ ಬಿಟ್ಟರು.

ಹೀಗೆಯೇ ಎರಡು ಮೂರು ವರ್ಷಗಳು ಕಳೆದವು. ಆಗ ಆಶಾ ಯಾವ ತರಗತಿಯಲ್ಲಿ ಓದುತ್ತಿದ್ದಾಳೆಂಬುದೇನೂ ನನಗೆ ತಿಳಿಯದಾದರೂ, ಅವಳ ಹದಿನಾಲ್ಕನೆಯ ವಯಸ್ಸಿನಲ್ಲಿಯೂ ಶಾಲೆಗೆ ಹೋಗುತ್ತಿದ್ದಳು. ನಾವು ದಾರಿಯಲ್ಲಿ ಬಹಳ ಮಾತನಾಡುತ್ತಿದ್ದೆವು."

"ಏನು ವಿಷಯ" ಎಂದೆ ನಾನು.

"ಸುಮ್ಮನೆ ತಮಾಷೆ, ಹರಟೆ" ಅವನು ನಕ್ಕ. "ಹೀಗೆ ಆರಂಭವಾದುದು ಅವಳು ಬೆಳೆದಂತೆಲ್ಲ ನಮ್ಮ ಮಾತಿನ ದಿಕ್ಕು ಬದಲಾಯಿಸಿತು. ನನ್ನ ಹೃದಯ ಪ್ರಣಯದ ಬಗ್ಗೆ ಯೋಚಿಸಲಾರಂಭಿಸಿತು . . . . . ಅವಳದೂ ಕೂಡ" ಸ್ವಲ್ಪ ಹೊತ್ತಿನನಂತರ ಸೇರಿಸಿದ.

ಲಗಾಮು ಬಿಗಿಹಿಡಿದು ಅವನು ಸುತ್ತಲೂ ನೋಡಿದ. ಸ್ವಲ್ಪ ದೂರದಲ್ಲಿ

ಸಾಲುಮರಗಳು ಕಾಣಿಸುತ್ತಿದ್ದವು. ಅವನು ಆ ಕಡೆ ಕೈಮಾಡಿ "ಅಲ್ಲಿ ನೋಡಿ ಸೇಠ್‌ಜಿ, ಅದೇ ಕಪನಿಬಾಗ್. ಇನ್ನೊಂದು ಕ್ಷಣದಲ್ಲಿ ನಾವಲ್ಲಿರುತ್ತೇವೆ." ಎಂದ.

"ಆಮೇಲೇನಾಯಿತು?" ನನ್ನ ತಲೆಯು ತುಂಬಾ ಆಶಾಳ ಕಥೆಯೇ ತುಂಬಿಕೊಂಡಿತ್ತು.

ಅವನು ಮೌನವಾದ. ಒಂದು ಕ್ಷಣದನಂತರ ಮತ್ತೆ ಹೇಳಿದ: "ಆ ಕಾಲದಲ್ಲಿ ಅವಳು ಹೇಗೆ ಕಾಣುತ್ತಿದ್ದಳೆಂದು ನಿಮಗೆ ಗೊತ್ತೇ, ಹುಜೂರ್. ಸ್ವರ್ಗದ ಅಪ್ಸರೆಯರೂ ಅವಳ ಸೌಂದರ್ಯಕ್ಕೆ ಸಮವಾಗುತ್ತಿರಲಿಲ್ಲ. ಅವಳೊಂದು ಸುಂದರವಾದ ಚಿತ್ರದಂತಿದ್ದಳು." ಮತ್ತೆ ಅವನು ಮೌನ. ಸೌಂದರ್ಯ ದರ್ಶನವೊಂದನ್ನು ಕಳೆದುಕೊಂಡಂತಾಗಿತ್ತು ಅವನ ಮುಖ. ಆ ಉದ್ವೇಗಕ್ಕೋ ಎಂಬಂತೆ ಟಾಂಗಾದ ಓಟ ಜೋರಾಯಿತು.

"ಅವಳು ಸುಂದರಿ, ಅತ್ಯಂತ ಸುಂದರಿ" ಅವನು ಉಸುರಿದ.

"ಅವಳು ಈಗಲೂ ಹಾಗೆಯೆ!"

"ಆದರೆ ಆ ದಿನಗಳಲ್ಲಿ ಅವಳೊಂದು ಅಪರೂಪದ ವ್ಯಕ್ತಿ, ಇಡೀ ನಗರವೇ ಅವಳ ಬಗ್ಗೆ ಹುಚ್ಚಾಗಿತ್ತು. ನಾನೂ ಹಾಗೆಯೆ." ಅವನ ಧ್ವನಿಯಲ್ಲಿ ನಾಚಿಕೆಯ ಎಳೆ ಸೇರಿಕೊಂಡಂತಿತ್ತು. ಆದರೂ ಹೇಳಿದ, "ನಾನೂ ಸಹ ದೃಢಾಂಗನಾಗಿದ್ದೆ.. ನಾವು ಪರಸ್ಪರ ಹುಚ್ಚರಾಗುತ್ತಿದ್ದೆವು."

"ಅವಳ ತಂದೆತಾಯಿಗಳಿಗೆ ಈ ವಿಷಯ ತಿಳಿಯಲಿಲ್ಲವೆ?" ಎಂದೆ ನಾನು.

"ಅವರಿಗೂ ತಿಳಿಯಿತು. ಅವಳಿಗೆ ಹದಿನೈದು ವರ್ಷ ತುಂಬಿದಾಗ ಶಾಲೆಗೆ ಕಳಿಸುವುದನ್ನು ನಿಲ್ಲಿಸಿಬಿಟ್ಟರು. ಆದರೆ ಅವರಿಗೆ ಅವಳು ನನ್ನನ್ನು ನೋಡದಂತೆ ತಪ್ಪಿಸಲಾಗಲಿಲ್ಲ. ಅವರು ನಮ್ಮ ಮದುವೆಗೂ ಒಪ್ಪಲಿಲ್ಲ. ಒಮ್ಮೆ ವಿಷಯವನ್ನು ಅವಳ ತಂದೆಗೆ ವಿವರಿಸಲು ಯತ್ನಿಸಿದೆ. ಅವನಿಂದ ನನಗೆ ದೊರೆತುದು ಬರಿಯ ಹೀಯಾಳಿಕೆಯ ಮಾತುಗಳು.

"ಅವರು ನಮ್ಮ ಮದುವೆಗೆ ಒಪ್ಪಲಿಲ್ಲವಾದರೂ ನಾವು ಮದುವೆಯಾಗದಿರುವಂತಿರಲಿಲ್ಲ. ಸರಿ ಒಂದು ದಿನ ನಮ್ಮ ಮನೆಗಳಲ್ಲಿ ಕೈಗೆ ಸಿಕ್ಕಿದ ಹಣ ಮತ್ತು ಒಡವೆಗಳನ್ನು ಸಂಗ್ರಹಿಸಿಕೊಂಡು ಯಾರಿಗೂ ತಿಳಿಯದಂತೆ ಗುಟ್ಟಾಗಿ ರಾವಲ್ಪಿಂಡಿ ಬಿಟ್ಟೆವು."

ನಾವು ಉಸಿರು ಬಿಗಿಹಿಡಿದು ಕೇಳುತ್ತಿದ್ದೆವು. ನನ್ನ ಚಿಕ್ಕ ಮಗ ಗುಲಾಮುದ್ದೀನನತ್ತ ಕುತೂಹಲಿಯಾಗಿ ನೋಡುತ್ತಿದ್ದ. ನನ್ನ ಪತ್ನಿ ನನ್ನತ್ತ ತಿರುಗಿ ಮಧುರವಾದ ನಗೆ ಬೀರಿದಳು.

"ನೀವು ಯಾವ ಊರಿಗೆ ಹೋದಿರಿ?"–ನನ್ನ ಪ್ರಶ್ನೆ.

"ಲಾಯಲ್‌ಪುರ. ಕೆಲವು ತಿಂಗಳುಗಳ ಕಾಲ ನಾವು ಅಲ್ಲಿ ಒಳ್ಳೆ ಮಜವಾಗಿ ಕಾಲ ಕಳೆದೆವು. ನಮಗೆ ಒಂದು ವರ್ಷಕ್ಕೆ ಸಾಕಾಗುವಷ್ಟು ಹಣ ತೆಗೆದುಕೊಂಡು

ಹೋಗಿದ್ದೆವು. ನಾನು ಪ್ರತಿದಿನ ಕೆಲಸ ಹುಡುಕಲು ಹೋಗುತ್ತಿದ್ದೆ. ಆದರೆ ಆ ಕಾಲದಲ್ಲಿ ಕೆಲಸ ದೊರೆಯುವುದು ಬಹಳ ಕಷ್ಟವಾಗಿತ್ತು.

ನಾವು ಸುಮಾರು ಆರು ತಿಂಗಳು ಒಟ್ಟಿಗೇ ಕಳೆದನಂತರ, ಅವಳ ತಂದೆ ನಾವಿರುವ ಜಾಗವನ್ನು ಪತ್ತೆಹಚ್ಚಿದ್ದಾನೆಂದು ತಿಳಿಯಿತು. ನನ್ನ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳಲು ಆತ ಯೋಚಿಸುತ್ತಿದ್ದನಂತೆ. ಸರಿ ನಾವು ಲಾಯಲ್‌ಪುರ ಬಿಟ್ಟು ಶಹರಾಪುರಕ್ಕೆ ಹೋದೆವು. ಆ ದಿನಗಳು ನಮಗೆ ಸಂತೋಷ ಮತ್ತು ಅದ್ದೂರಿಯ ದಿನಗಳಾಗಿದ್ದವು. ಅದು ನಮ್ಮ ಪ್ರೇಮದ ಗೌರಿಶಂಕರವಾಗಿತ್ತು. ಅದುವರೆಗೆ ಒಂದು ಗುಲಾಬಿ ಮೊಗ್ಗೆಯಂತಿದ್ದ ಆಶಾ, ಆಗ ಪೂರ್ಣ ಅರಳಿದ ಗುಲಾಬಿಯಂತಾಗಿದ್ದಳು. ಅವಳು ನನ್ನನ್ನು ಹೇಗೆ ಪ್ರೀತಿಸುತ್ತಿದ್ದಳು! ಮತ್ತು ನಾನು . . . ನಾನು ಅವಳಿಗಾಗಿ ಈ ಪ್ರಪಂಚದಲ್ಲಿ ಏನನ್ನು ಬೇಕಾದರೂ ಬಿಡಲು ಸಿದ್ಧನಾಗಿದ್ದೆ "

ಅವನು ಒಂದು ಕ್ಷಣ ನನ್ನತ್ತ ನೋಡಿದ. ಆ ನೋಟ ತಾನು ಪ್ರೇಮಿಸಿದ ಹೆಣ್ಣಿಗಾಗಿ ಏನನ್ನು ಬೇಕಾದರೂ ತ್ಯಾಗಮಾಡಲು ಸಿದ್ಧನಾದ ಪ್ರಣಯಿಯ ನೋಟದಂತಿತ್ತು. ಅನಂತರ ಒಂದು ಮಂದನಗುವಿನೊಂದಿಗೆ ಮುಂದುವರಿಸಿದ.

" ನಮ್ಮ ಹತ್ತಿರವಿದ್ದ ಹಣವೆಲ್ಲ ತೀರುತ್ತಾ ಬಂತು. ಕೆಲಸ ಮಾತ್ರ ಸಿಗಲಿಲ್ಲ. ಆಶಾಳ ತಂದೆ ನಮ್ಮ ಇರವನ್ನು ಕಂಡುಹಿಡಿದರೇನು ಗತಿಯೆಂದು ನಾನು ಯೋಚಿಸಲಾರಂಭಿಸಿದೆ. ಇವೆಲ್ಲ ಸಾಕಾಗಲಿಲ್ಲ ಎಂಬಂತೆ ಹೊಸ ತೊಂದರೆಯೊಂದು ನಮಗೆ ಸುತ್ತಿಕೊಂಡಿತು. ಆಶಾ . . . . ಆಶಾ . . . ." ಎಂದು ಏನೋ ತೊದಲಿದನಾತ.

" ಆಶಾ ತಾಯಿಯಾಗಲಿದ್ದಳು ? " ಅವನ ಸಂದಿಗ್ಧತೆಯನ್ನು ಪರಿಹರಿಸಲು ನಾನೇ ಹೇಳಿದೆ.

" ಹೌದು, ಹೌದು. ಆಗ ನಾನೇನು ಮಾಡಲಿ? ನಾವು ಯೋಚಿಸಿ ಯೋಚಿಸಿ ಕಡೆಗೊಂದು ತೀರ್ಮಾನಕ್ಕೆ ಬಂದೆವು. ಆಶಾಳನ್ನು ಅಲ್ಲಿಯೇ ಬಿಟ್ಟು ನಾನು ರಾವಲ್ಪಿಂಡಿಗೆ ಹೋದೆ.

" ಆಶಾಳನ್ನು ಬಿಟ್ಟು ನೀನು ಓಡಿಹೋದೆ ? " ನನ್ನ ಪತ್ನಿ ಕೇಳಿದಳು.

"ಇಲ್ಲ, ಇಲ್ಲ, ಮೇಡಂ. ಹಾಗೆ ಮಾಡುವುದಕ್ಕೆ ಬದಲು ಈ ಗುಲಾಮುದ್ದೀನ್ ಸಾಯುತ್ತಿದ್ದ. ನಾನು ಅರ್ಧರಾತ್ರಿಯಲ್ಲಿ ರಾವಲ್ಪಿಂಡಿ ತಲುಪಿ ನನ್ನ ತಂದೆಗೆ ನಮ್ಮ ಕಥೆಯನ್ನೆಲ್ಲ ವಿವರಿಸಿದೆ. ಅವನು ಸಹಾಯ ಮಾಡುವುದಾಗಿ ಭರವಸೆ ನೀಡಿದನಾದರೂ, ಅದು ನಮ್ಮ ಎಲ್ಲ ಸಮಸ್ಯೆಗಳಿಗೂ ಪರಿಹಾರವಾಗಿರಲಿಲ್ಲ. ಆದುದರಿಂದ ಅದೇ ರಾತ್ರಿ ಆಶಾಳ ತಂದೆಯ ಬಳಿಗೆ ಹೋದೆ. ನನ್ನನ್ನು ನೋಡಿದ ಕೂಡಲೇ ಅವನು ಹುಚ್ಚನಂತಾದ.

" ಅಯೋಗ್ಯ . . ರ್‍ಯಾಸ್ಕಲ್, ಪಿಶಾಚಿ, ನನ್ನ ಮಗಳನ್ನು ಎಲ್ಲಿ ಬಚ್ಚಿಟ್ಟಿದ್ದೀಯ ಹೇಳು–" ನಾನು ಅವರ ಮನೆಯೊಳಗೆ ಕಾಲಿಡುತ್ತಿದ್ದಂತೆಯೇ ಆತ ಕಿರುಚಿದ.

"ನಾನು ಶತಪ್ರಯತ್ನ ಮಾಡಿ ಅವನ ಕೋಪವಿಳಿಯುವಂತೆ ಮಾಡಿ ನಮ್ಮ ಕಥೆಯನ್ನೆಲ್ಲ ವಿವರಿಸಲು ಬಹಳ ಪ್ರಯಾಸಪಡಬೇಕಾಯಿತು. ನಾವಿಬ್ಬರೂ ಮದುವೆಯಾಗಿರುವುದಾಗಿ ಹೇಳಿದೆ. ಆಶಾಳಿಗೆ ಮಗುವಾಗಲಿದೆ, ನಮ್ಮ ಜತೆಯಲ್ಲಿ ಕೋಪಮಾಡಿಕೊಂಡು ಜಗಳ ಕಾಯ್ದರೆ ಏನು ಪ್ರಯೋಜನ? ಎಂದೆ ಕಡೆಗೆ ಅವನ ಕೋಪವೆಲ್ಲ ಆರಿ ನಾವು ರಾವಲ್ಪಿಂಡಿಗೆ ಬಂದು ಇದ್ದರೆ ಯಾವ ಕಾನೂನು ಕ್ರಮ ವನ್ನೂ ತೆಗೆದುಕೊಳ್ಳುವುದಿಲ್ಲ ಎಂಬ ಆಶ್ವಾಸನೆಯನ್ನು ಪಡೆದೆ. ಆತ ನನ್ನನ್ನು ಅಳಿಯನೆಂದು ಪರಿಗಣಿಸಲು ಸಹ ಒಪ್ಪಿಕೊಂಡ. ಓಡಿ ಹೋಗಿದ್ದ ಮಗಳು ಮತ್ತು ನನ್ನಲ್ಲಿ ಆತ ಮತ್ತೇನನ್ನು ಮಾಡಲು ಸಾಧ್ಯವಿತ್ತು.

ಮಾರನೆಯ ಬೆಳಗಿನ ರೈಲಿನಲ್ಲಿ ಶಹರಾಪುರದಲ್ಲಿದ್ದ ನನ್ನ ಹೆಂಡತಿಯ ಬಳಿಗೆ ಓಡಿದೆ. ಆದಾದ ಮೂರನೆಯ ದಿನ ಮತ್ತೆ ನಾವು ನಮ್ಮ ಪ್ರೀತಿಯ ರಾವಲ್ಪಿಂಡಿ ಯಲ್ಲಿದ್ದೆವು. ಅದೇ ದಿನ ನನ್ನ ಟಾಂಗ ಮತ್ತು ಕುದುರೆಯನ್ನು ಕೈಗೆ ತೆಗೆದು ಕೊಂಡೆ."

ನಮ್ಮ ಟಾಂಗವು ಸ್ವಲ್ಪ ದೂರದಿಂದ ನಾವು ನೋಡಿದ್ದ ಸಾಲು ಮರಗಳ ಹತ್ತಿರಕ್ಕೆ ಬಂದಿತು. ಗುಲಾಮುದ್ದೀನ್ ಲಗಾಮು ಎಳೆದು ಗಾಡಿ ನಿಲ್ಲಿಸಿದವನೆ, "ಹುಜೂರ್ ಇದೇ ಕಂಪನಿಬಾಗ್, ಬೇಗ ಬೇಗ ನೋಡಿಬಿಡಿ."

"ಓ ಇಷ್ಟೇನೆ ಈ ಉದ್ಯಾನವನ?", ನನ್ನ ಸುತ್ತಲೂ ಒಮ್ಮೆ ಕಣ್ಣಾಡಿಸಿ ಹೇಳಿದೆ.

"ಇದು ತೀರಾ ಸಾಧಾರಣವಾದದ್ದು"

"ನಿಮಗೆ ಯಾರೋ ತಪ್ಪುವಿವರ ಕೊಟ್ಟಂತಿದೆ ಹುಜೂರ್. ಇದೊಂದು ತೀರಾ ಸಾಧಾರಣ ತೋಟ. ನಿಜವಾಗಿಯೂ ಸುಂದರವಾದದ್ದು ನಗರದ ಮತ್ತೊಂದು ಕೊನೆಯಲ್ಲಿದೆ."

"ಹಾಗಾದರೆ ಅಲ್ಲಿಗೆ ಹೋಗೋಣ" ಎಂದೆ ನಾನು.

ಗುಲಾಮುದ್ದೀನ್ ಲಗಾಮು ಕೈಗೆ ತೆಗೆದುಕೊಂಡ. ಮತ್ತೆ ನಾವೆಲ್ಲ ಗಾಡಿಯನ್ನೇರಿದೆವು. ಅವನ ಕಥೆ ಮುಂದುವರಿಸಲಿ ಎಂದು ನಾನು ಹೇಳಿದೆ: "ಗುಲಾಮುದ್ದೀನ್, ನೀನೊಬ್ಬ ವಿಚಿತ್ರ ಮನುಷ್ಯ. ಆಶಾಳಿಂದಾಗಿ ನೀನು ಏನೆಲ್ಲ ತೊಂದರೆಗಳನ್ನೂ ಎದುರಿಸಿದೆ. ಆದರೂ ಕಡೆಯಲ್ಲಿ ನೀನು ಅವಳನ್ನು ಬಿಡಬೇಕಾ ಯಿತು?"

"ಅದು ದುರದೃಷ್ಟ. ಆದರೆ ಜೀವನವೇ ಹಾಗೆ ಹುಜೂರ್." ಅವನ ಧ್ವನಿ ದುಃಖಪೂರಿತವಾದಂತಿತ್ತು, ಸಾವರಿಸಿಕೊಂಡು ಮತ್ತೆ ಮುಂದುವರಿಸಿದ.

"ನಾವು ಹಿಂತಿರುಗಿದ ಮೇಲೆ ಬಹಳ ಸುಖವಾಗಿದ್ದೆವು. ಆಗಲೆ ನಮ್ಮ ಮಗು ಹುಟ್ಟಿದ್ದು."

"ಅದು ಬಹಳ ರೂಪವಂತ ಮಗುವಾಗಿರಬೇಕು" ಎಂದೆ ನಾನು.

"ಸೇಠ್‌ಜೀ, ನೀವು ಬೆಳಿಗ್ಗೆ ಮುಂಚೆಯೇ ಹೊರಡುತ್ತಿದ್ದೀರಿ. ಇಲ್ಲವಾಗಿದ್ದರೆ ಆ ಹುಡುಗನನ್ನು ನಿಮಗೆ ತೋರಿಸುತ್ತಿದ್ದೆ. ಅವನೊಬ್ಬ ಮುದ್ದಾದ ಸುಂದರ ಹುಡುಗ." ಅವನ ಮುಖ ಹೆಮ್ಮೆಯಿಂದ ಹೊಳೆಯುತ್ತಿತ್ತು.

"ಆಮೇಲೆ?" ನಾನು ಮೆಲ್ಲಗೆ ಕೇಳಿದೆ; "ಹೇಗೆ ನಿಮ್ಮ ಮಧ್ಯೆ ಈ ಬಿಡುಗಡೆ . . . . ?"

"ನಾನೂ ಆ ವಿಷಯಕ್ಕೇ ಬರುತ್ತಿದ್ದೇನೆ. ಸುಂದರಿಯಾದ ಆಶಾ ಮತ್ತು ಪ್ರತಿಕ್ಷಣವೂ ನಮಗೆ ಆನಂದವೀಯುತ್ತಿದ್ದ ಆ ಮಗುವಿನೊಂದಿಗೆ ಒಂದು ವರ್ಷ ಒಂದೇ ದಿನದಂತೆ ಕಳೆದುಹೋಯಿತು. ನಮ್ಮ ಸಂತೋಷಕ್ಕೆ ಪಾರವೇ ಇರಲಿಲ್ಲ. ನಮ್ಮ ಜೀವನವನ್ನು ಯಾವ ಕೆಟ್ಟ ನೆರಳೂ ಮುಸುಕಲಿಲ್ಲ. ಆದರೆ . . . . ಒಂದು ದಿನ ಏನೋ ಒಂದು ಘಟನೆ ನಡೆದು ನನ್ನ ಸಂತೋಷದ ಬದುಕಿನಲ್ಲಿ ನೋವಿನ ಮುಳ್ಳೊಂದು ಹೊಕ್ಕಿತು." ಅವನ ಧ್ವನಿಯಲ್ಲಿಯೇ ನಾನು ಆ ನೋವನ್ನು ಕೇಳಿದೆ.

ಅದೇ ಸಮಯದಲ್ಲಿ ನನ್ನ ಹೆಂಡತಿ ನನ್ನತ್ತ ತಿರುಗಿ "ಈತ ತುಂಬಾ ಸಾಚಾ ಮನುಷ್ಯನಂತೆ ಕಾಣುತ್ತಾನೆ. ಇವನು ಆಕೆಯನ್ನು ಬಹಳವಾಗಿ ಪ್ರೀತಿಸುತ್ತಿದ್ದಿರಬೇಕು" ಎಂದಳು. "ಅವರು ರಸ್ತೆಯಲ್ಲಿ ಸಂಧಿಸಿದಾಗಲೇ ನೀನು ಅದನ್ನು ಕಾಣಬಹುದಿತ್ತು"—ನನ್ನ ಉತ್ತರ. ಗುಲಾಮುದ್ದೀನನ ಕಡೆಗೆ ತಿರುಗಿ ಕೇಳಿದೆ:

"ಅದೇನು ಅಂಥ ನೋವು, ಗುಲಾಮುದ್ದೀನ್?"

"ಒಂದು ರಾತ್ರಿ ಬಹಳ ಸಂತೋಷದಿಂದ ಲಾಯದಿಂದ ಹಿಂತಿರುಗುತ್ತಿದ್ದೆ. ಪ್ರಣಯ ಗೀತೆಯೊಂದು ತನಗೆ ತಾನೇ ನನ್ನ ಬಾಯಲ್ಲಿ ಗುನುಗುತ್ತಿತ್ತು. ಎದುರಿಗೆ ನನ್ನ ಹಳೆಯ ಸ್ನೇಹಿತನೊಬ್ಬ ಸಿಕ್ಕಿದ.

"ಏನೋ ಹೇಗಿದ್ದೀಯಾ?" ಅವನ ಭುಜ ತಟ್ಟಿ ಕೇಳಿದೆ.

"ಬಹಳ ಚೆನ್ನಾಗಿದ್ದೀನಿ ಗುಲಾಮುದ್ದೀನ್. ನೀನೇನು ಬಹಳ ಮಜವಾಗಿರುವಂತಿದೆ?" ಅವನ ಉತ್ತರ.

"ಏಕೆ? ನಾನು ಸಂತೋಷವಾಗಿರಬಾರದೇನು?"

"ಏಕಿರಬೇಕು?" ಅವನು ಒತ್ತಿ ಹೇಳಿದ. ನನ್ನ ಸಂತೋಷ ಅವನಿಗೆ ಅಸಹನೀಯವಾದಂತಿತ್ತು.

"ನಾನೇಕೆ ಸಂತೋಷವಾಗಿರಬಾರದು. ಇಡೀ ಪ್ರಪಂಚವೇ ಸಂತೋಷದಿಂದಿರುವಾಗ? ನೋಡು ಆ ಪ್ರತಿಮೆ ಎಷ್ಟು ಸುಂದರವಾಗಿದೆ." ಭಾವಾವೇಶದಿಂದ ಹೇಳಿದೆ.

"ಅದು ಎಲ್ಲದಕಿಂತ ಸುಂದರವಾಗಿದೆಯೆ ಗುಲಾಮುದ್ದೀನ್"

ಆ ಪ್ರಶ್ನೆಯಲ್ಲೇ ಏನೋ ದುಃಖ ಅಡಗಿದಂತಿದೆ. ಅವನು ಏನೋ

ಹೇಳಬೇಕೆಂದಿದ್ದಾನೆ, ಆದರೆ ಬಾಯಿ ಬಿಡಲಾರ. ಕಡೆಗೊಮ್ಮೆ ಅವನು ತೊದಲಿದ:
“ಮಿತ್ರ, ನಿನ್ನ ಸಂತೋಷಕ್ಕೆ ನಾನು ಭಂಗ ತರಲಾರೆ.”

“ಅದೇನು? ನನಗೆ ಹೇಳು”–ಅವನ ಕೈಹಿಡಿದು ಕೇಳಿದೆ. ಒಂದು ನಿಮಿಷ ಹೇಳಬೇಕೋ ಬೇಡವೋ ಎಂದು ಆವನು ಚಿಂತಿಸುವಂತಿತ್ತು. ಅವನ ಮನಸ್ಸಿನಲ್ಲಿರುವುದನ್ನು ಹೇಳಲೇಬೇಕೆಂದು ಬೇಡಿಕೊಂಡೆ.

“ನಾನು ಹೇಳಿದರೆ ನೀನು ತುಂಬಾ ಸಂಕಟಪಡಬೇಕಾಗುತ್ತದೆ” ಎಂದ. “ನಾನು ಸಂಕಟಕ್ಕೀಡಾಗುತ್ತೇನೆಂಬ ಯೋಚನೆಯೇನೂ ನಿನಗೆ ಬೇಡ.” ಏನೇ ಆಗಲಿ, ಅವನು ಆ ವಿಷಯ ಹೇಳುವಂತೆ ಕಡ್ಡಾಯವಾಗಿ ಒತ್ತಾಯಪಡಿಸಿದೆ. ಆ ಮಾತುಗಳು ಅವನ ಭಾರವಾದ ಹೃದಯದಿಂದ ಹೊಮ್ಮಿದಂತಿದ್ದುವು.

“ನಾನು ನಿನ್ನ ಸ್ನೇಹಿತನಾದದ್ದರಿಂದ ಇದನ್ನೆಲ್ಲ ಹೇಳಬೇಕೆನಿಸುತ್ತದೆ. ಆದರೆ ಇದರಿಂದ ನಿನಗೆ ಅತೀವ ದುಃಖವುಂಟಾಗುತ್ತದೆಂದು ನೆನೆದಾಗ ಹೇಳಬಾರದೆನಿಸುತ್ತದೆ.”

“ನಿನ್ನ ಆಶಾ ರಸ್ತೆಯಲ್ಲಿ ಯಾರೋ ಗಂಡಸರೊಂದಿಗೆ ಮಾತನಾಡುತ್ತಿದ್ದುದನ್ನು ನೋಡಿದೆ.”

“ಎಲ್ಲಿ?” ನನಗೆ ಉಸಿರು ಸಿಕ್ಕಿಹಾಕಿಕೊಂಡಂತಾಗಿತ್ತು.

“ನಿಮ್ಮ ಮನೆಯ ಹಿಂದಿನ ಗಲ್ಲಿಯಲ್ಲಿ. ನನ್ನನ್ನು ಕಂಡವಳೇ ಮಾತು ನಿಲ್ಲಿಸಿ ಅವಸರವಾಗಿ ಹೊರಟುಹೋದಳು.”

ಬೇರೆ ಮಾತಿಲ್ಲದೆ ಅವಸರವಾಗಿ ಮನೆಯ ಕಡೆ ಹೊರಟೆ. ನನ್ನ ಸ್ನೇಹಿತ ಸ್ವಲ್ಪ ಹೊತ್ತು ನನ್ನನ್ನು ತಡೆಯಲು ಯತ್ನಿಸಿದ. ಕೋಪ, ಅಸೂಯೆ, ಅಣಕ ನನ್ನ ಹೃದಯದಲ್ಲಿ ಒಂದರ ಹಿಂದೊಂದು ನುಗ್ಗಿದವು. ಬಹಳ ಹೊತ್ತು ನನ್ನ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ನನ್ನಿಂದಾಗಲಿಲ್ಲ.

ಈಗಲೂ ಅವನ ಧ್ವನಿಯಲ್ಲಿ ಕೋಪ ಉಕ್ಕುವಂತಿದ್ದುದು ನನಗೆ ಆಶ್ಚರ್ಯವನ್ನುಂಟು ಮಾಡಿತು. ಅವನ ಹೆಂಡತಿ ಯಾರೊಡನೆಯೊ ಮಾತನಾಡಿದಳು ಎಂಬುದಷ್ಟರಿಂದಲೇ ಅವನೇಕೆ ಅಷ್ಟು ಕೋಪೋದ್ರಿಕ್ತನಾಗಬೇಕು? ಅದೂ ಅವಳು ಆತನನ್ನು ಅಷ್ಟೊಂದು ಪ್ರೀತಿಸುವಾಗ?

“ಅದರಲ್ಲಿ ತಪ್ಪೇನಿದೆ, ಗುಲಾಮುದ್ದೀನ್. ಆಕೆ ಯಾರೊಡನೆಯೂ ಮಾತನಾಡಬಾರದೇನು?”

“ನೀವೇನು ಹೇಳುತ್ತಿದ್ದೀರಿ ಜನಾಬ್? ‘ಪರದಾ’ದಲ್ಲಿರುವ ಹೆಂಗಸೊಬ್ಬಳು ಬೀದಿಯಲ್ಲಿ ಆಗಂತುಕನೊಬ್ಬನೊಡನೆ ಮಾತನಾಡುತ್ತಾಳೆಂದು ನಿರೀಕ್ಷಿಸುತ್ತೀರಾ? ಹಾಗಾದರೆ ವಂಶದ ಗೌರವ ಎಲ್ಲಿ?”

“ಆ ಹೆಂಗಸಿನ ಮೇಲೆ ಯಾವ ಪರದಾವೂ ಇಲ್ಲವಲ್ಲ?” ನನ್ನ ಹೆಂಡತಿ ನಗುತ್ತಾ ಕೇಳಿದಳು.

" ಈಗ ಯಾರಿಗಾಗಿ ಅವಳು ಪರದಾ ಹಾಕಬೇಕು ? " ಗುಲಾಮುದ್ದೀನನ ಧ್ವನಿಯಲ್ಲಿ ವ್ಯಂಗ್ಯವಿತ್ತು. " ಈಗ ಅವಳು ಯಾವುದಕ್ಕೂ ಕೊರಗಬೇಕಾಗಿಲ್ಲ. ಅವಳು ಯಾರ ಹೆಂಡತಿಯೂ ಅಲ್ಲ. ಯಾರ ಮಗಳೂ ಅಲ್ಲ. ಅವಳಿಗೆ ಕಸೂತಿ ಚೆನ್ನಾಗಿ ಗೊತ್ತಿರುವುದರಿಂದ ಯಾರ ಹಂಗೂ ಇಲ್ಲದೆ ಅವಳ ಅನ್ನ ಅವಳು ಸಂಪಾದಿಸಿಕೊಂಡು ಹಾಯಾಗಿದ್ದಾಳೆ. "

"ಬೇರೆಯವರೊಂದಿಗೆ ಮಾತನಾಡುವುದರಲ್ಲಿ ತಪ್ಪೇನಿದೆ ಗುಲಾಮುದ್ದೀನ್?

ನೋಡು ನನ್ನ ಹೆಂಡತಿಯಿದ್ದಾಳೆ, ಅವಳು ಯಾರೊಡನೆ ಬೇಕಾದರೂ ಮಾತನಾಡಬಹುದು, ಹರಟಬಹುದು, ನಗಬಹುದು, ಅವರೊಂದಿಗೆ ಹೋಗಬಹುದು. ಅದರಿಂದ ನನಗೇನೂ ಅನ್ನಿಸುವುದಿಲ್ಲ. "

" ನಿಜವಾಗಿಯೂ ? " ಅವನಿಗೆ ಆಶ್ಚರ್ಯವಾಗಿತ್ತು.

" ನಿಜವಾಗಿಯೂ "

" ನಿಮ್ಮಂಥ ಜನಗಳ ವಿಚಾರ ಬೇರೆ ಜನಾಬ್. ಇದು ಪಂಜಾಬು, ಬೊಂಬಾಯಿಯಲ್ಲ. ನಮ್ಮ ನರಗಳಲ್ಲಿ ಹರಿಯುತ್ತಿರುವುದು ಬಿಸಿರಕ್ತ. ನಮ್ಮ ಹೆಂಡತಿಯರು ಹೊರಗಿನವರೊಂದಿಗೆ ಮಾತನಾಡುವುದು ? ಅದೂ ಬೀದಿಯಲ್ಲಿ ....ಇಲ್ಲ....ಅವಳ ಅದೃಷ್ಟ ನಾನು ಅವಳ ಗಂಡನಾಗಿದ್ದುದು. ಬೇರೆ ಯಾರಾದರೂ ಆಗಿದ್ದರೆ ಅಲ್ಲಿಯೆ ಅವಳನ್ನು ಕೊಂದುಬಿಡುತ್ತಿದ್ದರು. ಕುದುರೆಯ ಪೃಷ್ಠದ ಮೇಲೆ ಒಂದು ಏಟು ಹಾಕಿ ಅವನ ಮನಸ್ಸಿನ ಬಿಸಿಯನ್ನು ಶಾಂತಗೊಳಿಸಿದ.

" ಇಷ್ಟಕ್ಕಾಗಿಯೇ ಅವಳನ್ನು ಬಿಟ್ಟೆಯಾ ?" ನನಗಾದ ಅಸಮಾಧಾನ ನನ್ನ ಧ್ವನಿಯಲ್ಲಿ ಮೂಡಿತ್ತು.

" ಇಲ್ಲ. ಇಲ್ಲ. ಜನಾಬ್. ನನಗೆ ವಿಪರೀತವಾದ ಕೋಪಬಂದಿತ್ತು, ಆದರೆ ನಾನು ಹುಚ್ಚನಾಗಿರಲಿಲ್ಲ. ನಾನು ಮನೆಗೆ ಬಂದಾಗ ಸಿಟ್ಟಿನಿಂದ ಕಂಪಿಸುತ್ತಿದ್ದೆ. ಆಶಾ ನನ್ನತ್ತ ನೋಡಿ ಮಧುರವಾಗಿ ನಕ್ಕಳು. ಒಹ್....ಎಂಥ ಸೊಗಸಾದ ನಗೆ ! ನನಗೆ ಅವಳತ್ತ ನೋಡಲೂ ಆಗಲಿಲ್ಲ. ನಾನು ಮಾತನಾಡಲು ಬಾಯಿ ತೆರೆಯುವಷ್ಟರಲ್ಲಿಯೇ ಅವಳು ತುಟಿಯ ಮೇಲೆ ಬೆರಳಿಟ್ಟು ಸುಮ್ಮನಿರುವಂತೆ ಸೂಚಿಸಿದಳು. ಆಶಾ ಮಗು ಮಲಗಿಸಲು ಪ್ರಯತ್ನಿಸುತ್ತಿದ್ದಳು. ಅವಳು ಹೇಳುತ್ತಿದ್ದ ಜೋಗುಳದ ಮಧುರತೆ ನನ್ನ ಕೋಪವನ್ನು ತಣ್ಣಗೆ ಮಾಡುವುದರಲ್ಲಿ ಬಹಳವಾಗಿ ಸಹಕರಿಸಿತು. ಮಗು ನಿದ್ರೆ ಹೋದಮೇಲೆ ನಾನು ಅವಳ ಕಿವಿಯಲ್ಲಿ ಹೇಳಿದೆ: " ಆಶಾ ಈ ದಿನ ಯಾರೊಂದಿಗೊ ರಸ್ತೆಯಲ್ಲಿ ಮಾತನಾಡುತ್ತಿದ್ದೆಯಂತೆ ?"

ಅವಳು ಗಾಬರಿಯಾದಂತಾದರೂ ಸಂಯಮದಿಂದಲೇ ಉತ್ತರಿಸಿದಳು, " ಯಾರೊಂದಿಗೂ ಇಲ್ಲವಲ್ಲ ! ಏಕೆ ?"

"ಅಜೀಜ್ ಹೇಳಿದ. ಏಕೆ ಸುಳ್ಳು ಹೇಳುತ್ತೀಯಾ ?" ನನ್ನ ಧ್ವನಿ ಹರಿತ ವಾಗಿತ್ತು.

"ಸಖೀನ ಮನೆ ಗೊತ್ತಾಗಲಿಲ್ಲ. ದಾರಿಯಲ್ಲಿ ಹೋಗುತ್ತಿದ್ದ ಯಾರನ್ನೊ ಕೇಳಿದೆ." ಅವಳ ದನಿ ನಿಷ್ಕಳಂಕವಾಗಿತ್ತು. "ಏನೇ ಆಗಲಿ, ಗೌರವಸ್ಥ ಗೃಹಿಣಿ ಯೊಬ್ಬಳು ಯಾವನೊ ದಾರಿಹೋಕನೊಂದಿಗೆ ಮಾತನಾಡಬಾರದಿತ್ತು."

"ಜೀ ಹುಜೂರ್. " ಅವಳು ನಕ್ಕು "ಸಖೀನ ಮನೆ ಬದಲಾಯಿಸಿದ್ದಳು. ಆದರಿಂದ ಯಾರನ್ನೊ ಕೇಳಬೇಕಾಯಿತು. ಹೋಗಲಿ ಬಿಡಿ. ಮುಂದೆ ಹಾಗೆ ಮಾಡುವುದಿಲ್ಲ." ಅವಳ ಧ್ವನಿಯಲ್ಲಿ ಒಂದು ರೀತಿಯ ಅಣಕವಿದ್ದರೂ ಆ ಮಾತು ನನಗೆ ಸಮಾಧಾನ ನೀಡಿತು. ನಾನೂ ನಕ್ಕೆ. ನಮ್ಮ ಜಗಳ ಅಲ್ಲಿಗೆ ಕೊನೆಗೊಂಡು ಎಂದಿನಂತೆ ನಾವು ಪ್ರೀತಿಯಿಂದಿದ್ದೆವು.

ಮುಂದಿನ ಕೆಲವು ತಿಂಗಳುಗಳಲ್ಲಿ ಆಶಾ ರಸ್ತೆಯಲ್ಲಿ ಯಾರೊಡನೆಯೋ ಮಾತನಾಡುವ ಬಗ್ಗೆ ನಾನು ಅನೇಕರಿಂದ ಕೇಳಿದೆ. ಈ ವಿಷಯದಲ್ಲಿ ಅವಳೊಂದಿಗೆ ಚರ್ಚಿಸಿದೆ, ಒರಟಾಗಿ ಬಯ್ದೆ, ಆದರೂ ಅವಳು ಪ್ರತಿ ಸಾರಿಯೂ ಏನಾದರೊಂದು ಕಾರಣ ಹೇಳಿ ಕ್ಷಮಿಸುವಂತೆ ನಕ್ಕು ತೇಲಿಸಿಬಿಡುತ್ತಿದ್ದಳು. ಕಡೆಗೆ ಅವಳ ಮಾತಿಗಿಂತ ಬೇರೆಯವರು ಹೇಳಿದ ವರದಿಯಲ್ಲಿ ಸತ್ಯವಿರುವಂತೆ ಕಂಡರೂ, ಅವಸರವಾಗಿ ಯಾವ ತೀರ್ಮಾನಕ್ಕೂ ಬರಬಾರದೆಂದು ನಿರ್ಧರಿಸಿದೆ. ನನಗೆ ನಾಗೇ ಹತೋಟಿಗೆ ತಂದುಕೊಂಡು ಅವಳ ಚಲನ ವಲನದ ಬಗ್ಗೆ ಕಣ್ಣಿರಿಸಿದೆ.

ಒಂದು ದಿನ ಅದು ಸತ್ಯವಾಯಿತು. ನನಗೆ ವಿಪರೀತವಾದ ತಲೆನೋವಿ ನಿಂದಾಗಿ ಜ್ವರಬಂದಂತಿತ್ತು. ಆ ದಿನ ಮಧ್ಯಾಹ್ನದ ಮೇಲೆ ಸಖೀನ ಮನೆಗೆ ಹೋಗುವುದಾಗಿ ಆಶಾ ಬೆಳಗ್ಗೆಯೇ ಹೇಳಿದ್ದಳು. ಇದು ನನ್ನಲ್ಲಿ ಕುತೂಹಲ ಕೆರಳಿಸಿತ್ತು. ನಿತ್ಯದಂತೆ ರಾತ್ರಿ ತಡವಾಗಿ ಮನೆಗೆ ಬರುವ ಬದಲು ಸಂಜೆಗೆ ಮುಂಚೆಯೇ ಕೆಲಸದಿಂದ ಬಂದೆ. ಸಖೀನ ನಮ್ಮ ಮನೆಯಿಂದ ಸ್ವಲ್ಪ ದೂರದಲ್ಲೇ ವಾಸಿಸುತ್ತಿದ್ದುದು. ಸಖೀನ ಮನೆಯ ಬೀದಿಯ ತಿರುವಿನಲ್ಲಿ ಆಶಾ ಹೋಗುತ್ತಿದ್ದು ದನ್ನು ನೋಡಿದೆ. ಎದುರುಗಡೆಯಿಂದ ಆಕೆಯ ಹತ್ತಿರ ಒಬ್ಬ ಬಂದುದನ್ನು ನಾನೇ ಕಣ್ಣಾರ ಕಂಡೆ. ಹಾಗೇ ಮರೆಯಲ್ಲಿ ನಿಂತೆ. ಅವರಿಬ್ಬರೂ ಭೇಟಿಯಾಗಿ ಮೂರು ನಾಲ್ಕು ನಿಮಿಷಗಳ ಕಾಲ ಮಾತನಾಡಿದರು. ಅನಂತರ ಆಶಾ ಸಖೀನ ಮನೆಗೆ ಹೊರಟು ಹೋದಳು.

ನಾನು ಕೋಪದ ತೀವ್ರತೆಯಿಂದ ನಡುಗುತ್ತಿದ್ದೆ. ಆ ಅಯೋಗ್ಯನನ್ನು ಅಲ್ಲೆ ಆ ಕ್ಷಣದಲ್ಲೇ ಕೊಂದುಬಿಡಬೇಕೆನಿಸಿತು. ಮರುಕ್ಷಣದಲ್ಲಿಯೇ ನನ್ನ ಹೆಂಡತಿಯದೇ ತಪ್ಪಿರುವಾಗ ಅವನನ್ನೇಕೆ ಕೊಲ್ಲಬೇಕೆಂದು ಯೋಚಿಸಿದೆ. ಆ ರಾಕ್ಷಸಿಯನ್ನೆ ಕೊಂದುಬಿಡಬೇಕು ಎಂದು ನಿರ್ಧರಿಸಿದೆ. "ಇದನ್ನು ಬಿಟ್ಟು ಅವಳ ಬಗ್ಗೆ ನಿನ್ನದೇನೂ ವಿರೋಧವಿಲ್ಲವೆ ಗುಲಾಮುದ್ದೀನ್ ?"

“ ಏನೂ ಇಲ್ಲ. ಅವರ ಮಧ್ಯೆ ಮತ್ತೇನೋ ನಡೆದಿದೆ ಎಂದೂ ಯೋಚಿಸಲಿಲ್ಲ. ಅವರು ಏನು ಮಾತನಾಡಿದರೆಂದು ನನಗೆ ತಿಳಿಯದಾದರೂ ಅದು ಬರಿಯ ಔಪಚಾರಿಕ ಮಾತು ಎಂದು ಊಹಿಸಿದೆ.”

“ ಬರಿಯ ಮಾತೆ ! ಹಾಗೆ ಆಕೆ ವರ್ತಿಸಲು ಕಾರಣವೇನು ?”. “ ಹೆಂಗಸು ಜಾತಿಯ ಗುಣವೇ ಹಾಗೆ ಜನಾಬ್.” ತುಟಿ ಮೀರಿ ಬಂದ ಈ ಮಾತುಗಳಿಂದಾಗಿ ಆತ ಸರಕ್ಕನೆ ನನ್ನ ಹೆಂಡತಿಯತ್ತ ತಿರುಗಿ “ ಇಂಥ ಮಾತನಾಡಿದುದಕ್ಕಾಗಿ ಕ್ಷಮಿಸಿ, ಅಮ್ಮ ” ಎಂದು ಹೇಳಿ ಮುಂದುವರಿದ.

“ ನಿಜ ಹೇಳಬೇಕೆಂದರೆ ಹೆಂಗಸರು ತಮ್ಮ ಮೂಗಿನ ನೇರಕ್ಕಿಂತ ಮುಂದೆ ಯೋಚಿಸುವುದಿಲ್ಲ ಸೇಠ್‌ಜೀ. ಆಶಾಳಿಗೆ ಸ್ವಲ್ಪವಾದರೂ ಬುದ್ಧಿ ಇದ್ದಿದ್ದರೆ ಅಲ್ಲ ಅವಳನ್ನು ಹೆಂಗಸಾಗಿ ಸೃಷ್ಟಿಸುತ್ತಿರಲಿಲ್ಲ.”

ಅಂಥ ಮನೋಭಾವನೆಯನ್ನು ತಲೆ ಅಲ್ಲಾಡಿಸುವುದರ ಮೂಲಕವೂ ನಾನು ಉತ್ತೇಜಿಸಲಿಲ್ಲ. ಅದು ಅವನನ್ನು ಸಂದಿಗ್ಧದಲ್ಲಿ ಸಿಲುಕಿಸಿದ್ದರಿಂದ ಮೌನವಾದ. ನನಗೂ ಮಾತನಾಡುವ ಆಸೆಯಾಗಲಿಲ್ಲ. ಆದರೆ ನನ್ನ ಪಕ್ಕದಲ್ಲಿಯೇ ಕುಳಿತಿದ್ದ ನನ್ನ ಮಗ ಇದ್ದಕ್ಕಿದಂತೆಯೆ ಕೇಳಿದ “ ಆಮೇಲೇನಾಯಿತು ಅಪ್ಪ ?”

“ ಅವನನ್ನೇ ಕೇಳು ” ಚುಟುಕಾಗಿ ಉತ್ತರಿಸಿದೆ.

ಗುಲಾಮುದ್ದೀನ್ ಮುಂದುವರಿಸಿದ, “ ಆ ಕೆಟ್ಟ ಹೆಂಗಸನ್ನು ಕೊಲ್ಲುವುದೇ ಸರಿಯೆನಿಸಿತು. ನೇರವಾಗಿ ಮನೆಗೆ ಬಂದು ಅವಳಿಗಾಗಿ ಕಾಯುತ್ತಾ ಕುಳಿತೆ. ಒಂದೆರಡು ಗಂಟೆಗಳನಂತರ ಆಕೆ ಬಂದಳು. ಆ ಕಾಲದಲ್ಲಿ ಲಕ್ಷಾಂತರ ಯೋಚನೆಗಳು ನನ್ನ ತಲೆಯುಲ್ಲಿ ಹಾಯ್ದುಹೋದವು. ಅವಳನ್ನು ಕೊಂದುಬಿಡಲೆ ? ಅದರಿಂದ ಏನು ಪ್ರಯೋಜನ ? ಒಬ್ಬಳು ನಿಸ್ಸಹಾಯಕ ಹೆಂಗಸನ್ನು ಕೊಲ್ಲುವುದರಲ್ಲಿ ಏನು ದೊಡ್ಡಸ್ತಿಕೆ ? ಅದೊಂದು ಕೀಳು ನಡತೆಯಲ್ಲವೆ ? ಅದಕ್ಕಿಂತ ಅವಳಿಂದ ಕಾನೂನು ಪ್ರಕಾರ ಬಿಡುಗಡೆ ಪಡೆಯುವುದು ಮೇಲಲ್ಲವೆ? ಕಡೆಯ ಯೋಚನೆ ನನ್ನ ಮೆದುಳಿನಲ್ಲಿ ಬೇರೂರಿ ನಿಂತಿತು. ಕಡೆಗೆ ಅವಳು ಒಳಬಂದಾಗ ನಾವಿಬ್ಬರೂ ಸ್ವಲ್ಪ ಹೊತ್ತು ಏಕಾಂಗಿಗಳಂತಿದ್ದೆವು. ಮೌನ ಮುರಿದು ನಾನೆ ಕೇಳಿದೆ, “ ಏನು ರಾಣಿ ಸಾಹೇಬರು ಯಾರ ಸಂತೋಷಾರ್ಥವಾಗಿ ತಾವು ರಸ್ತೆಯಲ್ಲಿ ಹರಟುತ್ತಿದ್ದಿರಿ ?”

“ ಯಾರೊಡನೆಯೂ ಇಲ್ಲವಲ್ಲ ! ”

“ಹೊಲಸು ಹೆಂಗಸೆ, ನನ್ನ ಕಣ್ಣಿಂದ ಕಂಡುದಕ್ಕೂ ಸುಳ್ಳು ಹೇಳುತ್ತೀಯಾ?” ಅವಳ ಕುತ್ತಿಗೆಗೆ ಕೈಹಾಕಿ ಕೂಗಿದೆ. ಕಳೆದೆರಡು ಗಂಟೆಗಳಿಂದ ನನ್ನ ಅಧೀನವಾಗಿದ್ದ ನನ್ನ ಕೋಪ ಮತ್ತೆ ನನ್ನನ್ನು ತನ್ನ ಅಧೀನಕ್ಕೆ ತೆಗೆದುಕೊಂಡಿತು. ಅವಳಿಗೂ ಕೋಪ ಬಂದಿರಬೇಕು, ನನ್ನ ಸಮಕ್ಕೆ ಧ್ವನಿ ಏರಿಸಿ “ ಬಿಡು ನನ್ನನ್ನು.

ಹೌದು ನಾನು ಯಾರೊಡನೆಯೋ ಮಾತನಾಡುತ್ತಿದ್ದೆ. ಒಂದು ನಿಮಿಷವೂ ನಾನು ಯಾರೊಡನೆಯೂ ಮಾತನಾಡಬಾರದೇನು ?"

ಅವಳನ್ನು ಬಲವಾಗಿ ಮೂಲೆಯತ್ತ ತಳ್ಳಿ "ನಾನು ಲೆಕ್ಕವಿಲ್ಲದಷ್ಟು ಸಾರಿ ಹೇಳಿದರೂ ನೀನು ಹಾಗೇ ಮಾಡುತ್ತಿಯಾ ?" ಎಂದೆ.

"ಹೌದು, ಅವನು ನನ್ನ ಬಾಲ್ಯಸ್ನೇಹಿತ"–ಕಡೆಗೊಮ್ಮೆ ಅವಳ ಬಾಯಿಂದ ಈ ಮಾತು ಹೊರಬಿತ್ತು. ನಮ್ಮ ಜಗಳ ಬಹಳ ಹೊತ್ತಿನವರೆಗೆ ನಡೆಯಿತಾದರೂ ಅದು ಬರಿಯ ಪರಸ್ಪರ ದೂಷಣೆಯಾಗಿತ್ತು. ಕಡೆಗೆ ನಾನು ಅವಳಿಂದ ಬಿಡುಗಡೆ ಪಡೆಯುವ ತೀರ್ಮಾನಕ್ಕೆ ಬಂದೆ."

"ಇದು ಅವಳಿಗೆ ಬಹಳ ದುಃಖವುಂಟುಮಾಡಿರಬೇಕು" ಎಂದೆ ನಾನು.

"ಹೌದು. ಆದರೂ ಈ ದುರವಸ್ಥೆ ಅವಳಿಗೆ ಬರಬೇಕಾದ್ದೆ. ಅವಳು ನನ್ನನ್ನು ಅತಿಯಾಗಿ ಪ್ರೀತಿಸುತ್ತಿದ್ದಳು. ನಮ್ಮ ಸಿಟ್ಟೆಲ್ಲ ಇಳಿದು ಸಮಾಧಾನ ಸ್ಥಿತಿಗೆ ಬಂದಮೇಲೆ ಅವಳು ನನ್ನ ಕೈಹಿಡಿದುಕೊಂಡು ಅಳುತ್ತಾ ಕ್ಷಮಿಸುವಂತೆ ಬೇಡಿಕೊಂಡಳು. ಆದರೆ ನನಗೆ ಮಾತ್ರ ಕರುಣೆ ಬರಲಿಲ್ಲ.

"ನೀನು ಹಾಗೆ ಮಾಡಬಾರದಾಗಿತ್ತು ಗುಲಾಮುದ್ದೀನ್", ನನ್ನ ಧ್ವನಿಯಲ್ಲಿ ಪ್ರತಿಭಟನೆಯಿತ್ತು.

"ಜನಾಬ್, ನಿಮಗೆ ನನ್ನ ಹೇಳಿಕೆ ಸರಿಬರಲಿಲ್ಲ. ಆದರೆ ಹೆಂಗಸರು ಕಾಲಲ್ಲಿರುವ ಎಕ್ಕಡದಂತೆ . . . ಒಮ್ಮೆ ನಿಮ್ಮ ಕಾಲಿನ ಎಕ್ಕಡದ ಅಳತೆ ಸರಿ ಹೋದರೆ ಆಯಿತು. ಇಲ್ಲವಾದರೆ ನೀವೆಷ್ಟೇ ಸಾರಿ ರಿಪೇರಿ ಮಾಡಿಸಿದರೂ ಅದು ನಿಮ್ಮ ಕಾಲಿಗೆ ಸರಿಹೊಂದುವುದಿಲ್ಲ. ಒಂದೇ ಸರಿಯಾದ ದಾರಿ ಎಂದರೆ, ಅದನ್ನು ಬಿಸಾಡುವುದು. ಇಲ್ಲದಿದ್ದರೆ ಒಂದಲ್ಲ ಒಂದು ಜಾಗದಲ್ಲಿ ಅದು ನಿಮಗೆ ತೊಂದರೆ ಕೊಟ್ಟೇಕೊಡುತ್ತದೆ."

"ನಿನಗೆ ನಿಜ ಹೇಳಲೇ, ಗುಲಾಮುದ್ದೀನ್" ಎಂದೆ ನಾನು.

"ದಯವಿಟ್ಟು ಹೇಳಿ ಜನಾಬ್"

"ನೀನು ಬಹಳ ದೊಡ್ಡದಾಗಿ ಮಾತನಾಡುತ್ತೀಯಾ. ಆದರೆ ಈಗಷ್ಟೇ ರಸ್ತೆಯ ಮೇಲೆ ಓಡಿಹೋಗಿ ಆಕೆಯನ್ನು ಮಾತನಾಡಿಸಿದೆ. ಅವಳೇನೂ ನಿನ್ನ ಹತ್ತಿರ ಓಡಿಬರಲಿಲ್ಲ. ಅವಳ ಮಟ್ಟಿಗೆ ಹೇಳುವುದಾದರೆ ನಿನಗೆ ಕರುಣೆ ತೋರಿದವಳಂತೆಯೇ ನಡೆದುಕೊಂಡಳು."

ನಗೆಯ ಎಳೆಯೊಂದು ಅವನ ಮುಖದಲ್ಲಿ ಮಿಂಚಿತು. "ಹುಜೂರ್, ಅವಳೇನೂ ಈಗ ನನ್ನ ಹೆಂಡತಿಯಲ್ಲ. ಈಗ ಅವಳು ಹೆಂಗಸು, ನಾನು ಗಂಡಸು. ಯಾವ ಗಂಡು ಅಂಥ ಸುಂದರಿಯಾದ ಹೆಣ್ಣಿನ ಕೃಪೆಗೆ ಸೊಂಟ ಬಗ್ಗಿಸುವುದಿಲ್ಲ ?"

ನಾವು ಇಳಿದುಕೊಂಡಿದ್ದ ಹೊಟೇಲಿನ ಮುಂದೆ ಟಾಂಗಾದಿಂದ ಇಳಿಯುತ್ತ

ಪ್ರಶ್ನಿಸಿದೆ, "ಹಾಗಾದರೆ ನೀನು ಮತ್ತೆ ಅವಳನ್ನು ಹೆಂಡತಿಯೆಂದು ಪರಿಗಣಿಸುವುದಿಲ್ಲ ?"

"ನಾನು ಎಕ್ಕಡದ ವಿಚಾರ ಹೇಳಲಿಲ್ಲವೆ, ಹುಜೂರ್".

"ಆಕೆಯನ್ನು ಬಿಟ್ಟು ಎಷ್ಟು ದಿನವಾಯಿತು"? ಜೇಬಿನಿಂದ ಗಾಡಿ ಬಾಡಿಗೆ ತೆಗೆಯುತ್ತಾ ಕೇಳಿದೆ.

"ಒಂದೂವರೆ ವರ್ಷ."

"ಈ ದಿನಗಳಲ್ಲಿ ಅವಳ ಕೆಟ್ಟ ನಡತೆಯ ಬಗ್ಗೆ ಮತ್ತೇನಾದರೂ ಸಮಾಚಾರ ಕೇಳಿದೆಯಾ ?"

"ಆ ಎಕ್ಕಡ ನನ್ನ ಕಾಲಿಗೆ ಹೊಂದಲಿಲ್ಲ. ಅಷ್ಟೇ ನನಗೆ ತಿಳಿದಿರುವುದು." ನನ್ನಿಂದ ಹಣ ಪಡೆದು ಕುದುರೆಗೆ ಒಂದು ಏಟು ಹಾಕಿ ಗಾಡಿ ಓಡಿಸಿಕೊಂಡು ಅವನು ಹೊರಟೇ ಹೋದ.

"ಆ ಟಾಂಗಾವಾಲ ಒಳ್ಳೆ ಧೈರ್ಯಶಾಲಿ ಮನುಷ್ಯ ಅಲ್ಲವೆ ?" ಹೊಟೇಲಿನ ಮೆಟ್ಟಲು ಹತ್ತುತ್ತಾ ನನ್ನ ಹೆಂಡತಿ ಕೇಳಿದಳು.

"ಆದರೆ ಯಾವುದೋ ಕ್ಷುಲ್ಲಕ ಕಾರಣಕ್ಕೆ ಹೆಂಡತಿಯನ್ನು ಬಿಟ್ಟಿದ್ದು ಅಸಾಧು"–ನಾನು ಟೀಕಿಸಿದೆ.

"ನಿಜ. ಆದರೆ ಆಕೆ ತಾನೇ ತನ್ನ ಗಂಡನಿಗೆ ಕೋಪ ತರಿಸುತ್ತದೆ ಎಂಬುದನ್ನು ತಿಳಿದೂ ಯಾಕಾದರೂ ರಸ್ತೆಯಲ್ಲಿ ಅವನೊಂದಿಗೆ ಮಾತನಾಡಬೇಕು ? ಅಷ್ಟಾದರೂ ಆತ ಅವಳನ್ನು ಕೊಲ್ಲಲಿಲ್ಲ. ಬಿಡುಗಡೆ ಮಾತ್ರ ಪಡೆದ. ಈ ಜನಕ್ಕೆ ಇಂಥ ವಿಷಯಗಳಲ್ಲಿ ಕೊಲೆ ಪ್ರಥಮ ವರ್ತನೆ."

"ಹುಶಾರಾಗಿರು" ಎಂದೆ ನಾನು. ಮಕ್ಕಳಾಗಲೇ ಹೊಟೇಲಿನ ಮೆಟ್ಟಲಿನ ತುದಿಯಲ್ಲಿದ್ದರು.

"ಹುಶಾರಾಗಿರು. ನಾನೂ ಎಂದಾದರೊಂದು ದಿನ ನಿನ್ನಿಂದ ಬಿಡುಗಡೆ ಪಡೆಯಬಹುದು ?"

"ನೀವು ? ನೀವು ಎಂದಾದರೂ ಹಾಗೆ ಮಾಡುವುದುಂಟೆ ?" ಎಂದು ನನ್ನತ್ತ ಮಾದಕವಾಗಿ ನಗೆ ಬೀರಿದಳು. ಅವಳ ಪಾರವಿಲ್ಲದ ಆ ಕಣ್ಣೋಟದಲ್ಲಿ ಸಿಕ್ಕಿ ನಾನು ಜಗತ್ತನ್ನೇ ಮರೆತೆ.

ಅನು : ಹ. ಕ. ರಾಜೇಗೌಡ

ಕೊವಾನಾ

# ನಿರಾಶಾವಾದಿ

ಈಶ್ವರನ ನವ ಚೈತನ್ಯ
ಹುದುಗಿ ಹೋಗಿ........
ಅಣುರೇಣು-ತೃಣ ಕಾಷ್ಠ
ಗಳಲ್ಲಿಯೂ ಕಾಡುತಿದ್ದ ಚೇಷ್ಟೆ !
ಬತ್ತಿ ಬರಡಾಗಿ........
ಆಶೆ ಆಕಾಂಕ್ಷೆ ಮುದುರಿ ಹೋಗಿ
ಉಳಿದಿಹುದು ಬರಿನೆನಪು
ಸಾಕ್ಷಾತ್ಕಾರವಾಗಿಲ್ಲ !
ಬರಸೆಳೆದು ಚುಂಬಿಸುವ
ಆಸೆಯಾಗಿತ್ತು........"
ನೆನೆಯುತ್ತ........ಕಾಲ ಕಳೆಯುತ್ತ
ಸಮಯ ಕಾಯುತ್ತ ಕಾಲವೇ........
........................ಹೋಯ್ತು.
ಯಾರೋ........ಯಾರನೋ ಮೆಚ್ಚಿಸ
ಹೋಗಿ, ಹಣ ಬರಿದಾಗಿ ಮುಪ್ಪು !
ಎಲ್ಲ ಹಾಳಾಯಿತೆಂದಂತೆ........
........................ಎನಗಾಯ್ತು.
" ಬಾಳು ಬಂಗಾರ, ಬದುಕು ಶೃಂಗಾರ-"
ಎಲ್ಲೋ........ಒಬ್ಬಿಬ್ಬರಿಗೆ ಮಾತ್ರ.

# ಕಮ್ಮಟದ ಕಿಡಿಗಳು

## 'ವಡ್ಡಾರಾಧನೆ'ಯಲ್ಲಿ ಆಡುಮಾತಿನ ಶೈಲಿ

ನಾವು ಯಾರಿಗಾದರೂ ಒಂದು ಕತೆಯನ್ನು ಹೇಳುತ್ತಿದ್ದೇವೆ ಎಂದಿಟ್ಟುಕೊಳ್ಳೋಣ. ಕತೆಯನ್ನು ಹೇಳುವಾಗ ಮಧ್ಯೆ (ಹೊಸ) ಪಾತ್ರವೊಂದರ ಪ್ರವೇಶವಾಗುತ್ತದೆ, ಆಗ ಆ ಪಾತ್ರದ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬೇಕೆನಿಸುತ್ತದೆ ಎಂದೂ ಇಟ್ಟುಕೊಳ್ಳೋಣ. ಈ ರೀತಿಯ ಎನಿಸಿಕೆ ಎಷ್ಟೋ ಸಲ ವಾಕ್ಯಮಧ್ಯದಲ್ಲಿ ಬರುವುದೂ ಅನುಭವಕ್ಕೆ ಬಂದಿರುವ ವಿಷಯವೇ. ಇಂಥ ಸಂದರ್ಭದಲ್ಲಿ ಏನು ಮಾಡುತ್ತೇವೆ? ಮೊದಲುಮಾಡಿರುವ ವಾಕ್ಯವನ್ನು ಅಲ್ಲಿಗೇ ನಿಲ್ಲಿಸಿ, ಆ ಪಾತ್ರಕ್ಕೆ ಸಂಬಂಧಿಸಿದಂತೆ ಪ್ರಕೃತವಿದ್ದಷ್ಟು ವಾಕ್ಯಗಳನ್ನಾಡಿ, ಮತ್ತೆ ಆ ವಾಕ್ಯವನ್ನು ಬಿಟ್ಟ ಕಡೆಯಿಂದಲೇ ಆರಂಭಮಾಡುವುದೂ ಉಂಟು. ಉದಾಹರಣೆಗೆ ನೋಡಬಹುದು: "ಹೀಗೆ ಅವರಿಬ್ಬರೂ ಸುಖದಿಂದಿರಬೇಕಾದರೆ ರಾಮಸ್ವಾಮಿ ಎನ್ನುವವರು....ಅವರು ಬಹಳ ದಿವಸ ಬೊಂಬಾಯಿಯಲ್ಲಿದ್ದರು. ಅಲ್ಲಿ ಏನೋ ಕೆಲಸ ಮಾಡಿಕೊಂಡಿದ್ದರು. ರಜೆ ತೆಗೆದುಕೊಂಡು ಊರಿಗೆ ಬಂದಿದ್ದರು.... ಸರಿ, ರಾಮಸ್ವಾಮಿ ಎನ್ನುವವರು ಬಂದರು." ಈ ಉದಾಹರಣೆಯಲ್ಲಿ 'ರಾಮಸ್ವಾಮಿ ಎನ್ನುವವರು' ಎಂಬ ಕಡೆ ವಾಕ್ಯ ಅರ್ಧದಲ್ಲಿ ನಿಂತಿದೆ; ಬಳಿಕ ಮೂರು ವಾಕ್ಯಗಳು ಬಂದಿವೆ; ಮತ್ತೆ 'ಸರಿ' ಎಂಬ ಶಬ್ದದ ಸಹಾಯದಿಂದ 'ರಾಮಸ್ವಾಮಿ ಎನ್ನುವವರು' ಎಂದು ಅರ್ಧದಲ್ಲೇ ನಿಲ್ಲಿಸಿದ್ದ ಶಬ್ದಕ್ಕೆ ಸಂಬಂಧವನ್ನು ಕಲ್ಪಿಸಿ ಮೊದಲ ವಾಕ್ಯ ಮುಗಿಯುತ್ತದೆ. ಈ ರೀತಿಯಾದ ಪ್ರಯೋಗಗಳು ಬುದ್ಧಿಪೂರ್ವಕವಾಗಿ ಕುಳಿತು ಬರೆದ ಭಾಷೆಯಲ್ಲಿ ಕಾಣುವುದಿಲ್ಲ. ಬರೆಹದಲ್ಲಿ "ರಾಮಸ್ವಾಮಿ ಎನ್ನುವವರು ಬಂದರು" ಎಂದು ವಾಕ್ಯವನ್ನು ಪೂರ್ತಿಮಾಡಿ, ಆಮೇಲೆ "ಅವರು ಬೊಂಬಾಯಿಯಲ್ಲಿದ್ದರು........" ಎಂಬ ಭಾಗ ಬರುತ್ತದೆ.

ಈ ರೀತಿಯ ಒಂದು ಭಾಗ 'ವಡ್ಡಾರಾಧನೆ'ಯಲ್ಲಿ ನನ್ನ ಗಮನಕ್ಕೆ ಬಂದಿದೆ. ಇದೇ ರೀತಿಯ ಪ್ರಯೋಗಗಳು ಆ ಗ್ರಂಥದಲ್ಲಿ ಇನ್ನೂ ಕೆಲವು ಸಿಕ್ಕಬಹುದು. ಸದ್ಯಕ್ಕೆ ಆ ಒಂದು ಪ್ರಯೋಗದ ಕಡೆಗೆ ವಿದ್ವಾಂಸರ ಗಮನವನ್ನು ಸೆಳೆಯುವುದಷ್ಟೇ ಈ ಟಿಪ್ಪಣಿಯ ಉದ್ದೇಶ.

> ಯಶೋಭದ್ರೆಯುಮರಸನನೇಕ ವಸ್ತು ವಾಹನಂಗಳಿಂದಂ ಪೂಜಿಸಿ ಕಟಿಪಿದೊಳಿಂತು ಸುಕುಮಾರ ಸ್ವಾಮಿಗೆ ಸುಖದಿಂದಂ ಕಾಲಂ ಸಲೆ ಮತ್ತೊಂದು ದಿವಸಂ ಯಶೋಭದ್ರೆಯ ಭ್ರಾತರರಪ್ಪ ದಯಾಭದ್ರರೆಂಬ ರಿಸಿಯರ್ (ಮುನ್ನ

ನುವರ ಪಕ್ಕದೆ ಸೂರದತ್ತಂ ಧರ್ಮಂಗೇಳ್ದು ವೈರಾಗ್ಯಮಾಗಿ ಪುತ್ರಮುಖಂಗಂಡು ತಪಂಬಟ್ಟೊನಾತನ ಮಗನುಂ ರಿಸಿಯರಂ ಕಂಡಾಗಳೆ ತಪಂಬಡುಗುಮೆಂಬುದಂ ಮುನ್ನೆ ನೈಮಿತ್ತಿಕರಾದೇಶಂಗೆಯ್ದಿರ್ದರ್) ಮತ್ತಂ ದಯಾಭದ್ರರೆಂಬ ರಿಸಿಯರ್ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿರಿಹಾಸುತ್ತಂ....ಬಂದು ಜೋಗುಗೊಂಡಿರ್ದರ್....*

ಮೇಲಿನ ಭಾಗದಲ್ಲಿ ಕಂಸಗಳಲ್ಲಿರುವ ಭಾಗ ವಾಕ್ಯಮಧ್ಯದಲ್ಲಿ ಬಂದಿದೆ. 'ದಯಾಭದ್ರರೆಂಬ ರಿಸಿಯರ್' ಎಂಬಲ್ಲಿಗೆ ವಾಕ್ಯ ಕಡಿದಿದೆ. 'ಮತ್ತಂ ದಯಾಭದ್ರರೆಂಬ ರಿಸಿಯರ್' ಎಂದು ಮುಂದುವರಿಯುತ್ತದೆ.

ಆಡುಮಾತಿನ ನಿರೂಪಣೆಯ ಶೈಲಿಯ ಪರಿಚಯದ ಸಹಾಯವಿಲ್ಲದೆ, ಈ ಭಾಗವನ್ನು 'ವ್ಯಾಕರಣಬದ್ಧವಾಗಿ' ಅರ್ಥೈಸುವುದು ಅಸಾಧ್ಯ ಎಂಬುದನ್ನು ಗಮನಿಸಬೇಕು. ಆದುದರಿಂದಲೇ ಈ ಭಾಗದಲ್ಲಿ ಆಡುಮಾತಿನ ಶೈಲಿ ಬಳಕೆಯಾಗಿದೆ ಎಂದು ನಮ್ಮ ಅಭಿಪ್ರಾಯ.

—ಎಚ್. ಎಸ್. ಬಿಳಿಗಿರಿ

## 'ಮದನ ಮೋಹಿನೀ ಕಥೆ'ಯ ಕರ್ತೃ ಯಾರು ?

ಈ ಕೃತಿಯ ಬಗ್ಗೆ ಕವಿ ಚರಿತೆಕಾರರು ಮೂರು ಬಗೆಯ ಅಭಿಪ್ರಾಯಗಳನ್ನು ಸೂಚಿಸುತ್ತಾರೆ.

(I) ಕರ್ಣಾಟಕ ಕವಿ ಚರಿತೆ, ಭಾಗ II, ಪುಟ ೪೩೫–೪೩೬ರಲ್ಲಿ:
ನರಸಿಂಹ. ಸು. ೧೬೫೦

"ಈತನು ಮದನ ಮೋಹಿನಿಯ ಕಥೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣ ಕವಿಯೆಂದು ತೋರುತ್ತದೆ. 'ಮೇಲುಕೋಟೆಯ ನರಸಿಂಹನ ಕೃಪೆಯಿಂದ ಪೇಳಿದೆನೀ ಕೃತಿಯನು" ಎಂದು ಹೇಳುತ್ತಾನೆ. ಇವನ ಕಾಲವು ಸುಮಾರು ೧೬೫೦ ಆಗಿರಬಹುದೆಂದು ಊಹಿಸುತ್ತೇವೆ. ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸುತ್ತಾನೆ—

ವ್ಯಾಸ ವಾಲ್ಮೀಕಿ ಹರೀಶ ಬಾಣನು ಕಾಳಿ । ದಾಸ ಮಯೂರನು ಮಲುಹಣ
ಈಶ ಭಕ್ತನು ರಾಘವಾಂಕನ ಬಲಗೊಂಡು । ಲೇಸಾಗಿ ಪೇಳ್ದೆನೀ ಕೃತಿಯನು ॥

ಇವನ ಗ್ರಂಥ–ಮದನ ಮೋಹಿನಿ ಕಥೆ. ಇದು ಸಾಂಗತ್ಯದಲ್ಲಿ ಬರೆದಿದೆ. ಸಂಧಿ ೧೧ ಪದ್ಯ ೬೭೦.

---

*'ವಡ್ಡಾರಾಧನೆ', ಡಿ. ಎಲ್. ನರಸಿಂಹಾಚಾರ್ ಅವರಿಂದ ಸಂಪಾದಿತ, ನಾಲ್ಕನೆಯ ಮುದ್ರಣ (೧೯೭೦). ಪು. 27, ಸಾ. 14-25.

ಕಥಾಗರ್ಭ—ಮಾಳವ ದೇಶದಲ್ಲಿಯ ಚಂಪಕಪುರದ ದೊರೆಯಾದ ಚಂದ್ರಶೇಖರ ರಾಜನ ಮಗ ಚಂದ್ರಸೇನನು ತನ್ನ ಚಿಕ್ಕಮ್ಮನ ದ್ವೇಷಕ್ಕೆ ಗುರಿಯಾಗಿ ತಂದೆಯ ಅಪ್ಪಣೆಯಿಯಿಂದ ಅನೇಕ ಸಾಹಸ ಕಾರ್ಯಗಳನ್ನು ಮಾಡಿ ಮದನ ಮೋಹಿನಿಯನ್ನು ಮದುವೆಯಾದನು. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ—

ಸಕ್ಕರೆಯಂತೆ ಜೇನ್ಸೊಗಡದಂತೆ ಚಿಲುಪಾಲು । ಸೊಕ್ಕು ಜವ್ವನೆಯ ಸೊಬಗಿನಂತೆ ।
ಚಿಕ್ಕ ಪ್ರಾಯದ ಹೆಣ್ಣ ತಕ್ಕೆಯಗಲಿ ಕೂಡು । ವಕ್ಕಅಂತಿಹುದು ಈ ಕೃತಿಯಂದ ॥

ಗ್ರಂಥಾವತಾರದಲ್ಲಿ ಈಶ್ವರಸ್ತುತಿಯಿದೆ. ಬಳಿಕ ಕವಿ ನರಸಿಂಹ ಬ್ರಹ್ಮ, ಪಾರ್ವತಿ, ಲಕ್ಷ್ಮಿ,ಸರಸ್ವತಿ ಗಣೇಶ ನಂಜುಂಡಲಿಂಗ ಇವರುಗಳನ್ನು ಸ್ತುತಿಸಿದ್ದಾನೆ.

(II) ಕರ್ಣಾಟಕ ಕವಿಚರಿತೆ, ಭಾಗ II, ಪುಟ ೪೯೦ (ಚಿಕುಪಾಧ್ಯಾಯ ಕವಿ ಪರಿಚಯದ ಕೊನೆಯ ಭಾಗದಲ್ಲಿ).

"ಈತನ ಉಳಿದ ಗ್ರಂಥಗಳು ನಮಗೆ ದೊರೆತಿಲ್ಲ. ನಮಗೆ ದೊರೆತ ಸಾಂಗತ್ಯ ರೂಪವಾದ ಮದನಮೋಹಿನಿಯ ಕಥೆಯ ಒಂದು ಪ್ರತಿಯಲ್ಲಿ-

ತೆರಕಣಾಂಬಿಯ ರಂಗ ಪಂಡಿತರಾತ್ಮಜ
ನೊರೆದ ಮದನ ಮೋಹಿನಿಯ ಕಥೆ ।
ಭಕ್ತವತ್ಸಲೆ ಮಹಾಲಕ್ಷ್ಮಿಯ ಸೇವಕ
ಲಕ್ಷ್ಮೀಪತಿ ಪೇಳಿದನಿದ ॥

ಎಂದಿರುವುದರಿಂದ ಈ ಗ್ರಂಥವೂ ಏತತ್ಕವಿಕೃತವೆಂದು ತೋರುತ್ತದೆ. ಇದರಲ್ಲಿ ಸಂಧಿ ೧೧ ಪದ್ಯಗಳು ೮೮೭ ಇವೆ."

(III) ಕವಿ ಚರಿತೆ ಭಾಗ III ರಲ್ಲಿ ಅನುಬಂಧವಾಗಿ ಕೊಟ್ಟಿರುವ ಅನುಕ್ತ ಗ್ರಂಥಗಳ ಪಟ್ಟಿಯಲ್ಲಿ (ಪುಟ ೪೨೭) : "ಮದನ ಮೋಹಿನಿಯ ಕಥೆ–ಲಕ್ಷ್ಮಯ್ಯ"

ಹೀಗೆ 'ಮದನ ಮೋಹಿನಿಯ ಕಥೆ' ಮೂರು ವಿಧವಾಗಿ ಕವಿಚರಿತೆಯಲ್ಲಿ ಉಲ್ಲೇಖಗೊಂಡಿದೆ. ಈ ಮೂರು ಬೇರೆ ಬೇರೆ ಕೃತಿಗಳೇ ಅಥವಾ ಒಂದೇ ಕೃತಿಯೇ ? ಕರ್ತೃ ಯಾರು ?-ಎಂದು ಸ್ಪಷ್ಟಪಡಿಸುವುದೇ ಈ ಲೇಖನದ ಉದ್ದೇಶ.

ಕವಿ ಚರಿತೆಕಾರರು ಬೇರೆ ಬೇರೆಯಾಗಿ ಕೊಟ್ಟಿರುವ ಎಲ್ಲ ಅಂಶಗಳೂ ಕನ್ನಡ ಅಧ್ಯಯನ ಸಂಸ್ಥೆಯ ಕೋಶಾಗಾರದ ಉಪಲಬ್ಧವಿರುವ ಕೆ. ಎ. ೩೮೯ ಹಸ್ತಪ್ರತಿಯಲ್ಲಿ ಕಂಡುಬರುತ್ತದೆ. ಒಂದೇ ಕೃತಿಯಲ್ಲಿ ಈ ಅಂಶಗಳು ಭಿನ್ನಕಾಲ ಭಿನ್ನ ದೃಷ್ಟಿ ಮತ್ತು ಭಿನ್ನ ಪ್ರತಿಗಳ ಪರಿಣಾಮವಾಗಿ ಪ್ರತ್ಯೇಕ ಮೂರು ಕೃತಿಗಳಾಗಿ ಕವಿ ಚರಿತೆಯಲ್ಲಿ ನಿರೂಪಿತವಾಗಿವೆ.

ಮೊದಲಿನಲ್ಲಿ ಈ ಕೃತಿಯ ಕರ್ತೃ ನರಸಿಂಹ ಎಂದು ಹೇಳಿರುತ್ತಾರೆ. ಆದರೆ

ಇದಕ್ಕೆ ಪ್ರಮಾಣಗಳೇನನ್ನೂ ಉಲ್ಲೇಖಿಸಿರುವುದಿಲ್ಲ. ಕವಿ ಗ್ರಂಥದಲ್ಲಿ ಮೇಲು ಕೋಟೆಯ ನರಸಿಂಹನನ್ನು ಸ್ತುತಿಸಿರುವ ಮಾತ್ರದಿಂದಲೇ ಈತನ ಹೆಸರು ನರಸಿಂಹ ಎಂದು ಹೇಳಲು ಸಾಧ್ಯವಿಲ್ಲ. ಆದಕಾರಣ ಮೊದಲಿನಲ್ಲಿ ತಿಳಿಸಿರುವ "ಮದನ ಮೋಹಿನೀ ಕಥೆಯ ಕರ್ತೃ ನರಸಿಂಹ" ಎಂದು ಹೇಳಿರುವುದು ಒಪ್ಪತಕ್ಕದ್ದಲ್ಲ.

ಮದನ ಮೋಹಿನೀ ಕಥೆಯ ಕೊನೆಯಲ್ಲಿ—

"ಸಂಧಿ ಹನ್ನೊಂದು ಪದನು ಎಂಟು ನೂರರ
ಮುಂದೆ ಎಪ್ಪತ್ತೇಳು ಪದದೊಳು
ಕುಂದದೊಂದಕ್ಕರವನು ಏಕಚಿತ್ತದೊ
ಳೊಂದಿ ಕೇಳ್ದರಿಗೆ ಮುಕ್ತಿಯು ತಥ್ಯ ೭೨

ತ್ರಿಕದಂಬ ಪುರದೊಳು ಭಕ್ತಸಂತತಿಗಳ್ಗೆ
ಸುಖ ಸಂಪದವಿತ್ತು ಸಲಹುವಾ
ಭಕತ ವತ್ಸಲೆ ಮಹಾಲಕ್ಷ್ಮಿಯ ಚರಣ ಸೇ
ವಕ ಲಕ್ಷ್ಮೀಪತಿಯು ಪೇಳಿದನಿದ ೭೩

ತೆರಕಣಾಂಬಿಯ ರಂಗ ಪಂಡಿತರಾತ್ಮಜ
ಪೊರೆದ ಮದನ ಮೋಹಿನಿಯ ಕಥೆ
ಧರಣಿ ಚಂದ್ರನ್ನರುಳ್ಳನ್ನ ಶುಭದೊಳಿಕ್ಕು
ವರ ಭಾರ್ಗವ ದೇವಿಯೊಲವಿಂದ ೭೪

ಎಂದಿದೆ. ಇದರಂತೆ ತ್ರಿಕದಂಬಪುರ ಎಂದರೆ ತೆರಕಣಾಂಬಿಯ ರಂಗಪಂಡಿತರ ಮಗ ಲಕ್ಷ್ಮೀಪತಿ ಎಂಬ ಕವಿ ಮದನ ಮೋಹಿನಿ ಕಥೆಯ ಕರ್ತೃ ಎಂದು ಸ್ಪಷ್ಟ ಪಡುತ್ತದೆ. ಇದು ಚಿಕುಪಾಧ್ಯಾಯನಿಗೆ ಸರಿಹೊಂದುತ್ತದೆ. ಈತನ ಕೃತಿಯಾದ ಕಾಮಂದಕ ನೀತಿಯಲ್ಲಿ ತ್ರಿಕದಂಬಪುರದ ಹೆಸರಿರುವುದರಿಂದಲೂ, ತಂದೆಯ ಹೆಸರು ರಂಗಪಂಡಿತ ಎಂದಿರುವುದರಿಂದಲೂ ಲಕ್ಷ್ಮೀಪತಿ ಎಂದು ಚಿಕುಪಾಧ್ಯಾಯನ ಹೆಸರಾಗಿರುವುದರಿಂದಲೂ ಈ ಕೃತಿಯ ಕರ್ತೃ ಚಿಕುಪಾಧ್ಯಾಯ ಎಂದು ಹೇಳಲು ಸಾಕಷ್ಟು ಕಾರಣಗಳಿರುವುದರಿಂದ ಕವಿಚರಿತಕಾರರ ಅಭಿಪ್ರಾಯ ಸರಿಯಾಗಿರು ವಂತೆ ಕಂಡುಬರುತ್ತದೆ. ಆದರೆ ಚಿಕುಪಾಧ್ಯಾಯ ವೀರ ವೈಷ್ಣವ. ವಿಷ್ಣುವನ್ನು ಬಿಟ್ಟು ಮತ್ತಾವ ದೇವರನ್ನಾಗಲೀ, ವಿಷ್ಣು ಭಕ್ತರನ್ನು ಬಿಟ್ಟು ಮತ್ತಾರ ಹೆಸರ ನ್ನಾಗಲೀ ತನ್ನ ಕಾವ್ಯದಲ್ಲಿ ಪ್ರಾರ್ಥಿಸಿಲ್ಲ. ಇದೂ ಅಲ್ಲದೆ ತನ್ನ ರಾಜನಾದ ಚಿಕ್ಕದೇವರಾಜನನ್ನು ಸ್ಮರಿಸದೆ ರಚಿಸಿರುವ ಕಾವ್ಯ ವಿರಳ. ಯಾವುದಾದರೊಂದು ವಿಧದಲ್ಲಿ ಚಿಕ್ಕದೇವರಾಯನ ಹೆಸರು ಕಾವ್ಯದಲ್ಲಿ ಕಂಡುಬರುತ್ತದೆ. ಆದರೆ ಮದನ ವಿಜಯ ಕಥೆಯಲ್ಲಿ ಈ ಯಾವ ಒಂದು ಅಂಶವೂ ಇರುವುದಿಲ್ಲ. ಮೇಲಾಗಿ ಚಿಕುಪಾಧ್ಯಾಯನು ರಚಿಸಿರುವ ವೈದ್ಯ ನೀತಿಗೆ ಸಂಬಂಧಪಟ್ಟ ಕೃತಿಗಳನ್ನು ಬಿಟ್ಟರೆ ಉಳಿದವೆಲ್ಲ ವೈಷ್ಣವ ಧರ್ಮಾನುಗುಣವಾದ ಕೃತಿಗಳೇ ಆಗಿವೆ. ಆದರೆ ಮದನ

ಮೋಹಿನೀ ಕಥೆ ಇದಕ್ಕೆ ಹೊರತಾಗಿದೆ. ಇದೂ ಅಲ್ಲದೆ ಗ್ರಂಥದ ಆಮೂಲಾಗ್ರ ಪರಿಶೀಲನೆಯಿಂದ ಇದು ಚಿಕುಪಾಧ್ಯಾಯನ ಶೈಲಿಗಿಂತ ಬೇರೆಯಾಗಿದೆ. ಇಷ್ಟಲ್ಲದೆ ಕೃತಿಯ ಕೊನೆಯಲ್ಲಿ ಹೀಗಿದೆ :

'ಬಸವೇಶ್ವರನ ಭಕತ ಕೆಂಪರಾಜನ
ರಸಿಕ ಕುಮಾರ ವೀರಯ್ಯಗೆ
ಪೊಸತೆನೆ ಬರೆದನು ಹಿರಿಯಸಾವೆಯುಲಿಪ್ಪ
ವಸುಧೆಸುರನು ಲಕ್ಷುಮಯ್ಯನು ॥ ೭೫ ॥

ಇದರಿಂದ ಈ ಕೃತಿಯನ್ನು ಬರೆದವನು ಹಿರಿಯಸಾವೆಯ ನಿವಾಸಿ ಬ್ರಾಹ್ಮಣನಾದ ಲಕ್ಷ್ಮಯ್ಯ ಎಂದು ಸ್ಪಷ್ಟಪಡುತ್ತದೆ.

ಈ ಪದ್ಯವನ್ನು ಆಧರಿಸಿ ಕವಿಚರಿತೆಕಾರರು ಅನುಬಂಧದಲ್ಲಿ ಈ ಕೃತಿಯನ್ನು ಹೆಸರಿಸಿರಬಹುದು. ಒಟ್ಟಿನಲ್ಲಿ ಮೂರು ಕಡೆಗಳಲ್ಲಿ ಕೊಟ್ಟಿರುವುದು ಒಂದೇ ಕೃತಿಯಲ್ಲಿರುವ ವಿಷಯಗಳಾದ್ದರಿಂದ ಕೃತಿ ಒಂದೇ ಎಂದು ಸ್ಪಷ್ಟಪಡುತ್ತದೆ. ಒಂದೇ ಕೃತಿಗೆ ಭಿನ್ನ ಭಿನ್ನ ಕರ್ತೃಗಳನ್ನು ಆರೋಪಿಸುವುದು ಸರಿಯಲ್ಲ. ಪದ್ಯಗಳ ವಿಮರ್ಶೆಯಿಂದ "ಕವಿ ನರಸಿಂಹ ಭಕ್ತ, ಬ್ರಾಹ್ಮಣ. ಕಥೆಯನ್ನು ಹೇಳಿದವ ತ್ರಿಕದಂಬಪುರದ (ತೆರಕಣಾಂಬಿಯ) ರಂಗ ಪಂಡಿತರ ಮಗ ಲಕ್ಷ್ಮೀಪತಿ. ಬರೆದವನು ಹಿರಿಯ ಸಾವೆಯಲ್ಲಿದ್ದ ಲಕ್ಷ್ಮಯ್ಯ'' ಎಂದು ತಿಳಿದು ಬರುತ್ತದೆ. ಲಕ್ಷ್ಮೀಪತಿ ಹೇಳಿದ ಕಥೆಯನ್ನು ಕೇಳಿ ಬಸವೇಶ್ವರನ ಭಕ್ತ ಕೆಂಪರಾಜನ ಕುಮಾರ ವೀರಯ್ಯನಿಗಾಗಿ ಹಿರಿಯ ಸಾವೆಯಲ್ಲಿದ್ದ ಬ್ರಾಹ್ಮಣನಾದ ಲಕ್ಷ್ಮಯ್ಯನು ಈ ಕೃತಿಯನ್ನು ಬರೆದನೆಂದು ಸ್ಪಷ್ಟಪಡುತ್ತದೆ. ಈ ಪ್ರಮಾಣದಂತೆ ಮದನ ಮೋಹಿನಿ ಕಥೆಯೆಂಬ ಕೃತಿಯ ಕರ್ತೃ ಲಕ್ಷ್ಮಯ್ಯ ಎಂದು ನಿಷ್ಕರ್ಷಿಸಬಹುದಾಗಿದೆ.

ಕವಿಚರಿತೆಕಾರರು ಈ ಕೃತಿ ಸಾಂಗತ್ಯದಲ್ಲಿ ರಚಿತವಾಗಿದೆ ಎಂದು ತಿಳಿಸಿರುತ್ತಾರೆ. ಆದರೆ ನಮಗೆ ದೊರೆತಿರುವ ಪ್ರತಿಯ ಆದಿಯಲ್ಲಿ "ಮದನ ಮೋಹಿನೀ ಕಥೆ ಸೊಬಗಿನ ಸೋನೆ ವರ್ಣ ಬರೆವುದಕ್ಕೆ ಶುಭಮಸ್ತು" ಎಂದಿರುವುದರಿಂದ ಸೊಬಗಿನ ಸೋನೆಯ ಛಂದಸ್ಸಿನಲ್ಲಿ ಇದು ರಚಿತವಾಗಿದೆ ಎಂದು ಹೇಳಬೇಕಾಗುತ್ತದೆ.* ಸಾಂಗತ್ಯದಲ್ಲಿ ಎರಡು ಮತ್ತು ನಾಲ್ಕನೇ ಪಾದಗಳಲ್ಲಿ ಎರಡು ವಿಷ್ಣು ಗಣಗಳೂ ಒಂದೇ ಬ್ರಹ್ಮ ಗಣವೂ ಬಂದರೆ ಈ ಸೋನೆ ಛಂದಸ್ಸಿನಲ್ಲಿ ಈ ಎರಡು ಪಾದಗಳಲ್ಲಿ ಮೂರು ವಿಷ್ಣುಗಳಾಗಿರುತ್ತವೆ. ಒಂದು ಮತ್ತು ಮೂರನೆಯ ಪಾದದಲ್ಲಿ ನಾಲ್ಕು ವಿಷ್ಣುಗಳೂ, ಎರಡು ಮತ್ತು ನಾಲ್ಕನೇ ಪಾದಗಳಲ್ಲಿ ಮೂರು ವಿಷ್ಣುಗಳೂ ಬರುವ ಛಂದಸ್ಸೇ ಸೋನೆಯ ಛಂದಸ್ಸು ಎಂದು ತಿಳಿಯುಬಹುದಾಗಿದೆ. ಸಾಂಗತ್ಯದಲ್ಲಿ

---

*ಶ್ರೀ ಬಿ. ಎಸ್. ಸಣ್ಣಯ್ಯನವರಿಂದ ಸಂಪಾದಿತವಾಗಿ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟಿತವಾದ 'ಸೊಬಗಿನ ಸೋನೆ' ಕೃತಿಯಲ್ಲಿ ಇದರ ವಿಮರ್ಶೆ ಇದೆ.

ಇದೊಂದು ಭೇದ. ಈ ಛಂದಸ್ಸಿನಲ್ಲಿ ರಚಿತವಾಗಿರುವ ಪ್ರಥಮ ಕೃತಿ ದೇಪರಾಜನ ಸೊಬಗಿನ ಸೋನೆ. ಈ ಮಟ್ಟನ್ನೇ ಅನುಸರಿಸಿ ಬರೆದಿರುವ ಕೃತಿಗಳು ಹಲವಾರಿವೆ. ಈ ಕೃತಿಗಳ ಛಂದಸ್ಸು ಸೊಬಗಿನ ಸೋನೆಯ ಛಂದಸ್ಸು ಎಂದು ಗ್ರಂಥದಾದಿಯಲ್ಲಿ ಬರೆದಿರುತ್ತದೆ. ಈ ಮಾರ್ಗವನ್ನೇ ಅನುಸರಿಸಿ ಬರೆದಿರುವ ಕೃತಿಗಳಲ್ಲಿ 'ಮದನ ಮೋಹಿನೀ ಕಥೆ'ಯೂ ಒಂದು.

—ಎಸ್. ಎನ್. ಕೃಷ್ಣಜೋಯಿಸ್

# ಕಾವ್ಯಾವಲೋಕನ

**ಗತಿಬಿಂಬ, ಲೇ: ಜಿ. ಎಸ್. ಶಿವರುದ್ರಪ್ಪ; ಪ್ರಕಾಶಕರು: ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೯; ಪುಟ: viii+೧೭೩; ಬೆಲೆ: ಸಾಧಾರಣ ಪ್ರತಿ ರೂ. ೪-೦೦, ಉತ್ತಮಪ್ರತಿ ೬-೦೦.**

ಡಾ. ಜಿ. ಎಸ್. ಶಿವರುದ್ರಪ್ಪನವರ 'ಗತಿಬಿಂಬ'ವು ಹನ್ನೊಂದು ವಿಚಾರ ಪರಿಪೂರ್ಣ ಲೇಖನಗಳ ಸಂಗ್ರಹವಾಗಿದೆ. ಪಾಶ್ಚಾತ್ಯ ಹಾಗೂ ಭಾರತೀಯ ಕಾವ್ಯ, ಕಾವ್ಯಪರಂಪರೆ, ಕಾವ್ಯವಿಮರ್ಶೆಗಳ ಸಮಗ್ರ ಚಿತ್ರವನ್ನು ಇಲ್ಲಿ ನೋಡಬಹುದಾಗಿದೆ. ಎಲ್ಲ ಪ್ರಬಂಧಗಳಲ್ಲಿಯೂ ಪಾಂಡಿತ್ಯಪೂರ್ಣ ವಿಮರ್ಶೆ ಹಾಗೂ ಚರ್ಚೆಯನ್ನು ಮಾಡಿದ್ದಾರಲ್ಲದೆ ಕಾವ್ಯೇತಿಹಾಸದ ಸ್ಥೂಲ ಪರಿಚಯ, ಅಂದಿನಿಂದ ಇಂದಿನವರೆಗೆ, ಇಲ್ಲಿ ಆಗುತ್ತದೆ. ಪುಸ್ತಕದ ಶೀರ್ಷಿಕೆಯು ಈ ದೃಷ್ಟಿಯಲ್ಲಿ ಬಹು ಔಚಿತ್ಯಪೂರ್ಣವಾಗಿದೆ. ಏಕೆಂದರೆ ನಾವು ಇಲ್ಲಿ ಕಾವ್ಯಮೀಮಾಂಸೆಯ 'ಗತಿಬಿಂಬ'ವನ್ನೂ ಸ್ಪಷ್ಟಪಡಿಸಿಕೊಳ್ಳುವಂತಿದೆ.

ಮೊದಲನೆಯ ಪ್ರಬಂಧದಲ್ಲಿ, ಲೇಖಕರು ಸಾಹಿತ್ಯವು ಜೀವನದ ಪ್ರತಿಬಿಂಬವಲ್ಲ, ಅದು ಜೀವನದ ಗತಿಬಿಂಬವೆಂದು ಸ್ಪಷ್ಟಪಡಿಸಿದ್ದಾರೆ. 'ಪ್ರತಿಬಿಂಬ'ಕ್ಕಿಂತಲೂ 'ಗತಿಬಿಂಬ'ವು ಹೆಚ್ಚು ವಿಶಾಲ ಅರ್ಥವನ್ನು ಕೊಡುವುದಲ್ಲದೆ ಹೆಚ್ಚು ಯೋಗ್ಯವಾಗಿಯೂ ತೋರುತ್ತದೆ.

ಎರಡನೆಯ ಪ್ರಬಂಧದಲ್ಲಿ, ಕವಿಯ ಸಹೃದಯತೆಯ ಬಗ್ಗೆ ವಿವರಣೆ ನೀಡಿದ್ದಾರೆ. ಕವಿ ಎಂದರೆ ಯಾರು? ಏತಕ್ಕೆ ಬರೆಯುತ್ತಾನೆ, ಓದುಗರು ಏಕೆ ಓದುತ್ತಾರೆ ಎಂಬೀ ಪ್ರಶ್ನೆಗಳನ್ನೆತ್ತಿ ಸುಂದರವಾಗಿ ವಿಷಯ ನಿರೂಪಿಸಿದ್ದಾರೆ. ಕವಿಗೆ ಪ್ರತಿಫಲ ಬೇಕಿಲ್ಲ, 'ರಸಿಕರು ಓದಿ ಮೆಚ್ಚಿಕೊಂಡರೆ ಸಾಕು' ಎಂದು ಭಾವಿಸಿ ಬರೆದವರು ತಮಗಾದ ಆನಂದವನ್ನು ಪರರಿಗೂ ಹಂಚುತ್ತಾರೆ ಎಂದು ವಿವರಿಸಿದ್ದಾರೆ. ಕಾವ್ಯ ಬರೆಯುವಾಗ ಯಾವದಾದರೂ ಒಂದು ಉದ್ದೇಶ ಕವಿಯಲ್ಲಿದ್ದೇ ಇರುತ್ತದೆ. ಸನ್ಮಾನ, ಗೌರವ, ಕೀರ್ತಿ, ಸಂಪತ್ತು ಇವು ಕಾವ್ಯ ರಚನೆಗೆ ಪ್ರೇರಣೆಯಾಗಬಹುದು. ಆದರೆ ಈ ಭೌತಿಕ ಫಲಗಳಿಗಿಂತ ರಸಿಕರು ಮೆಚ್ಚಿಕೊಂಡು ಕೊಂಡಾಡಿದಲ್ಲಿ ಕವಿಗೆ ಹೆಚ್ಚಿನ ಆನಂದವಾಗಿ ಸಾರ್ಥಕತೆಯ ಭಾವ ಬರುತ್ತದೆ. ಅದುವೇ ಕವಿಯ ಪ್ರಥಮ ಬಯಕೆ ಎಂದಿದ್ದಾರೆ.

ಮೂರನೆಯ ಲೇಖನದಲ್ಲಿ, ಪ್ರತಿಯೊಬ್ಬ ಕವಿಯಲ್ಲಿಯೂ ಅವನದೇ ಆದ ವೈಶಿಷ್ಟ್ಯ ಇದ್ದೇ ಇರುತ್ತದೆ ಎಂಬುದನ್ನು ತಿಳಿಸಿದ್ದಾರೆ. ಒಂದೇ ಘಟನೆ,

ಒಂದೇ ವಸ್ತು, ಒಂದೇ ಸನ್ನಿವೇಶ ಬೇರೆ ಬೇರೆ ರೂಪ ತಾಳಬಹುದು. ಏಕೆಂದರೆ ಅದು ಬೇರೆ ಬೇರೆ ವ್ಯಕ್ತಿತ್ವವುಳ್ಳ ಕವಿಗಳ ಒಡಲೊಳಗೆ ಹಾಯ್ದು ಬರುತ್ತದೆ. ಆದ್ದರಿಂದ 'ಸಾಧಾರಣ'ವನ್ನು 'ವಿಶಿಷ್ಟ'ಗೊಳಿಸುವುದೇ 'ಕವಿ ಕರ್ಮದ ಪ್ರಧಾನ ಲಕ್ಷಣ'ವೆಂದು ಸ್ಪಷ್ಟವಾಗುತ್ತದೆ. ಸಾಧಾರಣವು ಕವಿಯಲ್ಲಿ ವಿಶಿಷ್ಟವಾಗಿ ಓದುಗರಲ್ಲಿ ಅದು ಸಾಧಾರಣವಾದರೆ ಅದು ಸಾರ್ಥಕ. ಆದುದರಿಂದ ಈ ರೀತಿಯ ಅನುಭವ ಓದುಗರಲ್ಲಿ ಉಂಟಾಗಬೇಕಾದರೆ ಜೀವನದ ತಿಳಿವಳಿಕೆ, ಕವಿಯ ಸಹೃದಯತೆಯನ್ನು ಸಂಪಾದಿಸಬೇಕು.

ನಾಲ್ಕನೆಯ ಲೇಖನದಲ್ಲಿ, 'ಸಮಕಾಲೀನ ಪ್ರಜ್ಞೆ'ಯನ್ನು ವಿವರಿಸಿದ್ದಾರೆ. ಶ್ರೇಷ್ಠ ಕವಿಗಳಲ್ಲಿ ಕೇವಲ ಸಮಕಾಲೀನ ಪ್ರಜ್ಞೆ ಅಲ್ಲ, ಸರ್ವಕಾಲ ಪ್ರಜ್ಞೆ ಇರುತ್ತದೆ. ಯಾವುದು ಸರ್ವಕಾಲ ಸತ್ಯವೋ ಅದೇ ಅವನ ಹಿರಿಮೆಯನ್ನು ಸಾರುತ್ತದೆ. ಸಮಕಾಲೀನದ ಜೊತೆಗೆ ಸರ್ವಕಾಲೀನದ ಸಮ್ಮಿಳನವೇ ಅಜರಾಮರಗೊಳಿಸು ವಂಥದು. ಕಾಲ ಬದಲಾಗಬಹುದು, ರೀತಿ, ನೀತಿ, ವಿಚಾರಸರಣಿಗಳು ಕಾಲಕ್ಕೆ ತಕ್ಕಂತೆ ಬದಲಾಗಬಹುದು. ಅವನ್ನೆಲ್ಲ ಕವಿ ಚಿತ್ರಿಸುವುದರ ಜೊತೆಗೆ ಸರ್ವಕಾಲೀನ ಚಿತ್ರವೂ ಇರಬೇಕು. ಅನುಭವವು ಪ್ರಾಮಾಣಿಕವಾಗಿ ಅಭಿವ್ಯಕ್ತಿಗೊಂಡಿದ್ದರೆ ಅದರಲ್ಲಿ ಎರಡೂ ಸೇರಿಕೊಂಡಿರುತ್ತವೆ.

ಅನಂತರ ಲೇಖಕರು 'ಸಾಹಿತ್ಯದಲ್ಲಿ ಪ್ರಾಮಾಣಿಕತೆ'ಯ ಬಗೆಗೆ ವಿವರ ವಾಗಿ ಬರೆಯುತ್ತ ತಾನು ಕಾಣದ್ದನ್ನು, ತಾನೇ ಅನುಭವಿಸದ್ದನ್ನು ತಾನು ಕಂಡಂತೆ ಅಥವಾ ತಾನು ಅನುಭವಿಸಿದಂತೆ ಕವಿ ಬರೆದಲ್ಲಿ ಪ್ರಾಮಾಣಿಕತೆಯನ್ನು ಪ್ರಶ್ನಿಸ ಬೇಕಾಗುತ್ತದೆ. ಕವಿ ಎಲ್ಲವನ್ನು ಕಂಡೇ ಅಥವಾ ಅನುಭವಿಸಿಯೇ ಬರೆಯುತ್ತಾ ನೆಂದಲ್ಲ. ಆದರೆ ಹಿಂದಿನವರ ಅನುಕರಣಮಾಡಿ, ಶಬ್ದಪಲ್ಲಟಮಾಡಿ ತನ್ನದು ಎಂಬಂತೆ ಹೇಳಹೊರಟಲ್ಲಿ ಅದು ನಿಸ್ಸಂಶಯವಾಗಿ ಅಪ್ರಾಮಾಣಿಕತೆ ಯಾಗುತ್ತದೆ. ಪ್ರತಿಭಾವಂತರೆಂದೂ ಅಪ್ರಾಮಾಣಿಕರಾಗಿರುವುದಿಲ್ಲ. ಪರಿ ಸರದ ಕಲ್ಪನೆಯಿರದೆ, ಪರರ ಎರವಲನ್ನು ಅಥವಾ ಎಂಜಲನ್ನು ನಮ್ಮಲ್ಲೇ ಇದೆ ಎಂದು ನಂಬಿಸುವ ಪ್ರಯತ್ನವೆಲ್ಲಾ ಅಪ್ರಾಮಾಣಿಕವೆಂದು ಸಾಧಿಸಿದ್ದಾರೆ. ವಿಮರ್ಶೆಯಲ್ಲಿ ಪ್ರಾಮಾಣಿಕತೆಯ ಪಾತ್ರದ ಬಗ್ಗೆ ವಿವರವಾದ ಚರ್ಚೆಮಾಡಿ "ಕವಿಕೃತಿಯಲ್ಲಿ ಕಂಡುಬರುವ ಅಪ್ರಾಮಾಣಿಕತೆ ಎನ್ನುವದು ಪ್ರತಿಭೆಯ ಅಸಾಮರ್ಥ್ಯದ ಪರಿಣಾಮಗಳಲ್ಲಿ ಒಂದು" ಎಂದು ಸ್ಪಷ್ಟಪಡಿಸಿದ್ದಾರೆ.

ಆರನೆಯ ಲೇಖನದಲ್ಲಿ, ಮೌಲ್ಯನಿರ್ಧಾರ ಅಥವಾ ವಿಮರ್ಶೆ ಸುಲಭವೆಂದು ಪರಿಗಣಿಸಲು ಬರುವಂಥದಲ್ಲವೆಂದು ತಿಳಿಸಿದ್ದಾರೆ. ಯಾವದು ಒಂದು ಕಾಲದಲ್ಲಿ ಶ್ರೇಷ್ಠವಾಗಿತ್ತೋ ಅದು ಕೊನೆಯವರೆಗೂ ಶ್ರೇಷ್ಠವಾಗಿ ಉಳಿಯಬಲ್ಲುದು ಅಥವಾ ಉಳಿಯದೇ ಹೋಗಬಹುದು. ಕೊನೆಯವರೆಗೂ ಶ್ರೇಷ್ಠವಾಗಿ ಉಳಿಯು ವುದು ಕೃತಿಯ ಶಕ್ತಿಯ ಮೇಲಿಂದ. ಪುನಃ ಪುನಃ ಮೌಲ್ಯವಿವೇಚನೆಯಾದರೂ

ಸರ್ವಕಾಲೀನ ಸತ್ಯವನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಪಕ್ಷ-ಪಂಗಡಗಳನ್ನೂ ಕಟ್ಟಿ, ಸಂಕುಚಿತ ವಿಚಾರ ದೃಷ್ಟಿ ಇಟ್ಟುಕೊಂಡು ನೋಡಿದಾಗ ಯಾವ ಮೇರು ಕೃತಿಯಾದರೂ ಶ್ರೇಷ್ಠವೆನಿಸಲಾರದು. ಕವಿಯ ಧ್ಯೇಯ, ವಸ್ತು, ಪರಂಪರೆ, ಸಮಕಾಲೀನ ರೀತಿ-ನೀತಿ, ಸರ್ವಕಾಲೀನತೆಯ ಬಗೆಗೆ ಎಲ್ಲ ಅಂಶಗಳನ್ನೂ ವಿಚಾರಿಸಿ ನಿರ್ಧರಿಸಿದಾಗ ಮಾತ್ರ ನಿಜವಾದ ವಿಮರ್ಶೆಯಾಗಬಲ್ಲುದು. ನಿಜವಾದ ಕಾವ್ಯ ಹೇಗೆ 'ಸರ್ವಕಾಲೀನ'ವೋ ಹಾಗೆ ನಿಜವಾದ ವಿಮರ್ಶೆ 'ಕಾಲಾತೀತ ನೆಲೆ'ಯಲ್ಲಿ ನಿಲ್ಲುವ ಮನೋಧರ್ಮವಾಗಬೇಕು. ಅದನ್ನು ಸಾಧಿಸಬೇಕಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಏಳನೆಯ ಲೇಖನ, 'ಹೊಸ ಕಾವ್ಯದ ಹೊಯ್ದಾಟ' ಎಂಬುದು. ಸಿದ್ಧಗಂಗೆಯಲ್ಲಿ ನಡೆದ ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯಲ್ಲಿ ಮಾಡಿದ ಅಧ್ಯಕ್ಷ ಭಾಷಣವದು. ನವೋದಯ ಕಾವ್ಯ ಹಾಗು ನವ್ಯಕಾವ್ಯಗಳ ಬಗೆಗೆ ಹೇಳುತ್ತ 'ಇಲಿಯಟ್‌ನ ಕಾವ್ಯವನ್ನು ಓದಿ ಅದರ ನಾವೀನ್ಯಕ್ಕೆ ಬೆರಗಾಗಿ, ಕೆಲವು ವ್ಯಕ್ತಿಗಳು ಪ್ರಯೋಗದಲ್ಲಿ ತೊಡಗಿದ್ದರಿಂದ ನವ್ಯಕಾವ್ಯ ಆವಿರ್ಭವಿಸಿತೇ ಹೊರತು, ಇಲ್ಲಿನ ಜನಜೀವನದ ಒತ್ತಡಗಳ ಕಾರಣದಿಂದ ಅಲ್ಲ' ಎಂಬ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ರೀತಿ, ತಂತ್ರ, ವೈವಿಧ್ಯಗಳ ಬಳಕೆಯ ಬಗ್ಗೆ ಲೇಖಕರು ತೊಡಗಿಲ್ಲ. ಆದರೆ 'ಭಾವ'ದಲ್ಲಿಯೂ ಅಲ್ಲಿಯ ಮನೋಭಾವವನ್ನೇ ಅನುಕರಿಸಿದ್ದು ನಿಜವಾಗಿಯೂ ವಿಷಾದನೀಯ. ಆದರೆ ನವ್ಯಕಾವ್ಯ ಹೆಚ್ಚು ಹೆಚ್ಚು ಕ್ಲಿಷ್ಟವಾಗಿ, ಸಹಜತೆ ಕಳೆದುಕೊಂಡು ಸಂಪೂರ್ಣ ಕೃತ್ರಿಮವಾಗಿಬಿಟ್ಟಿತು. ನವ್ಯ ಕವಿಗಳಲ್ಲಿ ಹಳೆಯದನ್ನು ಹಳಿದುಬಿಡುವ ಪ್ರವೃತ್ತಿ ಬಂದುದು ದುರ್ದೈವ. ಕಾಲಕ್ರಮದಲ್ಲಿ ಈಗಿನ ನವ್ಯಕಾವ್ಯವೂ, ನವ್ಯ ಕವಿಗಳೂ ಹಳಬರಾಗುವುದಿಲ್ಲವೇ ? ಕಾವ್ಯದಲ್ಲಿ ನವ್ಯ, ಅನವ್ಯಕ್ಕಿಂತ ಹೆಚ್ಚು ಮಹತ್ವದ್ದು ಉತ್ತಮ ಕಾವ್ಯ, ಉತ್ತಮವಲ್ಲದ ಕಾವ್ಯ—ಎನ್ನುವ ವಿಚಾರವು ಯೋಗ್ಯವಾಗಿದೆ. ಅದರ ಚರ್ಚೆಯ ಮುಕ್ತಾಯ ಬಹು ಮಾರ್ಮಿಕವಾಗಿದೆ.

ಎಂಟನೆಯ ಲೇಖನದಲ್ಲಿ 'ಪ್ರೇರಣೆ, ಪರಂಪರೆ-ಪ್ರಯೋಗ'ಗಳ ವಿಚಾರವಾಗಿ ಹೇಳಿದ್ದಾರೆ. ಈ ಐವತ್ತು ವರುಷಗಳಲ್ಲಿ ಬೆಳೆದು ಬಂದ ಕಾವ್ಯವನ್ನು ಮೂರು ಹಂತಗಳಲ್ಲಿ ವಿಭಜಿಸಿ ಅದರ ರೀತಿ-ನೀತಿಗಳನ್ನು ಚರ್ಚಿಸಿದ್ದಾರೆ. ಕಾವ್ಯ ಪರಂಪರೆಯ ವಿವಿಧ ಘಟ್ಟಗಳಲ್ಲಿ ಹೊರಬಂದ ಕವನ ಸಂಗ್ರಹಗಳನ್ನೆತ್ತಿಕೊಂಡು ಗುಣಾವಗುಣಗಳನ್ನು ತೋರಿದ್ದಾರೆ. ಮೂರೂ ಹಂತಗಳಲ್ಲಿರುವ ಬದಲಾವಣೆಗೆ ಪ್ರೇರಣೆ ಪಶ್ಚಿಮದಿಂದ ಬಂದುದು. 'ಪ್ರೇರಣೆ ಇರಲಿ, ಅಂಧಾನುಕರಣೆ ಬೇಡ'ವೆಂದು ಪ್ರಾಮಾಣಿಕವಾಗಿ ಹೇಳಿದ್ದಾರಲ್ಲದೆ ನವ್ಯಕಾವ್ಯದ ಬಗೆಗೆ ಅತಿರೇಕ ಅಭಿಪ್ರಾಯವನ್ನಿಟ್ಟುಕೊಂಡವರನ್ನು ಖಂಡಿಸಿದ್ದಾರೆ. ನಗರ ಜೀವನದ ನಿರಾಸೆ, ಜುಗುಪ್ಸೆ, ವಿಕೃತಿಗಳೆಲ್ಲ ಕಾವ್ಯವಸ್ತುವಾದರೂ ಅದನ್ನಷ್ಟೇ ಭಾರತೀಯ ಸಾಮಾಜಿಕ

ಪ್ರಜ್ಞೆ ಎಂದು ಭಾವಿಸುವುದು ತರವಲ್ಲವೆಂದು ಸಾಧಿಸಿದ್ದಾರೆ. ಹಲವು ಸಲ ಕಾವ್ಯ 'ಕೇವಲ ನವ್ಯ' ಮಾತ್ರ ಆಗಿ, ಕಾವ್ಯವಾಗದೇ ಓದುಗರಿಂದ ದೂರ ಸರಿದದ್ದು ಅದರಲ್ಲಿರುವ ಅತೀವ ಕ್ಲಿಷ್ಟತೆಯಿಂದ ಎಂಬುದು ನಿಜ. ಕ್ಲಿಷ್ಟತೆ ಹೆಚ್ಚಿದಂತೆ ಕಾವ್ಯ ತನ್ನ ನಿಜವಾದ ಸತ್ತ್ವವನ್ನು, ಸಂಪತ್ತನ್ನು ಕಳೆದುಕೊಳ್ಳಬಹುದು. ಕೊನೆಗೆ 'ಬಿತ್ತಿದ್ದೆಲ್ಲ ಮೊಳೆಯುವುದಿಲ್ಲ, ಮೊಳೆತದ್ದೆಲ್ಲ ಬೆಳೆಯುವುದಿಲ್ಲ, ಬೆಳೆದದ್ದೆಲ್ಲ ಉಳಿಯುವುದಿಲ್ಲ....ಸತ್ವವಿದ್ದರೆ ಉಳಿಯುತ್ತದೆ' ಎಂಬುದು ಕಠೋರ ಸತ್ಯ.

ಒಂಬತ್ತನೆಯ ಲೇಖನ 'ಇಂದಿನ ಕವಿತೆ' ಎಂದಿದೆ. ಕವಿಗೆ ಬರಬಹುದಾದ ಆತಂಕ ಅಥವಾ ಅವನಲ್ಲಿ ಬೆಳೆದು ಬರುವ ಗುಂಪುಗಾರಿಕೆ ಮನೋವೃತ್ತಿಯ ಬಗೆಗೆ ಸ್ವಲ್ಪದರಲ್ಲಿ ಬರೆದಿದ್ದಾರೆ. ಪ್ರಯೋಗಶೀಲತೆ ಹೆಚ್ಚಿದ್ದರೂ ಕೇವಲ ವಿಡಂಬನೆ, ಕಾಮು ಬಿಟ್ಟು ಕವಿತೆಗಳು ಬಹಳಿಲ್ಲ, ಬದುಕಿನ ಇನ್ನಿತರ ಮಹತ್ವದ ವಿಷಯಗಳ ಬಗೆಗೆ ಬರೆಯದಿದ್ದುದು ನವ್ಯಕವಿಗಳ ರುಚಿಯನ್ನು ಎತ್ತಿ ತೋರುತ್ತದೆ.

ಇಂದಿನ ಕಾವ್ಯ ಉಚ್ಚ್ರಮಟ್ಟದ್ದೇ ? ಎಂದು ಕೇಳಿದರೆ ಉತ್ತರಕೊಡುವದು ಸರಳವಲ್ಲ. ಯಾವ ಪೂರ್ವ ತಪಸ್ಸಿಲ್ಲದೇ ಬರೆದವರೆ ಬಹಳ. ತಾವು ಬರೆದುದೆಲ್ಲವೂ ಕಾವ್ಯ ಎಂದು ತಿಳಿದವರೂ ಬಹಳ. ಅವರ ಕೃತಿಗಳಲ್ಲಿ ಕೊನೆಯವರೆಗೂ ಉಳಿಯುವಂಥದು ಬಹಳ ವಿರಳ. ನವ್ಯತೆಯ ಅಬ್ಬರದಲ್ಲಿ ಭಾವಗೀತಾತ್ಮಕ ಕವನ ಗಳು ಮಾಯವಾಗತೊಡಗಿವೆ. ಆ ಹಾನಿಯನ್ನು ತುಂಬಿಕೊಳ್ಳುವಂಥ ಸ್ಥಿತಿ ಬಂದಿದೆ.

ಹತ್ತನೆಯ ಲೇಖನ ಕನ್ನಡ ಕಾದಂಬರಿಗಳ ಭಾಷೆ-ಶೈಲಿಗಳ ಬಗೆಗೆ ಬರೆದುದು. ಒಂಬತ್ತನೆಯ ಲೇಖನದಂತೆ ಇದರಲ್ಲಿಯೂ ವಿಶೇಷವೇನಿಲ್ಲ. ಕನ್ನಡದ ಕಾದಂಬರಿಗಳ ಹುಟ್ಟು ಬೆಳವಣಿಗೆ ಕುರಿತು ವಿವರಿಸಿ, ಅನೇಕ ಕಾದಂಬರಿಗಳಲ್ಲಿ ಬರುವ ಗ್ರಾಮ್ಯಭಾಷೆ, ಶಿಷ್ಟಭಾಷೆಗಳ ಬಗ್ಗೆ ಬರೆದಿದ್ದಾರೆ. ಕೇವಲ ಪ್ರಮುಖರಾದ ಅ.ನ.ಕೃ., ಕಾರಂತ, ಕುವೆಂಪು ಮತ್ತು ಶ್ರೀನಿವಾಸ ಈ ನಾಲ್ವರ ಭಾಷೆ ಶೈಲಿಗಳನ್ನು ವಿಮರ್ಶಿಸಿದ್ದಾರೆ. ಉಳಿದ ಅನೇಕ ಖ್ಯಾತ ಕಾದಂಬರಿಕಾರರನ್ನು ಅಲ್ಲಲ್ಲಿ ಹೆಸರಿಸಿದ್ದಾರೆ. ಒಟ್ಟಿನಲ್ಲಿ ಭಾಷೆಯ ಬಗೆಗೆ ಜಾಗ್ರತೆಯಿಂದಿದ್ದು, ಬಳಕೆಯಲ್ಲಿ ಹಿತಮಿತವಾಗಿದ್ದು ಸಹಜತೆಯಿಂದ ಬಂದ ರೀತಿಯನ್ನು ಸ್ವಾಗತಿಸಿದ್ದಾರಲ್ಲದೆ ಪ್ರಯೋಗ ಪರಿಣತಿಯನ್ನೂ ಸ್ವಾಗತಿಸಿದ್ದಾರೆ.

ಹನ್ನೊಂದನೆಯ ಲೇಖನದಲ್ಲಿ ಕಳೆದ ಇಪ್ಪತ್ತೈದು ವರುಷಗಳಲ್ಲಿನ ಕಾವ್ಯ ಮೀಮಾಂಸೆಯನ್ನು ಕುರಿತು ಬರೆಯಲಾಗಿದೆ. ಆದ ಬದಲಾವಣೆ, ಆಂಗ್ಲ ಪ್ರಭಾವ, ಸಂಸ್ಕೃತ ಕಾವ್ಯ ರೀತಿಗಳ ಬಗೆಗೆ ಕೂಲಂಕಷವಾಗಿ ವಿಮರ್ಶಿಸಿದ್ದಾರಲ್ಲದೆ, ತೀ.ನಂ.ಶ್ರೀ., ಡಿ.ವಿ.ಜಿ., ಡಾ. ಕೃಷ್ಣಮೂರ್ತಿ, ಕುವೆಂಪು, ಪು.ತಿ.ನ., ವಿ.ಸೀ., ಬೇಂದ್ರೆ, ಗೋಕಾಕ ಮೊದಲಾದವರ ಕೃತಿಗಳನ್ನೆಲ್ಲ ಶ್ರೇಷ್ಠ ಕನ್ನಡ ಕೊಡುಗೆ

ಗಳೆಂದು ವಿವರಿಸಿದ್ದಾರೆ. ಕಾವ್ಯ ಪರಂಪರೆಯ ಸವಿಸ್ತಾರ ಚಿತ್ರ ಕೊಟ್ಟು ಅನೇಕ ಪ್ರಮುಖ ಲೇಖಕರ ಕೃತಿಗಳನ್ನು ಕೊಂಡಾಡಿದ್ದಾರೆ.

ಒಟ್ಟಿನಲ್ಲಿ ಇದೊಂದು ಒಳ್ಳೆಯ ವಿಮರ್ಶನ ಪುಸ್ತಕವಾಗಿ, ವಿಮರ್ಶ ಸಾಹಿತ್ಯ ದಿಂದ ಕನ್ನಡ ಸಾಹಿತ್ಯಕ್ಕೆ ಬಲವನ್ನೀಯುವಂಥದಾಗಿದೆ. 'ವಿಮರ್ಶೆಯ ಪೂರ್ವ ಪಶ್ಚಿಮ', 'ಸೌಂದರ್ಯ ಸಮೀಕ್ಷೆ', 'ಪರಿಶೀಲನ' ಮೊದಲಾದ ವಿಮರ್ಶೆಯ ಕೃತಿಗಳನ್ನು ಕೊಟ್ಟ ಡಾ. ಜಿ. ಎಸ್. ಶಿವರುದ್ರಪ್ಪನವರು 'ಗತಿಬಿಂಬ'ವನ್ನು ಬರೆದು ಕನ್ನಡಿಗರಿಗೆ ಉಪಕಾರವಮಾಡಿದ್ದಾರೆ. ಇವರಿಂದ ಇನ್ನೂ ಇಂಥ ಅನೇಕ ಕೃತಿಗಳು ಹೊರಬೀಳಲೆಂದು ಹಾರೈಸುತ್ತೇನೆ.

—ಸಂಗಮನಾಥ ಜಿ. ಹಂಡಿ

ಪ್ರತಿಬಿಂಬ, ಲೇಖಕರು: ಪಿ. ಕೆ. ರಾಜಶೇಖರ; ಪ್ರಕಾಶಕರು: ಜ್ಯೋತಿ ಪ್ರಕಾಶನ, ಪಿರಿಯಾಪಟ್ಟಣ; ೧೯೬೯; ಪುಟಗಳು : ೫೩; ಬೆಲೆ: ೨–೦೦.

ವಿದ್ಯಾಭ್ಯಾಸದಲ್ಲಿ, ಆಡಳಿತದಲ್ಲಿ ತಾಯಿಭಾಷೆಯೇ ಸಾಮ್ರಾಜ್ಞಿಯಾಗ ಬೇಕಾಗಿರುವ ಈ ಸಮಯದಲ್ಲಿ ಇತರ ಭಾಷೆಗಳ ಸಾಹಿತ್ಯ ಸಂಪತ್ತು ಕನ್ನಡಕ್ಕೆ ಬರುವುದು ಅತ್ಯಗತ್ಯವಾಗಿದೆ. ಶ್ರೀ ಸಿ. ಪಿ. ಕೆ. ಅವರು ಈ ಕೃತಿಯ ಮುನ್ನುಡಿ ಯಲ್ಲಿ ಹೇಳಿರುವಂತೆ 'ಅನುವಾದಗಳ ಮಹಾಪೂರವೇ ಬರಬೇಕಾಗಿ'ರುವ ಈ ಸಮಯದಲ್ಲಿ ರಾಜಶೇಖರ ಅವರ "ಪ್ರತಿಬಿಂಬ"ಕ್ಕೆ ಒಂದು ಬೆಲೆಯಿದೆ.

"ಪ್ರತಿಬಿಂಬ"ದಲ್ಲಿ ೨೭ ಆಂಗ್ಲ ಕವಿತೆಗಳು ಕನ್ನಡದ ರೂಪು ಪಡೆದಿವೆ. ಇವುಗಳಲ್ಲಿನ ಹೆಚ್ಚು ಗೀತೆಗಳನ್ನು "The Poet Speaks" ಎಂಬ ಇಂಗ್ಲಿಷ್ ಕವನ ಸಂಕಲನದಿಂದ ಎತ್ತಿಕೊಳ್ಳಲಾಗಿದೆ. ಇವುಗಳಲ್ಲಿ ಕಥನ ಕವನಗಳೇ ಹೆಚ್ಚು, "Ballad"ಗಳೂ ಇವೆ.

ಅನುವಾದ ಕಲೆಯಲ್ಲಿ ಪ್ರತಿಭೆಯು ಯಶಸ್ಸಿನ ಸಮತಟ್ಟಿನಲ್ಲೇ ಸಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಅದಕ್ಕೆ ಏರುಪೇರುಗಳೂ, ಉಬ್ಬುತಗ್ಗುಗಳೂ ಇದ್ದೇ ಇವೆ. ಏಕೆಂದರೆ ಅನುವಾದಕನು ಮೂಲದ 'ಮಹಿಮೆ'ಗೆ ಅಡಿಯಾಳಾಗಿರ ಬೇಕೇ ಹೊರತು 'ಸ್ವಂತಿಕೆ'ಗೆ ಸ್ವಾತಂತ್ರ್ಯ ವಹಿಸುವಂತಿಲ್ಲ. ಕಾವ್ಯ ಸರಸಿಯಲ್ಲಿ ಮೂಲಕವಿ 'ಅಂತಾರೆ' ಈಜುಹೊಡೆದಿದ್ದರೆ ಇವನೂ ಸಹ 'ಅಂತಾರೆ' ಈಜನ್ನೇ ಹೊಡೆಯಬೇಕು. ಒಂದು ವೇಳೆ ಅದು ಇವನಿಗೆ ಬಾರದೆ ಹೋದರೆ 'ಮಾಗಿಬುಂಡೆ' ಯನ್ನು ಕಟ್ಟಿಯಾದರೂ ಅದನ್ನೇ ಅನುಸರಿಸಬೇಕೇ ಹೊರತು ತಾನು ಪ್ರವೀಣತೆ ಪಡೆದಿರುವ 'ಮಕಾಡೆ' ಈಜನ್ನು ಹೊಡೆಯಲು ಸಾಧ್ಯವಿಲ್ಲ. ಆದುದರಿಂದ ಒಂದೇ ಕೃತಿಯ ಅನುವಾದದಲ್ಲಿ, ಅದರಲ್ಲೂ ಕವಿತೆಗಳನ್ನು ಅನುವಾದ ಮಾಡುವಾಗ ಕೆಲವು ಕಡೆ ಗೆಲುವನ್ನೂ ಕೆಲವು ಕಡೆ ಸೋಲನ್ನೂ ಅನುಭವಿಸುವ ಸ್ಥಿತಿ ಒದಗ

ಬಹುದು. ಪ್ರಕೃತ, ರಾಜಶೇಖರ ಅವರ "ಪ್ರತಿಬಿಂಬ" ಕೃತಿಯ ಅನುವಾದದಲ್ಲೂ ನಾವು ಇದನ್ನೇ ಕಾಣುತ್ತೇವೆ.

ಶ್ರೀ ರಾಜಶೇಖರ ಅವರು ಕೆಲವು ಕವಿತೆಗಳನ್ನು ಬಹಳ ಪರಿಣಾಮಕಾರಿಯಾಗಿ, ಸೊಗಸಾಗಿ ಅನುವಾದ ಮಾಡಿದ್ದಾರೆ. ಕೆಲವು ಮಾತ್ರ ಮೂಲದ 'ಕಳೆ'ಯನ್ನೂ, ಕಳಕಳಿಯನ್ನೂ ಕಳೆದುಕೊಂಡು ಕಳಪೆಯಾಗಿರುವುದೂ ಉಂಟು.

ಇಲ್ಲಿನ ಉತ್ತಮ ಅನುವಾದ ಕವಿತೆಗಳಲ್ಲಿ ನನ್ನ ಮನಸ್ಸನ್ನು ಸೆಳೆದದ್ದು "William Taylor' ಎಂಬ ಒಂದು ಜನಪದ ಕಥನ ಕವನ. ಇದನ್ನು 'ವಿಕ್ರಮತೀರ್ಥ' ಎಂಬ ಹೆಸರಿನಿಂದ ರಾಜಶೇಖರ ಅವರು ಅತ್ಯುತ್ಕೃಷ್ಟವಾಗಿ ಅನುವಾದ ಮಾಡಿದ್ದಾರೆ. ಸತ್ವಯುತವೂ ಹೃದಯಾರ್ದ್ರವೂ ಆದ ಈ ಆಂಗ್ಲ ಕವಿತೆಯ ಮೂಲದ ಭಾವ ಮತ್ತು ಬನಿಗಳು ಅತ್ಯಂತ ಸಮರ್ಪಕವಾಗಿ, ಶಕ್ತಿವತ್ತಾಗಿ ಕನ್ನಡದಲ್ಲಿ ಪಡಿಮೂಡಿರುವುದನ್ನು ಕಾಣಬಹುದು. ನಿದರ್ಶನಕ್ಕಾಗಿ ಅದರ ಮೊದಲ ತುಂಡನ್ನು ನೋಡಬಹುದು :

> ವೀರ ವಿಕ್ರಮತೀರ್ಥ ಚತುರನಾವಿಕನವನು
> ಚೆಲುವೆಯೊಬ್ಬಳ ಪ್ರಣಯಿ ಪ್ರಾಣಪದಕ
> ಓಲಗಗಳೂದಿದರು ಶೋಭಾನೆ ಹಾಡಿದರು
> ಅವರನೊಂದಾಗಿಸಿತು ಒಲವಿನೆರಕ

ಮೂಲ :

> **William Taylor was a brisk young sailor,**
> **He who courted a lady fair;**
> **Bells were ringing, sailors singing**
> **As to church they did repair**

ಇದೇ ರೀತಿಯಲ್ಲಿ "ಮುದ್ದುಮಗ ರಂಗ" ಎಂಬ ಹೆಸರಿನಿಂದ "Lord Randal" ಎಂಬ ಮತ್ತೊಂದು ಜಾನಪದ ಕವಿತೆಯು ಬಹು ಮುದ್ದಾಗಿ ಅನುವಾದಗೊಂಡಿರುವುದನ್ನು ಕಾಣಬಹುದು :

> "ಓ ನನ್ನ ಕಂದಯ್ಯ ನೀನುಂಡುದೆಲ್ಲೊ
> ನನ್ನಪ್ಪ ರಂಗಣ್ಣ ನೀನುಂಡುದೆಲ್ಲೊ ?"
> "ಒಲುಮೆಯುಳ್ಳವನೊಡನೆ ಉಂಡು ಬಂದಿಹೆನಮ್ಮ
> ಬೇಟೆಯಾಡಲು ಹೋಗಿ ಬಳಲಿರುವೆನಮ್ಮ !"

ಮೂಲ :

> **"Where got you your dinner,**
> **Lord Randal, my son?**

Where got you your dinner,
My handsome young man?"

'Lord Randal' ಜನಪದ ಕವನ. ಅದನ್ನು ಅನುವಾದ ಮಾಡುವಾಗ ಗ್ರಾಮೀಣ ಪದಗಳ ಬಳಕೆ ಉಚಿತವಾದುದೇ ಸರಿ. ಇಲ್ಲಿ "ಉಂಡು" "ನನ್ನಪ್ಪ", "ಹಾವುಮೀನಿನ ಹುಳಿ", "ಚನ್ನ ಚಲುವಾ ರಂಗ" "ಕಂದಯ್ಯ" ಮೊದಲಾದ "ದೇಸಿ" ಪದಗಳನ್ನು ಬಳಸಿರುವ ಅನುವಾದಕರ ಜಾಣ್ಮೆಯನ್ನು ಮೆಚ್ಚಲೇ ಬೇಕು.

ಇನ್ನು "ಮುಗ್ಧೆ ಮತ್ತು ಸೈನಿಕ", "ಕ್ಷಣಿಕವಾದರೂ ಸಾರ್ಥಕ" "ಮೃದು ಮಧುರವಾಗಿ ನುಡಿ", "ಚೆಂಗುಲಾಬಿ ಹೂವಿನಂಥ ಚೆಲುವೆ" ಕವನಗಳು ಮೂಲದ ಭಾವಸೌಂದರ್ಯಗಳನ್ನು ತಕ್ಕಮಟ್ಟಿಗೆ ಚೆನ್ನಾಗಿ ಪ್ರತಿಬಿಂಬಿಸುತ್ತವೆ. ಇನ್ನುಳಿದವುಗಳ ಅನುವಾದದಲ್ಲಿ ಅನೇಕ ಕೊರತೆಗಳಿದ್ದು, ಅತೃಪ್ತಿಕರವಾಗಿ ತೋರುತ್ತವೆ.

ಇನ್ನು ಡಾ. ರವೀಂದ್ರನಾಥ ಠಾಕೂರರ ಪ್ರಸಿದ್ಧ ಪದ್ಯವಾದ "ಕೃಷ್ಣಕಲಿ"ಯ ಅನುವಾದ ಅನಗತ್ಯವಾಗಿತ್ತು. ಏಕೆಂದರೆ ಈ ಮೊದಲೇ ಅದನ್ನು ಶ್ರೀ ನಾರಾಯಣ ಸಂಗಮ ಮತ್ತು ಡಾ. ದ. ರಾ. ಬೇಂದ್ರೆ ಅವರು ಸೇರಿ ಉತ್ಕೃಷ್ಟವಾಗಿ ಅನುವಾದಿಸಿದ್ದಾರೆ.

ಅಲ್ಲದೆ ಶ್ರೀ ರಾಜಶೇಖರ ಅವರು Burns ಕವಿಯ 'O my love is like a red red rose" ಎಂಬ ಪ್ರೇಮಗೀತೆಯನ್ನು "ಚೆಂಗುಲಾಬಿಯಂಥ ಚೆಲುವೆ" ಎಂದು ಹೆಸರಿಟ್ಟು ಅನುವಾದಿಸಿದ್ದಾರೆ. ಈ ಅನುವಾದವೂ ಸಹ ಅನಗತ್ಯವಾಗಿತ್ತು. ಏಕೆಂದರೆ "ಶ್ರೀ" ಅವರು ಇದನ್ನು "ನನ್ನ ಪ್ರೇಮದ ಹುಡುಗಿ" ಎಂಬ ಶೀರ್ಷಿಕೆ ಯನ್ನಿಟ್ಟು ಮೋಹಕವಾಗಿ ಅನುವಾದಿಸಿದ್ದಾರೆ.

ದೋಷಗಳೇನೇ ಇರಲಿ, ಇದು ರಾಜಶೇಖರ ಅವರ ಮೊದಲ ಅನುವಾದ ಕೃತಿಯಾದ್ದರಿಂದ, ಅವು ಸಹಜ. ಒಟ್ಟಿನಲ್ಲಿ ಹೇಳುವುದಾದರೆ ಪ್ರಕೃತ ಅನುವಾದಕ ರಿಗೆ ಕವಿತಾರಚನೆಯಲ್ಲಿ ಸ್ವಲ್ಪ ಕೈ ಪಳಗಿರುವುದರಿಂದಲೂ, ಅದರ ಗೊತ್ತುಗುರಿಗಳ ಅರಿವಿರುವುದರಿಂದಲೂ, ಕಾವ್ಯೋಚಿತ ಪದಗಳ ಪ್ರಯೋಗದಲ್ಲಿ ಜಾಣ್ಮೆ ಇರುವುದ ರಿಂದಲೂ, ಮೂಲಕವಿಯ ಧ್ಯೇಯೋದ್ದೇಶಗಳನ್ನು ಮನದಟ್ಟುಮಾಡಿಕೊಂಡು ಮುಂದಡಿ ಇಡುವ ಸಾಧುಪ್ರಜ್ಞೆಯನ್ನು ಹೊಂದಿರುವುದರಿಂದಲೂ ಇವರ ಅನುವಾದಕ್ಕೆ ಒಂದು ತೂಕವಿದೆ; ಅದು ಒಂದು ಸಫಲತೆಯ ನಿಟ್ಟಿನಲ್ಲಿ ಸಾಗಿದೆ. ಸುಪ್ರಸಿದ್ಧ ಆಂಗ್ಲ ಕವಿಗಳ ಕವನಗಳಲ್ಲಿನ ಕೆಲವು ಉಜ್ವಲ ಭಾವನೆಗಳನ್ನು ಅಷ್ಟೇ ಜ್ವಲಂತವಾಗಿ ಕನ್ನಡಿಸಿರುವುದು ಇದಕ್ಕೆ ಸಾಕ್ಷಿಯಾಗಿದೆ.

ಇವರು ಶ್ರದ್ಧೆಯಿಂದ ಅನುವಾದ ಕಾರ್ಯವನ್ನು ಮುಂದುವರಿಸಿದರೆ ಇವರಿಗೆ ಭವ್ಯಭವಿಷ್ಯ ಕಾದಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು.

ಚದುರಂಗ, ಲೇಖಕರು: ಎಮ್. ಎಸ್. ಬ್ಯಾಲಾಳ; ಪ್ರಕಾಶಕರು: ಮಿತ್ರ ಭಾರತಿ ಪ್ರಕಾಶನ, ವಿಜಾಪುರ; ಪುಟಗಳು: ೪೭; ಬೆಲೆ ರೂ. ೧-೦೦.

ಶ್ರೀ ಬ್ಯಾಲಾಳರ ೫೫ ಕವನಗಳಿಂದ ಕೂಡಿರುವ ಈ ಕೃತಿಯಲ್ಲಿ ಜೀವನದ ಕೆಲವು ಚಿತ್ರಗಳು ಇಣುಕುಹಾಕಿವೆ. ಸಾಂಪ್ರದಾಯಿಕ ಶೈಲಿಯಲ್ಲೇ ರಚಿತವಾಗಿ ರುವ ಇಲ್ಲಿನ ಕವಿತೆಗಳಲ್ಲಿ ನಾಡ ಸಂಸ್ಕೃತಿಯ ಬಗ್ಗೆ ಇವರಿಗಿರುವ ಅಭಿಮಾನ ಸುವ್ಯಕ್ತವಾಗಿದೆ.

ನಾಸ್ತಿಕಾಸ್ತಿಕ ಗರ್ಭದಾಳದಲ್ಲಿ
ಹುದುಗಿಹುದಾವ ಲೀಲಾಜಾಲ ಬಲ?
ನಾಸ್ತಿಕಗೆ ದೆವ್ವ
ಆಸ್ತಿಕಗೆ ದೇವ

ಎಂಬುದನ್ನು ನಿದರ್ಶನಗಳಲ್ಲೊಂದಾಗಿ ತೆಗೆದುಕೊಳ್ಳಬಹುದು.

ಪ್ರೊ. ಆರ್. ಸಿ. ಹಿರೇಮಠರು ಹೇಳಿರುವಂತೆ 'ಗಿಳಿ-ಬಾಬು' ಇಲ್ಲಿನ ಕವನಗಳಲ್ಲಿ ಅತ್ಯುತ್ತಮ ಮಟ್ಟದ್ದಾಗಿದೆ. ಸಿರಿವಂತಿಕೆಯ ನಶ್ವರತೆಯೂ, ದೀನರ ಬಗ್ಗೆ ಕವಿಗಿರುವ ಅನುಕಂಪೆಯೂ ಇಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಇವರಿಗಿರುವ ಸಾಮಾಜಿಕ ಪ್ರಜ್ಞೆಯನ್ನು ಮೆಚ್ಚಲೇಬೇಕು. "ದುಡಿದವ ಬಿದ್ದ; ನುಡಿದವ ಗೆದ್ದ", "ಕಾಯಕವಳಿದರು ಆತ್ಮನಂಬುಗೆ ಕೊನೆಯುಸಿರು", "ವಾಲ್ಮೀಕಿ ಗುರು ಆದಿ ಪೂಜಾರಿ", "ಕವನ ಷೋಡಶರಮಣಿ ಚಿರಂತನ" ಮೊದಲಾದ ಶಕ್ತಿವತ್ತಾದ ಮಾತುಗಳನ್ನು ಇವರ ಕವನಗಳಲ್ಲಿ ಅಲ್ಲಲ್ಲೆ ಗುರುತಿಸಬಹುದು.

ತಮ್ಮ ಜ್ಞಾನದೀವಿಗೆಯಿಂದ ನಾಡನ್ನು ಬೆಳಗಿದ ಇತಿಹಾಸ ಮಹಾಪುರುಷ ರಾದ ಅಲ್ಲಮಪ್ರಭು ಮತ್ತು ಬಸವಣ್ಣನವರ ಮಹತ್ವವನ್ನು ಎತ್ತಿ ಹಿಡಿದಿರುವ ಕವನ 'ನಾಡದೀಪ'. ಇದರ ಮೊದಲ ನಾಲ್ಕು ಸಾಲುಗಳು ತೂಕದಿಂದ ಕೂಡಿರುವುದನ್ನು ಕಾಣಬಹುದು:

ಕರಿನಾಡ ಸಿರಿನಾಡ ಮುತ್ತಿನಾ ಮಂದಿರದಿ
ಕಾಯಕದ ದೀಪಕ್ಕೆ ಆಚಾರ ತೈಲ ತುಂಬಿ
ನೆಲೆನಿಂತ ಕಾಮಾದಿ ರಿಪುಗಳನು ಓಡಿಸಲು
ದೀಪಧಾರಿಯ ಹಾಗೆ ನಿಂತನಾ ಸಂತಸದಿ

ಶ್ರೀ ಬ್ಯಾಲಾಳ ಅವರು ಕಾವ್ಯ ಕನ್ನಿಕೆಯನ್ನು ಶ್ರದ್ಧೆಯಿಂದ ಕೈ ಹಿಡಿದಿದ್ದಾರೆನ್ನಲು ಅಡ್ಡಿಯಿಲ್ಲ. ಆದರೆ ಅವಳಾಗಲೆ ಒಲಿದಿದ್ದಾಳೆ ಎನ್ನಲಾಗುವುದಿಲ್ಲ. ಏಕೆಂದರೆ ಕವಿತಾ ರಚನೆಯಲ್ಲಿ ಒಂದು ಸುಸಂಬದ್ಧತೆ ಹಾಗೂ ಸಮರ್ಪಕ ಅಭಿವ್ಯಕ್ತಿ ಕಂಡು ಬರುವುದಿಲ್ಲ. ಕಾವ್ಯದ ಜೀವಾಳವಾದ 'ಧ್ವನಿ' ಇಲ್ಲಿ ಇಲ್ಲ ಎನ್ನುವಷ್ಟರಮಟ್ಟಿಗೆ ವಿರಳ. ಕವಿತೆಗಳನ್ನು ತೀರ ವಾಚ್ಯವಾಗಿಸಿ "ಸಪ್ಪೆ" ಎನ್ನುವಂತೆ ಮಾಡಿಬಿಡು

ತ್ತಾರೆ. ಪ್ರಾಸವಿದ್ದರೂ ಸಹ ಭಾವಾರ್ಥಗಳ ಕೇಂದ್ರೀಕರಣಕ್ಕೆ ಅಷ್ಟಾಗಿ ನೆರವಾಗುವುದಿಲ್ಲ. ಸಾದೃಶ್ಯಗಳಿಗಾಗಿ ದೀಪ ಹಿಡಿದು ಹುಡುಕಬೇಕು. ಸಂಕ್ಷಿಪ್ತತೆಯ ಕಡೆಗೆ ಹೆಚ್ಚು ಗಮನಕೊಟ್ಟಂತೆ ಕಾಣುವುದಿಲ್ಲ. ಇಲ್ಲಿನ 'ಸಿಟಿ-"Q"' ಎಂಬ ಕವನವನ್ನು ನಾಲ್ಕು ಸಾಲು ಗದ್ಯದಲ್ಲಿ ಅಚ್ಚುಕಟ್ಟಾಗಿ ಹೇಳಲು ಸಾಧ್ಯ. ಇದನ್ನು ಅನಾವಶ್ಯಕವಾಗಿ ೫೮ ಪದ್ಯ ಸಾಲುಗಳಲ್ಲಿ ಏನೊಂದು ಆಕರ್ಷಣೆಯೂ ಇಲ್ಲದೆ ರಚಿಸಿದ್ದಾರೆ. 'ಚಂದ್ರಿಕೆಗೆ' ಎಂಬಂಥ ಕವನಗಳನ್ನು ಅಚ್ಚುಮಾಡಿಸುವ ಅಗತ್ಯ ಕಂಡುಬರುವುದಿಲ್ಲ. ಕಾವ್ಯಾರಂಭದಲ್ಲಿ ಕೆಲವು ದೋಷಗಳು ಕ್ಷಮ್ಯವೇ ಸರಿ.

ಒಟ್ಟಿನಲ್ಲಿ ಹೇಳುವುದಾದರೆ, ಪ್ರೊ. ಆರ್. ಸಿ. ಹಿರೇಮಠರು ಕೃತಿಯ ಮುನ್ನುಡಿಯಲ್ಲಿ ಹೇಳಿರುವಂತೆ—" ಶ್ರೀ ಬ್ಯಾಲಾಳ ಅವರು ಕಾವ್ಯದ ಕೃಷಿಯಲ್ಲಿ ಈಗ ತಾನೆ ಕಾಲಿಟ್ಟಿರುವವರು. ಅನುಭವವನ್ನು ಅರಗಿಸಿಕೊಂಡು, ವ್ಯಾಸಂಗವನ್ನು ಹೆಚ್ಚಿಸಿಕೊಂಡು, ಶೈಲಿಯನ್ನು ಹಿಗ್ಗಿಸಿಕೊಂಡು ಬರೆಯುತ್ತಾ ಹೋದರೆ ಅವರಿಗೆ ಒಳ್ಳೆಯ ಭವಿಷ್ಯವಿದೆ".

—ಎಂ. ಸಿ. ವಸಂತಕುಮಾರ್

ವಿನಾಯಕ ಕೃಷ್ಣ ಗೋಕಾಕ (ಅಭಿನಂದನ ಗ್ರಂಥ), ಸಂ: ರಾ. ಬಾ. ಲಕ್ಷ್ಮೇಶ್ವರ; ಪ್ರ: ಉಷಾ ಸಾಹಿತ್ಯ ಮಾಲೆ, ಮೈಸೂರು-೧; ಪುಟ: ೧೨೦+೧೬; ಬೆಲೆ: ೫=೦೦; ೧೯೭೦

ಕನ್ನಡ ನಾಡಿನ ಖ್ಯಾತ ಕವಿಗಳೂ ಶಿಕ್ಷಣ ತಜ್ಞರೂ ಆದ ಡಾ. ವಿ. ಕೃ. ಗೋಕಾಕರ ಅರವತ್ತನೆಯ ಹುಟ್ಟುಹಬ್ಬದ ಸವಿನೆನಪಿಗಾಗಿ ಹೊರಬಂದ ಅನೇಕ ಅಭಿನಂದನ ಗ್ರಂಥಗಳ ಪೈಕಿ ಒಂದಾದ ಪ್ರಕೃತ ಗ್ರಂಥದಲ್ಲಿ ಉತ್ತರ ಕರ್ಣಾಟಕದ ಹನ್ನೆರಡು ಮಂದಿ ಬರಹಗಾರರು ಮುಖ್ಯವಾಗಿ ಶ್ರೀ ಗೋಕಾಕರ ಬದುಕು ಹಾಗೂ ವ್ಯಕ್ತಿತ್ವವನ್ನು ತಮಗೆ ತಿಳಿದಂತೆ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಮೊದಲಿಗೆ ಕವಿವರ್ಯ ಶ್ರೀ ದ. ರಾ. ಬೇಂದ್ರೆಯವರು ತುಂಬ ಆತ್ಮೀಯತೆಯಿಂದ ಸ್ವಸ್ತಿ ವಾಚನ ನುಡಿಯುತ್ತ "ಗೋಕಾಕರು ಕಾರ್ಯಕರ್ತರಾಗಿ, ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ಡಿರೆಕ್ಟರ ಆಗಿ, ಕುಲಪತಿಯಾಗಿ ಹೋದರೋ, ಆ ಊರನ್ನು ಬಿಟ್ಟು ಬಂದರೋ ಆಗ ಅವರು 'game' ಆಡಿ ಬಂದರು. ಯಾರು foul ಆಡಲಿ ಏನೋ ಮಾಡಲಿ ಅವರ ಸುತ್ತು ನೆರೆಯುವವರಲ್ಲಿ ಸ್ನೇಹಿತರೂ ಇರುತ್ತಾರೆ, ಹಾಗೆ ನಟಿಸುವವರೂ ಇರುತ್ತಾರೆ. ಗೋಕಾಕರದು ಒಂದು ಮಾರ್ಗ, 'Loyalty,' ಹಾರ್ದಿಕ ಔದಾರ್ಯ" ಎಂದು ಮುಂತಾಗಿ ಕೈವಾರಿಸಿದ್ದಾರೆ. ಕೊನೆಯಲ್ಲಿ 'ವಿನಾಯಕರಿಗೆ ಅರ್ಪಣದ ಅಭೀಪ್ಸೆ ಇದೆ....ಅದು ಹಾಗೇ ಇರಲಿ' ಎಂದು ಹಾರೈಸಿದ್ದಾರೆ. ಶ್ರೀ ನಿರಂಜನರು ಈಗಾಗಲೇ ಹೇಗೆ ಶ್ರೀ ಗೋಕಾರನ್ನು ಕುರಿತ ಮೂರು ಅಭಿನಂದನ ಗ್ರಂಥಗಳು ಪ್ರಕಟವಾಗಿವೆಯೆಂಬುದನ್ನು ನೆನೆದು ಯಶ ಕೋರಿದ್ದಾರೆ.

ಸರ್ವಶ್ರೀ ಮಾನ್ವಿ, ಶಾಂತರಸ, ಜಯತೀರ್ಥ ರಾಜಪುರೋಹಿತ, ಎಚ್. ಎಸ್. ಲಕ್ಷ್ಮೀನರಸಿಂಹಶಾಸ್ತ್ರಿ ಮೊದಲಾದವರ ಲೇಖನಗಳು ಚಿಕ್ಕವಾಗಿದ್ದರೂ ಶ್ರೀ ಗೋಕಾಕರ ವ್ಯಕ್ತಿತ್ವದ ನಾಲ್ಮೊಗಗಳನ್ನು ಪರಿಚಯ ಮಾಡಿಕೊಳ್ಳಲು ಸಹಕಾರಿಯಾಗಿವೆ. ವಿಶೇಷವಾಗಿ ಶ್ರೀಯುತರ ಮಕ್ಕಳಾದ ಶ್ರೀಮತಿ ಯಶೋದಾ ಭಟ್ ಹಾಗೂ ಸರಳಾ ಅವರು ತಮ್ಮ ತಂದೆಯವರ ಗುಣ ಸ್ವಭಾವಗಳನ್ನು ಮನಬಿಚ್ಚಿ ಹೇಳಲು ಪ್ರಯತ್ನಿಸಿರುವುದು ಗಮನಾರ್ಹವಾಗಿದೆ. ಜೊತೆಗೆ ಗೋಕಾಕರ ಹತ್ತಿರದ ಸಂಬಂಧಿಯೂ ಈ ಗ್ರಂಥದ ಸಂಪಾದಕರೂ ಆಗಿರುವ ಶ್ರೀ ರಾ. ಬಾ. ಲಕ್ಷ್ಮೇಶ್ವರರು ವಿನಾಯಕರ ವಿಸ್ತಾರವಾದ ಪರಿಚಯವನ್ನೂ ಅನೇಕ ಚಾರಿತ್ರಿಕ ಅಂಶಗಳನ್ನೂ ಕ್ರೋಡೀಕರಿಸಿಕೊಟ್ಟು, ಹಿನ್ನೆಲೆಯನ್ನು ಸೂಚಿಸಿದ್ದಾರೆ. ಒಟ್ಟಂದದ ದೃಷ್ಟಿಯಿಂದಲೂ ಈ ಗ್ರಂಥ ಒಪ್ಪವಾಗಿದೆ, ಆಕರ್ಷಕವಾಗಿದೆ.

ವಿ.ಸೀ.–ಎಪ್ಪತ್ತೊಂದು(ಅಭಿನಂದನ ಗ್ರಂಥ), ಸಂ : ಜಿ. ಯು. ಭಟ್ ಮತ್ತು ಜಿ.ಎಸ್. ಅವಧಾನಿ; ಪ್ರ : ಸಾಧನ ಪ್ರಕಾಶನ, ಹೊನ್ನಾವರ, ಉ.ಕ.; ಪುಟ ೧೦೪; ಬೆಲೆ ೨-೫೦ ; ೧೯೬೬.

ಹಿರಿಯ ಸಾಹಿತಿಗಳು, ಉತ್ತಮ ವಿಮರ್ಶಕರು, ವಿದ್ವಾಂಸರು ಎಂದು ವಿಖ್ಯಾತರಾಗಿರುವ ಶ್ರೀ ವಿ. ಸೀತಾರಾಮಯ್ಯನವರಿಗೆ ಎಪ್ಪತ್ತೊಂದು ವರ್ಷ ತುಂಬಿದ್ದರ ಸವಿನೆನಪಿಗಾಗಿ ಅವರ ಪ್ರಿಯ ಶಿಷ್ಯರು, ಮಿತ್ರವರ್ಗದವರು, ಅಭಿಮಾನಿಗಳು ಅತ್ಯುತ್ಸಾಹದಿಂದ ಹೊರತಂದಿರುವ ಈ ಗ್ರಂಥದಲ್ಲಿ ಒಟ್ಟು ಹದಿನೇಳು ಮಂದಿ ಲೇಖಕರ ಬರಹಗಳಿವೆ. ಸರ್ವಶ್ರೀ ವಿ. ಕೃ. ಗೋಕಾಕ, ಬಿ. ಎಚ್. ಶ್ರೀಧರ, ಸೇವ ನಮಿರಾಜಮಲ್ಲ, ಎನ್ಕೆ, ಗೌರೀಶ ಕಾಯ್ಕಿಣಿ, ದಿನಕರ ದೇಸಾಯಿ ಮುಂತಾದ ಪ್ರಸಿದ್ಧ ಬರಹಗಾರರು ವಿ. ಸೀ. ಅವರ ವಿಚಾರ ಶೀಲತೆ, ನಾಟಕಕಾರ, ವಿಮರ್ಶಕ ವಿ. ಸೀ. ಅವರ ಸಾಧನೆ, ಸಿದ್ಧಿಗಳನ್ನು ಕುರಿತು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅವರ ವ್ಯಕ್ತಿತ್ವವನ್ನು ತಾವು ಕಂಡಂತೆ ಚಿತ್ರಿಸಲು ಕೆಲವು ಲೇಖಕರು ಯತ್ನಿಸಿದ್ದಾರೆ. ಕೆಲವರು ಅವರ ಮೇಲೆ ಕವಿತೆಯನ್ನೂ ಕಟ್ಟಿದ್ದಾರೆ.

ನಾಡಿನ ಹಿರಿಯ ಸಾಹಿತಿಗಳನ್ನು ಸತ್ಕರಿಸಿ, ಗೌರವಿಸಿ ಅವರ ವ್ಯಕ್ತಿತ್ವ ಹಾಗೂ ಸಾಹಿತ್ಯ ಶಕ್ತಿಯನ್ನು ಪ್ರಕಾಶಗೊಳಿಸುವ ಇಂಥ ಸತ್ಸಂಪ್ರದಾಯವನ್ನು ಅನುಸರಿಸಿ ಹೊರಬಂದಿರುವ ಈ ಅಭಿನಂದನ ಗ್ರಂಥ ಪುಟ್ಟದಾಗಿದ್ದರೂ ಅಚ್ಚುಕಟ್ಟಾಗಿದೆ. ವಿ. ಸೀ. ಅವರ ವ್ಯಕ್ತಿತ್ವಕ್ಕೆ ಸರಿಹೋಲುವ ಜಾಜಿಯ ಹೂವಿನಂತಿರುವ ಇದು ಅವರ ವ್ಯಕ್ತಿ, ಕೃತಿ ಪರಿಚಯಕ್ಕೇ ತನಿಮೀಸಲಾಗಿದೆ. ವಿಶೇಷವಾಗಿ ವಿ. ಸೀ ಅವರ ವಿಶಿಷ್ಟ ಸೂಕ್ತಿಗಳೆನ್ನಬಹುದಾದ 'ವಿಮರ್ಶೆ ಒಂದು ಪಂಜು; ರಾಜದಂಡವಲ್ಲ,' 'ಸಾಹಿತ್ಯದ್ದು ಸೌಹಾರ್ದದ ಪ್ರಪಂಚ', 'ಎಲ್ಲಿಯೂ ಮರ್ಯಾದೆಯ ಮಿತಿಗಳಿವೆ'–ಇಂಥ ಮಾತುಗಳು ಹಲವಾರನ್ನಿಲ್ಲಿ ಉದ್ಧರಿಸಿರುವುದೊಂದು ಹೆಗ್ಗಳಿಕೆ. 'ಹಂಪೆಯ ಹಾಳಿಗೂ ಬಾಳುಂಟು, ವಿ.ಸೀ. ಅವರ ಮೌನಕ್ಕೂ

ಮಾತುಂಟು' ಇತ್ಯಾದಿಯಾದ ಸಾರ್ಥಕ ಮಾತುಗಳಲ್ಲಿ ಅವರ ವ್ಯಕ್ತಿತ್ವವನ್ನು ರೂಪಿಸಿರುವುದರಿಂದ, ಆ ಮಾತುಗಳು ಓದುಗರನ್ನು ಮೆಲುಕು ಹಾಕುವಂತೆ ಮಾಡುತ್ತವೆ; ವ್ಯಕ್ತಿಯ ಸ್ಥೂಲ ಚಿತ್ರ ಮೂಡಿಸುತ್ತವೆ.

—ಶ್ರೀ ನಂತ

ಬಿಡಿ ಮುತ್ತುಗಳು, ಲೇ: ರಾ. ಅನಂತರಾಮು; ಪ್ರ: ಶ್ವೇತಾದ್ರಿ ಪ್ರಕಾಶನಾಲಯ, ೧೩೭೩, ಕೃಷ್ಣಮೂರ್ತಿಪುರಂ, ಮೈಸೂರು; ಪುಟಗಳು-೬೨; ಬೆಲೆ: ೨-೦೦; ೧೯೬೮.

'ಬಿಡಿ ಮುತ್ತುಗಳು' ಕವನ ಸಂಕಲನದಲ್ಲಿ ೩೯ ಕವಿತೆಗಳಿವೆ. ಪ್ರತಿಯೊಂದು ಕವನದ ಸಂದರ್ಭ, ತಾತ್ಪರ್ಯವನ್ನು ಪರಿಚಯ ಮಾಡಿಕೊಟ್ಟಿದೆ. ಈಯತ್ನ ಮೆಚ್ಚತಕ್ಕದ್ದಾಗಿದೆ.

ರಾ. ಅನಂತರಾಮು ಅವರ ಭಾಷೆಯಲ್ಲಿ ಬನಿ ಕಂಡುಬರುವುದಿಲ್ಲ. ಇಲ್ಲಿಯ ಬಹುಪಾಲು ಕವಿತೆಗಳು ತೀವ್ರಾನುಭವದ ಕೊರತೆಯಿಂದ ಕುಂಠಿತವಾಗಿ, ಅಭಿವ್ಯಕ್ತಿ ಸಾರ್ಥಕವಾಗಿಲ್ಲ ಎನ್ನಿಸುತ್ತದೆ. ಇವರು ಪ್ರೇಮಗೀತೆಗಳನ್ನು ತಕ್ಕ ಮಟ್ಟಿಗೆ ಬರೆಯಬಲ್ಲರೆಂಬುದಕ್ಕೆ ನಿದರ್ಶನ-'ನಾನು-ನೀನು' ಮತ್ತು 'ಕೆಂದುಟಿಯ ಮುತ್ತು'. 'ನಾನು-ನೀನು' ಕವಿತೆಯ ಮೂರನೆಯ ಭಾಗ ವಾಚ್ಯವಾಯಿತು; ಅಲ್ಲದೆ ಅದರಲ್ಲಿ ಔಚಿತ್ಯ ಕಾಣದು. 'ಕೃಷಿಕನಿಗೆ' ಕವನವು ಚಿಕ್ಕದಾದರೂ ಚೊಕ್ಕವಾಗಿ ಬಂದಿದೆ; ಮೆಚ್ಚಬಹುದು.

'ಸ್ವಾನುಭವ, ಸ್ವದರ್ಶನ ಇವುಗಳಿಂದ ಪರಿಪುಷ್ಟವಾಗಿ ಶ್ರೀ ಅನಂತರಾಮು ಇವರ ಕಾವ್ಯ ತನ್ನ ಸ್ವಂತಿಕೆಯನ್ನು ಪಡೆಯಲಿ'-ಎಂದು ರಂ. ಶ್ರೀ. ಮುಗಳಿ ಅವರು ಹರಕೆಯಲ್ಲಿ ಹೇಳಿರುವ ಮಾತಿನಲ್ಲಿ ಹುರುಳಿದೆ ಎನ್ನಿಸಿತು-ಈ ಸಂಕಲನವನ್ನು ಸಮೀಕ್ಷಿಸಿದಾಗ.

'ಮಸಣದಲ್ಲಿ' ಎಂಬ ಕವಿತೆಯು ನೇಮಿಚಂದ್ರರ ಶ್ಮಶಾನವರ್ಣನೆಯ ಛಾಯೆಯಿಂದ ಕೂಡಿದೆ. 'ಕುವೆಂಪು' ಅವರ ಪ್ರಭಾವವನ್ನು 'ಮನ್ಮನೋಮಂದಿರಕೆ ಬಾ'ಎಂಬ ಕವನದಲ್ಲಿ ಕಾಣಬಹುದು.

ಅನುವಾದ ಕವಿತೆಯಾದ 'ಬುದ್ಧಗುರುದೇವ ಮತ್ತು ಕಿಸಾಗೌತಮಿ'ಯಲ್ಲಿ ಕಥೆಯನ್ನು ಚೆನ್ನಾಗಿ ಹೇಳಿದ್ದಾರೆ. 'ಅಜ್ಞಾನ ಶಿಕ್ಷಕನಿಗೆ' ಕವಿತೆಯಲ್ಲಿ ಹೆನ್ರಿಡೈಕ್‌ನ 'A tribute to an unknown teacher' ಪ್ರಬಂಧದ ಭಾವವನ್ನು ಭಟ್ಟಿ ಇಳಿಸಿದ್ದಾರೆ; ಆದರೆ ಲೇಖಕರು ಅದನ್ನು ಹೇಳಿಕೊಳ್ಳದೆ ಇರುವುದು ಅವರ ಅಪ್ರಾಮಾಣಿಕತೆಯನ್ನು ತಿಳಿಸುತ್ತದೆ. 'ಯುಗಾದಿ' ಕವನ ಕೇವಲ ಶಬ್ದಜಾಲದಿಂದ ಕೂಡಿದೆ.

ಕೆಲವು ಕಡೆ ಇವರ ಪ್ರತಿಭೆಯ ಮಿಂಚನ್ನೂ ಕಲ್ಪನೆ ಕಣ್ದೆರೆದಿರುವುದನ್ನೂ ಗುರುತಿಸಬಹುದು:

ಸರ್ಪವದು ಕಿರಿದಿತ್ತು ; ಕಣ್ಗೆ ಚೆಲುವೆನಿಸಿತ್ತು
ಮುತ್ತನೊತ್ತಿದ ಬಳಿಯೆ ಕಿರಿಯ ಕರಿಗುರುತಿರಲು
ಕಚ್ಚಿಲ್ಲ ಚುಂಬಿಸಿದೆ ಕಂದನನು

(ಬುದ್ಧದೇವ ಮತ್ತು ಕಿಸಾಗೌತಮಿ)

ತಾರೆಗಣ್ಣಿಂದು ಮುಖಿ !
ಎನ್ನೊಲವಿನಾಗಸದಿ
ಕಂಡವಳು ನೀನು

(ನಾನು–ನೀನು)

ನಿನ್ನ ಮುತ್ತಿಗೆ ನಿನ್ನ ಕೆಂಡುಟಿಯು ತೊಟ್ಟಲೇ ಮರಣ

(ಮಹಾರಾತ್ರಿ)

ಇದು ಗದ್ಯದಂತಿದ್ದರೂ ಕಲ್ಪನೆ ಚೆನ್ನಾಗಿದೆ.

ಶ್ರೀ ರಾ. ಅನಂತರಾಮು ಅವರ ಕವಿತಾ ರಚನೆಯ ಅಭೀಪ್ಸೆ ಮೆಚ್ಚತಕ್ಕದ್ದು. ಸತತವಾದ ಚಿಂತನೆ ನಡೆಸಿ ಸತ್ವಯುತವಾದ ಕವಿತೆಗಳನ್ನು ರಚಿಸುವುದರತ್ತ ಗಮನವಿತ್ತು, ಅವರು ಉತ್ತಮ ಕವನ ಸಂಕಲಗಳನ್ನು ಸಹೃದಯರಿಗೆ ನೀಡಲೆಂದು ಆಶಿಸೋಣ.

—ಜಿ. ವಿ. ಡಿ.

**ನಾ ಕಂಡ ಜರ್ಮನಿ**, ಲೇಖಕರು : ಹೊ. ಶ್ರೀನಿವಾಸಯ್ಯ ; ಪ್ರಕಾಶಕರು : ಗಾಂಧಿ ಸಾಹಿತ್ಯ ಸಂಘ, ಮಲ್ಲೇಶ್ವರಂ, ಬೆಂಗಳೂರು ; ಬೆಲೆ : ರೂ. ೩–೦೦.

ಕನ್ನಡ ಸಾಹಿತ್ಯದಲ್ಲಿ ಉತ್ತಮ ಪ್ರವಾಸ ಸಾಹಿತ್ಯದ ಕೊರತೆಯಿದೆ. 'ನಾ ಕಂಡ ಜರ್ಮನಿ'ಯಂಥ ಕೃತಿಗಳು ಆಗಾಗ ಬಂದು ಆ ಕೊರತೆಯನ್ನು ತಕ್ಕಮಟ್ಟಿಗೆ ದೂರ ಮಾಡುತ್ತವೆ. ಇದಕ್ಕಾಗಿ ಲೇಖಕರು ಅಭಿನಂದನೀಯರು.

ಶ್ರೀನಿವಾಸಯ್ಯನವರು ಈ ಪುಸ್ತಕವನ್ನು ೨೨ ಭಾಗಗಳಾಗಿ ವಿಂಗಡಿಸಿದ್ದಾರೆ. ಶ್ರೀಯುತರು ಜರ್ಮನಿಗೆ ಎರಡು ಸಲ ಹೋಗಿಬಂದಿದ್ದಾರೆ. ಅಲ್ಲಿಯ ಜನರ ಕಾರ್ಯ ತತ್ಪರತೆ, ನಡೆನಡಾವಳಿ, ಸಾಮಾಜಿಕ ಆಚಾರ ವಿಚಾರಗಳು, ಹಬ್ಬಗಳನ್ನು ವಾಚಕರಿಗೆ ಮನದಟ್ಟಾಗುವಂತೆ ಇದರಲ್ಲಿ ಪ್ರತಿಪಾದನ ಮಾಡಿದ್ದಾರೆ.

ಪ್ರತಿವರ್ಷವೂ ಭಾರತದಿಂದ ಹಲವಾರು ಜನರು ಪರದೇಶಕ್ಕೆ ಪ್ರಯಾಣ ಮಾಡುತ್ತಾರೆ. ಬೊಂಬಾಯಿ ಬಂದರದಲ್ಲಿ ಹಡಗವನ್ನು ಏರಿದ ಕೂಡಲೆ ಅವರ ಮನೋಧರ್ಮವೇ ವ್ಯತ್ಯಾಸವಾಗುತ್ತದಂತೆ. ಕೆಲವರು ಪಾಶ್ಚಾತ್ಯ ಸಂಸ್ಕೃತಿಗೆ ಮಾರುಹೋಗಿ, ಕಡಿತ, ಕುಡಿತ, ಕುಣಿತಗಳನ್ನು ಕಲಿತು ಸ್ವೇಚ್ಛಾಚಾರಿಗಳಾಗಿ, ನಮ್ಮ ಸಂಸ್ಕೃತಿಯನ್ನು ಅವಹೇಳನಮಾಡುವುದೆ ಅವರ ಮನೋಧರ್ಮವಾಗಿರುತ್ತದೆಯೆಂದು ಲೇಖಕರು ಮಾರ್ಮಿಕವಾಗಿ ತಿಳಿಸಿದ್ದಾರೆ.

ನಾವು ಜರ್ಮನಿಯವರಿಂದ ಕಲಿಯಬೇಕಾದದ್ದು ಬೇಕಾದಷ್ಟಿದೆ. ಅವರಿಗೆ ಅಪಾರವಾದ ದೇಶಪ್ರೇಮವಿದೆ. ಅವರು ನಿಜವಾಗಿಯೂ ಕರ್ಮಯೋಗಿಗಳು. ರಾಜಕೀಯವನ್ನು ನಾಯಕರಿಗೆ ಬಿಟ್ಟು ಅವರು ನಿಷ್ಠೆಯಿಂದ ಕೆಲಸಮಾಡುತ್ತಾರಂತೆ. ಅಲ್ಲಿಯ ಜನರು ೮ ಗಂಟೆ ಕೆಲಸ, ೮ ಗಂಟೆ ನಿದ್ರೆ, ೮ ಗಂಟೆ ಊಟ ಮುಂತಾದುವು ಗಳನ್ನು ಮಾಡಿ ದಿನವನ್ನು ಕಳೆಯುತ್ತಾರಂತೆ. 'ನಾನು ಕೆಲಸ ಮಾಡಬೇಕು, ಇಲ್ಲದಿದ್ದರೆ ದೇಶ ಮುಂದೆ ಬರುವುದಿಲ್ಲ' ಎಂಬ ಮನೋಭಾವನೆ ಕಾರಖಾನೆಯಲ್ಲಿ ಕೆಲಸಮಾಡುವ ಪ್ರತಿಯೊಬ್ಬನಲ್ಲಿಯೂ ಇರುತ್ತದಂತೆ. ಇಂಥ ದೇಶಪ್ರೇಮ, ಕರ್ಮಯೋಗಿತ್ವ, ಕಾರ್ಯದಕ್ಷತೆ ನಮ್ಮ ದೇಶದ ಜನರಲ್ಲಿ ಇಲ್ಲವಲ್ಲಾ ಎಂದು ಲೇಖಕರು ವ್ಯಥೆಪಟ್ಟಿದ್ದಾರೆ.

ಶ್ರೀನಿವಾಸಯ್ಯನವರು ಏಳೆಂಟು ತಿಂಗಳು ಪಶ್ಚಿಮ ಜರ್ಮನಿಗೆ ಹೋದಾಗ ಅಲ್ಲಿಯ ಮಧ್ಯಮ ವರ್ಗದ ಜನರ ಜೊತೆಯಲ್ಲಿ ಬೆರೆತು, ಅವರ ಮನೋಧರ್ಮ ವನ್ನು ಅರಿತು, ನಮ್ಮ ಸಂಸ್ಕೃತಿಯ ತಿರುಳನ್ನು ಅವರಿಗೆ ತಿಳಿಸಿದ್ದಾರೆ. ಕೆಲವೆಡೆ ಯಲ್ಲಿ ನಮ್ಮ ಭಾರತದ ಬಗ್ಗೆ ಇರುವ ತಪ್ಪು ಕಲ್ಪನೆಯನ್ನು ಖಂಡಿಸಿದ್ದಾರೆ. ಪೂಜ್ಯ ಬಾಪೂಜಿ, ನೆಹರು, ಟಾಗೂರರ ಬಗ್ಗೆ ಆ ಜನರಲ್ಲಿರುವ ಆದರ ಗೌರವಗಳನ್ನು ಮೆಚ್ಚಿಕೊಂಡಿದ್ದಾರೆ.

ಈ ಕೃತಿಯ ಬಹುಭಾಗವನ್ನು ಲೇಖಕರ ಜರ್ಮನಿಯಲ್ಲಿಯ ಅನುಭವಗಳಿಗೆ ಕಾಯ್ದಿರಿಸಲಾಗಿದೆ. ಅವರು ಜರ್ಮನಿಯ ಮಂಜಿನ ಮುಸುಕಿನಲ್ಲಿ ಸಸ್ಯಾಹಾರಿಗಳಾಗಿ ಖಾದಿಧಾರಿಗಳಾಗಿ, ಕುಡಿತ ಕುಣಿತಗಳಿಗೆ ಮಾರುಹೋಗದೆ ಗಾಂಧಿವಾದಿಗಳಾಗಿ ಉಳಿದು, ಪರದೇಶಕ್ಕೆ ಹೋಗುವ ಜನರಿಗೆ ಆದರ್ಶವಾದಿಗಳಾಗಿದ್ದಾರೆ. ಪುಸ್ತಕದ ಕೊನೆಯ ೬೭ ಪುಟಗಳು ಅವರ ಐರೋಪ್ಯ ದೇಶದ ಪ್ರವಾಸದ ಅನುಭವಕ್ಕೆ ಮೀಸಲಾಗಿವೆ. ಮುಖ್ಯವಾಗಿ ಬೆಲ್ಜಿಯಂ, ಹಾಲೆಂಡ್, ಇಂಗ್ಲೆಂಡ್, ಫ್ರಾನ್ಸ್, ಸ್ವಿಟ್ಜರ್ಲೆಂಡ್ ಮೊದಲಾದ ದೇಶಗಳ ಮುಖ್ಯಪಟ್ಟಣಗಳನ್ನೂ ಅಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನೂ ಸಂಸ್ಕೃತಿಯನ್ನೂ ಆಕರ್ಷಣೀಯವಾಗಿ ತಿಳಿಸಿದ್ದಾರೆ.

ಲೇಖಕರು ತಾವು ಸಾಹಿತಿಗಳಲ್ಲವೆಂದು ಹೇಳಿದ್ದಾರೆ. ಆದರೆ ಸಾಹಿತಿಯ ಎಲ್ಲ ಲಕ್ಷಣಗಳು ಅವರಲ್ಲಿವೆ. ಈ ಕೃತಿಯಲ್ಲಿ ಪುಟ್ಟ ಪುಟ್ಟ ವಾಕ್ಯಗಳಿವೆ. ಎಲ್ಲಿಯೂ ಆಡಂಬರದ ಭಾಷೆಯಿಲ್ಲ. ಹೇರಳವಾದ ವಿಷಯಸಂಪತ್ತಿದೆ. ವಿಷಯ ಪ್ರತಿಪಾದನೆ ಯಲ್ಲಿ ಹೊಂದಾಣಿಕೆಯಿದೆ. ಲೇಖಕರು ಕಂಡ ಜರ್ಮನಿಯನ್ನು ವಾಚಕರೂ ಕಾಣಬಹುದಾಗಿದೆ. ಇದೇ ರೀತಿಯಾಗಿ, ಶ್ರೀನಿವಾಸಯ್ಯನವರು ಪರದೇಶಕ್ಕೆ ಆಗಾಗ ಹೋಗಿ, ನಮ್ಮ ಸಂಸ್ಕೃತಿಯ ಸೊಂಪನ್ನು ಅಲ್ಲಿ ಬೀರಿ ಅಲ್ಲಿಯ ಕಾರ್ಯ ದಕ್ಷತೆಯ ಕಂಪನ್ನು ಇಲ್ಲಿ ಬೀರುವಂಥ ಕೃತಿಗಳನ್ನು ಇನ್ನೂ ಹಲವಾರು ಬರೆಯ ಲೆಂದು ಹಾರೈಸುತ್ತೇವೆ.

**ಬಸವ ಪ್ರಕಾಶ, ಲೇ: ಶ್ರೀಮತಿ ಶಾಂತಾದೇವಿ ಮಾಳವಾಡ; ಪ್ರಕಾಶಕರು: ಸುರುಚಿ ಪ್ರಕಾಶನ, ಸರಸ್ವತಿಪುರಂ, ಮೈಸೂರು–೯; ಬೆಲೆ: ೫–೫೦.**

ಇದೊಂದು ಐತಿಹಾಸಿಕ ಕಾದಂಬರಿ. ಬಸವಣ್ಣನವರ ಎಂಟನೆಯ ಶತಮಾನೋತ್ಸವದ ಕಾಲದಲ್ಲಿ ಬಸವ ಸಾಹಿತ್ಯ ಹಾಗೂ ವಚನ ಸಾಹಿತ್ಯವು ಹೊರವಾಗಿ ಹರಿದುಬಂದಿದೆ. ಇಂಥ ಸಂದರ್ಭದಲ್ಲಿ ಈ ಕೃತಿಯು ಬಸವಣ್ಣನವರ ಅಡಿದಾವರೆಗಳಿಗೆ ಅರ್ಪಿತವಾದುದು ಔಚಿತ್ಯಪೂರ್ಣವಾಗಿದೆ. ಇದಕ್ಕಾಗಿ ಶ್ರೀಮತಿಯವರು ಅಭಿನಂದನೀಯರು.

ಈ ಕೃತಿಯಲ್ಲಿ ಬಸವಣ್ಣನವರ ಸಮಗ್ರ ಜೀವನದ ಚಿತ್ರವಿದೆ. ಈ ಚಿತ್ರವು "ಐತಿಹಾಸಿಕ, ಪೌರಾಣಿಕ ತಳಹದಿಯ ಮೇಲೆ ನಿಂತಿಲ್ಲವಾಗಿಯೂ, ಶರಣರ ವಚನಗಳಲ್ಲಿಯ ತಿರುಳಿಗೆ, ಹೃದಯದ ಅನಿಸಿಕೆಗೆ ಹೆಚ್ಚಿನ ಗಮನಕೊಟ್ಟಿರುವುದಾಗಿ"ಯೂ ಶ್ರೀಮತಿಯವರು ತಮ್ಮ ಅರಿಕೆಯಲ್ಲಿ ಹೇಳಿಕೊಂಡಿದ್ದಾರೆ. ಶಿವಸ್ವಾಮಿಯ ಪಾತ್ರವನ್ನು ಸೃಷ್ಟಿಸಿ ನಾಗಲಾಂಬಿಕೆಯ ಸಾಂಸಾರಿಕ ಜೀವನದ ಸಮಸ್ಯೆಯನ್ನು ಬಿಡಿಸಿದ್ದಾರೆ. ಬಸವಣ್ಣನವರು, ಗಂಗಾಬಿಕೆ, ನೀಲಾಂಬಿಕೆಯರನ್ನು ಮದುವೆಯಾಗಿದ್ದರು. ಅವರು ಇಬ್ಬರನ್ನು ಏಕೆ ಮದುವೆಯಾದರು ಎಂಬುದನ್ನು ಯಾವ ಕಾವ್ಯವೂ ತಿಳಿಸುವುದಿಲ್ಲ. ಶ್ರೀಮತಿಯವರು ಹೊಸ ರೀತಿಯಲ್ಲಿ ಈ ವಿಷಯವನ್ನು ಪ್ರತಿಪಾದಿಸಿ, ಬಸವಣ್ಣನವರ ವ್ಯಕ್ತಿತ್ವಕ್ಕೆ ಇವರುಗಳ ಕೊಡುಗೆಯೇನೆನ್ನುವುದನ್ನು ತಿಳಿಸಿದ್ದಾರೆ.

ವಚನ ಸಾಹಿತ್ಯದಲ್ಲಿ ಶಾಂತಾದೇವಿಯವರಿಗೆ ಆಳವಾದ ಪರಿಶ್ರಮವಿದೆ. ಬಸವಣ್ಣನವರ ಆಧ್ಯಾತ್ಮಿಕ ಜೀವನದ ಜೊತೆಯಲ್ಲಿ ಹಲವು ವಚನಕಾರರ ವ್ಯಕ್ತಿತ್ವವು ಹೇಗೆ ಉಜ್ವಲವಾಗಿ ನಿರೂಪಿತವಾಗಿದೆಯೆಂಬುದನ್ನು ಇಲ್ಲಿ ನಾವು ನಿಚ್ಚಳವಾಗಿ ಕಾಣುತ್ತೇವೆ. ಅವರ ಜ್ಞಾನತೃಷೆಗೆ ಅಲ್ಲಮಪ್ರಭು, ಸಿದ್ಧರಾಮ, ಅಕ್ಕಮಹಾದೇವಿಯವರ ಸಂಪರ್ಕವು ಅಮೃತಗರೆದಂತಾಯಿತು. ಇವರುಗಳ ಸಂಘಟನಾಶಕ್ತಿಯಿಂದ ಮಹಾಮನೆ ಉದ್ಭವವಾಯಿತು; ನವಸಮಾಜದ ದರ್ಶನವಾಯಿತು; ಸರ್ವರಿಗೂ ಸಮಬಾಳನ್ನು ಕಲಿಸಿಕೊಟ್ಟಿತು; ಅನುಭವ ಮಂಟಪದ ನಿರ್ಮಾಣವಾಯಿತು. ಬಸವಣ್ಣನವರು ಪತಿತೋದ್ಧಾರ, ಅಸ್ಪೃಶ್ಯೋದ್ಧಾರದ ಧುರೀಣರಾದರು. ಕೊನೆಗೆ ಮಹದೇವ, ಗೌರಾಂಬಿಕೆಯರ ಅಂತರ್ಜಾತೀಯ ವಿವಾಹವನ್ನು ಮಾಡಿಸಿ, ಬಿಜ್ಜಳನ ಕೋಪಕ್ಕೆ ಗುರಿಯಾಗಿ, ಕಲ್ಯಾಣದಿಂದ ಸಂಗಮೇಶ್ವರಕ್ಕೆ ಹೋಗಿ ಅಲ್ಲಿಯೇ ಐಕ್ಯರಾದರು. ಹೀಗೆ ಬಸವಣ್ಣನವರ ವಿವಿಧ ಮುಖದ ಜೀವನದರ್ಶನವು ಈ ಗ್ರಂಥದಲ್ಲಿ ಮನೋಜ್ಞವಾಗಿ ಚಿತ್ರಿತವಾಗಿದೆ.

ಬಸವಣ್ಣನವರು ಉಪನಯನವನ್ನು ಮಾಡಿಕೊಳ್ಳದೆ, ತಂದೆತಾಯಿಗಳನ್ನು ವಿರೋಧಿಸಿ ಕೂಡಲ ಸಂಗಮಕ್ಕೆ ಹೋದುದು, ಗುರುವಿನ ಅಪ್ಪಣೆಯ ಪ್ರಕಾರ ಕೂಡಲಸಂಗಮದಿಂದ ಕಲ್ಯಾಣಕ್ಕೆ ಹೋದುದು ಈ ಕೃತಿಯಿಂದ ತಿಳಿದುಬರುತ್ತದೆ.

ಹರಿಹರನ 'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನು ಚಿಕ್ಕಂದಿನಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ಮುತ್ತಬ್ಬೆಯ ಮಡಿಲಿನಲ್ಲಿ ಬೆಳೆಯುತ್ತಾನೆ. "ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದುಬಿಸುಟು, ಹೋತಿಗೆ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಱಿದು ಬಿಸುಟು" ಎಂಬ ಮಾತು ಬರುತ್ತದೆ. ಬಸವಣ್ಣನವರು ಕೂಡಲಸಂಗಮದಿಂದ ಕಲ್ಯಾಣಕ್ಕೆ ಹೋದ ಸನ್ನಿವೇಶವಂತೂ ಹೃದಯದ್ರಾವಕವಾದುದು. ಇಲ್ಲಿ ಪರಮಾತ್ಮ ಹಾಗೂ ಭಕ್ತನ ಮನದೆರಕವನ್ನು ನೋಡಬೇಕು. ಅದು ಹೃದಯಂಗಮವಾಗಿ ಚಿತ್ರಿತವಾಗಿದೆ. ಈ ಎರಡು ಸನ್ನಿವೇಶ ಗಳಲ್ಲಿ ಶ್ರೀಮತಿಯವರು ಹರಿಹರನನ್ನು ಅನುಸರಿಸಿದ್ದರೆ ಬಸವಣ್ಣನವರ ವ್ಯಕ್ತಿತ್ವಕ್ಕೆ ಇನ್ನೂ ಉಜ್ವಲತೆ ಬರುತ್ತಿತ್ತೆಂದು ತೋರುತ್ತದೆ.

ಬಸವಣ್ಣನವರ ಪರಿಶುದ್ಧವಾದ ಬಾಳಿನ ಬೆಳಕು ಈ ಕೃತಿಯಲ್ಲಿ ಬೆಳಗಿರು ವುದರಿಂದ ಇದಕ್ಕೆ "ಬಸವ ಪ್ರಕಾಶ"ವೆಂಬ ಹೆಸರುಕೊಟ್ಟಿರುವುದು ಔಚಿತ್ಯ ಪೂರ್ಣವಾಗಿದೆ. ಇಂಥ ಇನ್ನೂ ಹಲವಾರು ಕೃತಿಗಳು ಶ್ರೀಮತಿಯವರಿಂದ ರಚಿತವಾಗಲೆಂದು ಹಾರೈಸುತ್ತೇವೆ.

—ಕೆ. ರಾಘವೇಂದ್ರರಾವ್

# ಸಂಪಾದಕೀಯ

**ಅಭಿನಂದನೆ : ಐವತ್ತು ತುಂಬಿದ ತ.ರಾ.ಸು.**

ತ.ರಾ.ಸು. ಎಂಬ ಸಂಕ್ಷಿಪ್ತನಾಮದಿಂದ 'ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಪ್ರಸಿದ್ಧ ರಾಗಿರುವ ಶ್ರೀಮಾನ್ ತ. ರಾ. ಸುಬ್ಬರಾಯ (ತಳುಕಿನ ರಾಮಸ್ವಾಮಯ್ಯ ಸುಬ್ಬರಾಯ)ರಿಗೆ ಈ ವರ್ಷದ ಬಸವಜಯಂತಿಯಂದು ಐವತ್ತು ತುಂಬಿತು. ಕನ್ನಡ ಕಾದಂಬರಿಗಳ ರಚನೆಯಲ್ಲಿ ಸಿದ್ಧಹಸ್ತರೆಂದು ಹೆಸರು ಪಡೆದಿರುವ ಈ ಮಹನೀಯರಿಗೆ ಅವರ ಅಭಿಮಾನಿಗಳೂ ಮಿತ್ರರೂ ಕನ್ನಡ ನಾಡಿನ ಹಲವು ಭಾಗಗಳಲ್ಲಿ ಸನ್ಮಾನ ಸಮಾರಂಭಗಳನ್ನು ನಡಸಿದರು. ಇದು ಸ್ತುತ್ಯವೇ ಆಗಿದೆ.

ಶ್ರೀಮಾನ್ ತ. ರಾ. ಸುಬ್ಬರಾಯರು ಪ್ರೊ. ಟಿ. ಎಸ್. ವೆಂಕಣ್ಣಯ್ಯನವರ ಹಿರಿಯ ಮನೆತನಕ್ಕೆ ಸೇರಿದವರು. ಸಾಹಿತ್ಯಾಭಿರುಚಿ ಸಾಹಿತ್ಯಸೇವೆಗಳು ಆ ಮನೆತನದವರಲ್ಲಿ ಸಹಜವಾಗಿ ಬಂದ ಶ್ರೇಷ್ಠಗುಣಗಳಾಗಿವೆ. ತ. ರಾ. ಸು. ಅವರು ಪ್ರೊ. ವೆಂಕಣ್ಣಯ್ಯನವರು, ಸಿದ್ಧವನಹಳ್ಳಿ ಕೃಷ್ಣಶರ್ಮರು, ಅ. ನ. ಕೃಷ್ಣರಾಯರು ಇಂತಹ ಹಿರಿಯರ ಪ್ರಭಾವ ಪ್ರೇರಣೆಗಳಿಂದ ಸ್ಫೂರ್ತಿಗೊಂಡು ಉತ್ತಮ ಲೇಖಕ ರಾಗಿ ಸಾಕಷ್ಟು ಕಾಲದಿಂದ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ನಿರಂತರವಾಗಿ ಶ್ರಮಿಸುತ್ತ ಬಂದಿದ್ದಾರೆ. ಸಣ್ಣಕತೆ, ನಾಟಕ, ಜೀವನಚರಿತ್ರೆ, ಅನುವಾದ—ಈ ಮೊದಲಾದ ಪ್ರಕಾರಗಳಲ್ಲಿ ಅವರು ಕೃತಿರಚನೆ ಮಾಡಿದ್ದರೂ, ಕನ್ನಡ ನಾಡಿನಲ್ಲಿ ಅವರು ಪ್ರಖ್ಯಾತರಾಗಿರುವುದು ಕಾದಂಬರಿಕಾರರಾಗಿ. ಅವರು ಈಗಾಗಲೇ ಐವತ್ತಕ್ಕೆ ಮೇಲ್ಪಟ್ಟ ಕಾದಂಬರಿಗಳನ್ನು ಬರೆದಿದ್ದಾರೆ. ಅವರ ಸಾಮಾಜಿಕ ಕಾದಂಬರಿಗಳು ಸಮಾಜದ ನಾನಾ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ವಿಶ್ಲೇಷಿಸಿರುವಂತೆಯೇ ಐತಿಹಾಸಿಕ ಕಾದಂಬರಿಗಳು ಗತಕಾಲದ ಇತಿಹಾಸದ ಘಟನೆಗಳನ್ನು ಉಜ್ವಲವಾಗಿ ಚಿತ್ರಿಸಿವೆ. ತಮ್ಮ ನಿರರ್ಗಳವೂ ಓಜಸ್ವಿಯೂ ಆದ ವಿಶಿಷ್ಟ ರೀತಿಯ ಗದ್ಯಶೈಲಿಗೆ ಅವರು ಹೆಸರಾಗಿದ್ದಾರೆ.

ಈ ಮಹನೀಯರ ಸಾಹಿತ್ಯಸೇವೆ ಇನ್ನೂ ಹಲವುಕಾಲ ನಡೆಯಲಿ, ಭಗವಂತನು ಅವರಿಗೆ ಸಕಲ ಶುಭಗಳನ್ನೂ ಕರುಣಿಸಲಿ—ಎಂದು ಅವರಿಗೆ ಐವತ್ತುವರ್ಷ ತುಂಬಿದ ಈ ಶುಭಸಮಯದಲ್ಲಿ 'ಪ್ರಬುದ್ಧ ಕರ್ಣಾಟಕ'ವು ಹೃತ್ಪೂರ್ವಕವಾಗಿ ಹಾರೈಸುತ್ತದೆ.

**ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು**

ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿ ಈ ಮಹನೀಯರಿಗೆ ಪ್ರಶಸ್ತಿಗಳನ್ನಿತ್ತಿದೆ:

ಶ್ರೀಗಳಾದ ಜಿ. ಪಿ. ರಾಜರತ್ನಂ, ವಿ. ಸೀ., ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಂ. ಶಿ. ಭೂಸನೂರಮಠ, ಕಯ್ಯಾರ ಕಿಞ್ಞಣ್ಣರೈ, ಮಿರ್ಜಿ ಅಣ್ಣಾರಾಯ ಮತ್ತು ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾವ್. ಸಾಹಿತಿಗಳನ್ನು, ಕಲಾವಿದರನ್ನು ಗೌರವಿಸಿ ಸನ್ಮಾನಿಸುವ ಸತ್ಸಂಪ್ರದಾಯ ನಾಡಿನಲ್ಲಿ ಈಚೆಗೆ ವಿಶೇಷವಾಗಿ ಕೇಡುಬರುತ್ತಿದ್ದು, ಸರ್ಕಾರವೂ ಈ ದಿಶೆಯಲ್ಲಿ ತನ್ನ ಪಾತ್ರವನ್ನು ನಿರ್ವಹಿಸುತ್ತಿರುವುದು ಸ್ತುತ್ಯವಾಗಿದೆ.

ಪ್ರಶಸ್ತಿ ಪಡೆದಿರುವವರೆಲ್ಲ ನಾಡುನುಡಿಗಳಿಗೆ ವಿಶಿಷ್ಟ ಸೇವೆ ಸಲ್ಲಿಸಿರುವವರು. ಶ್ರೀ ಜಿ. ಪಿ. ರಾಜರತ್ನಂ ಅವರು ಹಿರಿಯ ತಲೆಮಾರಿನ ಖ್ಯಾತ ಕವಿಗಳು ಮತ್ತು ಶ್ರೇಷ್ಠ ವಿದ್ವಾಂಸರು. ಅಂತೆಯೇ ಶ್ರೀ ವಿ. ಸೀತಾರಾಮಯ್ಯನವರು ಹೆಸರಾಂತ ಕವಿಗಳು, ಪ್ರಬಂಧಕಾರರು ಮತ್ತು ಪ್ರಬುದ್ಧ ವಿಮರ್ಶಕರು. ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಕನ್ನಡದ ಕೆಲವೇ ಮಂದಿ ಹಾಸ್ಯಸಾಹಿತಿಗಳಲ್ಲೊಬ್ಬರಾಗಿದ್ದು, ತಮ್ಮ ಸುಂದರವಾದ ಪ್ರಬಂಧಗಳಲ್ಲಿ ಗ್ರಾಮಜೀವನವನ್ನು ಅನನ್ಯವಾಗಿ ಸೆರೆಹಿಡಿದವರು; ಗೊರೂರು ಮತ್ತು ಹೇಮಾವತೀ ನದಿ ಅವರಿಂದ ಅಮರವಾದುವು. ಶ್ರೀ ಭೂಸನೂರಮಠ ಅವರದು ವಚನಸಾಹಿತ್ಯ ಸಂಪಾದನ, ವಿಮರ್ಶನಗಳಲ್ಲಿ ಗಣ್ಯವಾದ ಹೆಸರು; ಅವರ 'ಶೂನ್ಯಸಂಪಾದನೆಯ ಪರಾಮರ್ಶೆ' ಎಲ್ಲರ ಲಕ್ಷ್ಯವನ್ನೂ ಸೆಳೆದಿದೆ. ಶ್ರೀ ಕಯ್ಯಾರ ಕಿಞ್ಞಣ್ಣರೈ ಅವರು ಪ್ರಸಿದ್ಧ ಕವಿಗಳು; ಕಾಸರಗೋಡಿನಲ್ಲಿ ಅವರು ಕನ್ನಡದ ಆಧಾರಸ್ತಂಭವಾಗಿದ್ದಾರೆ. ಶ್ರೀ ಮಿರ್ಜಿ ಅಣ್ಣಾರಾಯರು ಹಲವು ಉತ್ತಮ ಕಾದಂಬರಿಗಳ ಸೃಷ್ಟಿಕರ್ತರು; ಅವರ 'ಜೈನಧರ್ಮ'ವೊಂದು ಉದ್ಗ್ರಕೃತಿ. ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾಯರು ಸ್ವಯಂ ಸಾಹಿತಿಗಳಲ್ಲವಾದರೂ, ಗಮಕದ ಮಧುರ ಮಾಧ್ಯಮದ ಮೂಲಕ ಕಾವ್ಯವಾಹಿನಿಯನ್ನು ಜನಸಮಷ್ಟಿಯ ಕಿವಿ, ಹೃದಯಗಳಿಗೆ ಮುಟ್ಟಿಸುವಲ್ಲಿ ಅವರದು ಶ್ಲಾಘನೀಯವಾದ ಕೊಡುಗೆ.

ಸನ್ಮಾನಿತರೆಲ್ಲರಿಗೂ ಹಾರ್ದಿಕ ಅಭಿನಂದನೆಗಳು.

# ಸಾದರ ಸ್ವೀಕಾರ

ಸಮಾಜಶಾಸ್ತ್ರ ಪರಿಚಯ, ಲೇ: ಕೆ. ಚಂದ್ರಶೇಖರಯ್ಯ ಮತ್ತಿತರರು; ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟ: ೧೫೬; ಬೆಲೆ: ರೂ. ೩-೦೦.

ಮಾನವಶಾಸ್ತ್ರ ಪರಿಚಯ, ಲೇ: ಎಲ್. ಎಸ್. ಐನಾಪೂರ; ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟ: ೧೭೨; ಬೆಲೆ: ರೂ. ೩-೦೦.

ಗೀತರಾಮಾಯಣ, ಮೂಲ: ಮಾಡಗೂಳಕರ, ಅನು: ಶ್ರೀನಿವಾಸ ತೋಫಖಾನೆ; ಪ್ರ: ಗೀತಭಾರತಿ ಪ್ರಕಾಶನ, ಹುಬ್ಬಳ್ಳಿ; ಪುಟ; ೧೬೦; ಬೆಲೆ: ರೂ. ೪-೦೦.

ಮಂಗಳಗಂಗೆ (ವಿದ್ಯಾರ್ಥಿ ಕವನ ಸಂಕಲನ): ಸಂ: ಎಚ್. ಜೆ. ಲಕ್ಕಪ್ಪಗೌಡ, ಗುಂಡ್ಮಿ ಚಂದ್ರಶೇಖರ ಐತಾಳ; ಪ್ರ: ಕನ್ನಡ ಸಂಘ, ಮಂಗಳಗಂಗೋತ್ರಿ, ಮಂಗಳೂರು: ಪುಟ: ೫೮; ಬೆಲೆ: ರೂ. ೨-೦೦.

ಮಂಥಾನ (ಸ್ವತಂತ್ರ ಗಾದೆಗಳು), ಲೇ: ಎಸ್. ವಿ. ಪರಮೇಶ್ವರಭಟ್ಟ; ಪ್ರ ರತ್ನಾಕರ ಪ್ರಕಾಶನ, ಮಂಗಳೂರು ೩; ಪುಟ: ೧೦೦; ಬೆಲೆ: ರೂ. ೨-೫೦.

ಗಂಗಾಸಲಿಲ (ಕವನಸಂಕಲನ), ಕವಿ: ಎಸ್. ಶಂಕರನಾರಾಯಣಭಟ್ಟ; ಪ್ರ: ಮಾನಸ ಪ್ರಕಾಶನ, ಹಾತೂರು-ಕೊಡಗು; ಪುಟ: ೬೨; ಬೆಲೆ: ರೂ. ೧-೭೫ (೨-೭೫).

ಇದು ಹರಿವ ನೀರು (ಕವನ ಸಂಕಲನ), ಕವಿ: ಗಂಗಾಧರ ಚಿತ್ತಾಲ; ಪ್ರ: ಪೊಪ್ಯುಲರ್ ಪ್ರಕಾಶನ, ಮುಂಬಯಿ, ೩೪; ಪುಟ: ೬೪+೨೩; ಬೆಲೆ: ರೂ. ೫-೦೦ (೮-೦೦)

ಪಾಶ್ಚಾತ್ಯ ಕಾವ್ಯಚಿಂತನ (ಕವಿ-ಕಾವ್ಯಮೀಮಾಂಸೆ), ಅನು: ಸಿ. ಪಿ. ಕೆ.; ಪ್ರ: ಗೀತಾ ಬುಕ್ ಹೌಸ್, ಮೈಸೂರು; ಪುಟ: ೨೦೮; ಬೆಲೆ: ರೂ. ೧೫-೦೦.

ರೈಲು ಸತ್ಯಾಗ್ರಹ (ಏಕಾಂಕ), ಲೇ: ಜಿ. ಜಿ. 'ಹರಿಜಿತ್'; ಪ್ರ: ಭುವನಭಾರತಿ ಪ್ರಕಾಶನ, ಬೆಂಗಳೂರು; ಪುಟ: ೪೦; ಬೆಲೆ: ರೂ. ೧-೨೫.

ಶ್ರೀರಂಗಯಾತ್ರೆ (ಪ್ರವಾಸ ಕಥನ), ಲೇ: ಶ್ರೀರಂಗ; ಪ್ರ: ಉಷಾ ಸಾಹಿತ್ಯಮಾಲೆ, ಮೈಸೂರು ೧; ಪುಟ: ೬೬; ಬೆಲೆ: ರೂ. ೧-೨೫ (೨-೫೦).

ಪ್ರಸಾದವಾಣಿ (ಸೂಕ್ತಿಗಳು), ಸಂ; ಸಂಗಯ್ಯ ಡಿ. ಸವದತ್ತಿಮಠ; ಪ್ರ: ಸಂಗಮೇಶ ಪ್ರಕಾಶನ, ಮುರಗೋಡ; ಪುಟ: ೨೬; ಬೆಲೆ: ರೂ. ೧-೦೦.

ಆತ್ಮಕಥನ, ಲೇ: 'ನೊಂದ ಜೀವಿ'; ಪ್ರ: ಷ. ಬ್ರ. ಸಿದ್ಧರಾಮ ಸ್ವಾಮಿಗಳು, ಹೂಲಿಕಂಥ ಸಂಸ್ಥಾನ, ಹಿರೇಮಠ, ಯಲಬುರ್ಗಾ; ಪುಟ: ೧೦; ಬೆಲೆ: ?

ಶ್ರೀ ಸಿದ್ಧರಾಮೇಶ್ವರ ನವಸುಪ್ರಭಾತ, ಲೇ: 'ಸಿಹಿ'; ಪ್ರ: ಹೂಲಿಕಂಥ ಸಂಸ್ಥಾನ; ಹಿರೇಮಠ, ಯಲಬುರ್ಗಿ, ಪುಟ: ೧೪; ಬೆಲೆ: ?

ಪಕ್ಷೀ-ತೀರ್ಥ (ಕವನ ಸಂಗ್ರಹ): ಕವಿ: ಕೆ. ಮಹೇಶ್; ಪ್ರ: ಹಂಸಧ್ವನಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು ೧೦; ಪುಟ: ೪೫; ಬೆಲೆ: ರೂ. ೧-೦೦.

ಬಾಳು ಬಂಗಾರ (ಲಲಿತ ಪ್ರಬಂಧಗಳು): ಲೇ: ಎಸ್. ಎಸ್. ವೇಣುಗೋಪಾಲರಾವ್, ಪ್ರ: ಸುಜಾತ ಸಾಹಿತ್ಯ, 1374/B, 1 ಕ್ರಾಸ್, ಜಯನಗರ, ಶಿವಮೊಗ್ಗ; ಪುಟ: ೮೨; ಬೆಲೆ: ರೂ. ೧-೫೦.

ವಿನಾಯಕ ಕೃಷ್ಣ ಗೋಕಾಕ್ (ಅಭಿನಂದನ ಗ್ರಂಥ), ಸಂ: ರಾಬಾ. ಲಕ್ಷ್ಮೇಶ್ವರ; ಪ್ರ: ಉಷಾ ಸಾಹಿತ್ಯಮಾಲೆ, ಮೈಸೂರು ೧; ಪುಟ: ೧೨೦; ಬೆಲೆ: ರೂ. ೫ (೮-೦೦).

ಕಾಲಿದಾಸ (ವಿಮರ್ಶೆ), ಲೇ: ಆದ್ಯ ರಂಗಾಚಾರ್ಯ; ಪ್ರ: ಉಷಾ ಸಾಹಿತ್ಯಮಾಲೆ, ಮೈಸೂರು; ಪುಟ: ೧೯೨; ಬೆಲೆ: ರೂ. ೮-೦೦ (೧೦-೦೦).

ಸಂಸ್ಕೃತ ಗದ್ಯ-ಪದ್ಯಪ್ರವೇಶ (ಪಠ್ಯಪುಸ್ತಕ), ಸಂ: ಕೆ. ಕೃಷ್ಣಮೂರ್ತಿ, ಡಿ. ಎನ್. ಶಾನಭಾಗ; ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟ: ೯೮+೨೪; ಬೆಲೆ: ರೂ. ೨.೫೦.

ಸಹಜಮಾರ್ಗದ ಹತ್ತು ನಿಯಮಗಳ ವ್ಯಾಖ್ಯಾನ (ಯೋಗ ವಿಚಾರ), ಮೂಲ: ಶ್ರೀರಾಮಚಂದ್ರ; ಅನು: ಶ್ರೀ ಶ್ರೀ ಅ. ಸರ್ನಾಡ; ಪ್ರ: ಶ್ರೀ ರಾಮಚಂದ್ರ ಮಿಶನ್, ಪ್ರಕಾಶನ ವಿಭಾಗ, ಷಾಹಜಹಾನ್ ಪೂರ್ (ಉ. ಪ್ರ); ಪುಟ: ೬೪; ಬೆಲೆ: ರೂ. ೪-೦೦.

ದೀವಿಗೆ (ಕವನ ಸಂಕಲನ), ಕವಿ: ಜಿ. ಎಸ್. ಅನ್ನದಾನಿ; ಪ್ರ: ಮಿತ್ರಭಾರತೀ ಪ್ರಕಾಶನ ಸಮಿತಿ, ವಿಜಾಪುರ; ಪುಟ: ೫೪; ಬೆಲೆ: ರೂ. ೨-೦೦.

ಗೃಹಭಂಗ (ಕಾದಂಬರಿ): ಲೇ: ಎಸ್. ಎಲ್. ಭೈರಪ್ಪ; ಪ್ರ: ಸಾಹಿತ್ಯಭಂಡಾರ, ಕೊಪ್ಪೀಕರ್ ಬೀದಿ, ಹುಬ್ಬಳ್ಳಿ-೨೦; ಪುಟ: ೫೧೮; ಬೆಲೆ: ರೂ. ೧೧-೦೦ (೧೬-೦೦).

ಭಾಷಣಗಳು: ಲೇ: ಎಸ್. ವಿ. ಪರಮೇಶ್ವರಭಟ್ಟ; ಪ್ರ: ಉಷಾಸಾಹಿತ್ಯಮಾಲೆ, ಮೈಸೂರು; ಪುಟ: ೯೪; ಬೆಲೆ: ರೂ. ४-೦೦.

ಇಬ್ಬನಿ (ಗಾದೆಗಳು), ಲೇ: ಎಚ್. ಜಿ. ಲಕ್ಕಪ್ಪಗೌಡ; ಪ್ರ: ಕನ್ನಡ ಸಂಘ, ಮಂಗಳ ಗಂಗೋತ್ರಿ, ಮಂಗಳೂರು; ಪುಟ ೭೪; ಬೆಲೆ: ರೂ. ४-೦೦ (೬-೦೦).

## ಅಕ್ಷರ ಪ್ರಕಾಶನ, ಸಾಗರ—ಇವರ ಪ್ರಕಟನೆಗಳು:

ಗೋರ್ಕಿಯ ಕಥೆಗಳು, ಅನು; ಕೆ. ವಿ. ಸುಬ್ಬಣ್ಣ; ಪುಟ: ೯೩; ಬೆಲೆ: ರೂ. ೨-೦೦.

ದ್ರಷ್ಟ್ರು (ಕತೆಗಳು): ಲೇ: ಆರ್ಯ; ಪುಟ: ೧೦೬; ಬೆಲೆ: ರೂ. ೫-೦೦.

ನಾನಲ್ಲ; (ಕತೆಗಳು), ಲೇ; ಪಿ. ಲಂಕೇಶ್; ಪುಟ: ೧೧೬; ಬೆಲೆ; ರೂ. ೫-೦೦,

ಸಂಜೆ ಐದರ ಮಳೆ (ಕವನಗಳು), ಕವಿ: ಕೆ. ಎಸ್. ನಿಸಾರ್ ಅಹಮದ್; ಪುಟ: ೬೪; ಬೆಲೆ: ರೂ. ೪–೦೦.

ತಕರಾರಿನವರು (ಕವನಗಳು), ಕವಿ: ಚಂದ್ರಶೇಖರ ಕಂಬಾರ; ಪುಟ: ೫೬; ಬೆಲೆ: ರೂ. ೪–೦೦.

* * * *

ಮಹಾಕಾವ್ಯ ಲಕ್ಷಣ (ವಿಚಾರ), ಲೇ: ಟಿ. ವಿ. ವೆಂಕಟಾಚಲಶಾಸ್ತ್ರೀ: ಪ್ರ: ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು–೪; ಪುಟ: ೧೧೫+xix; : ಬೆಲೆ: ರೂ. ६–೦೦ (೭–೦೦).



MUPM–WO 8144–2,500+25—5-12-70